# ಪ್ರಕಾಶಕರ ಮಾತು

'ದುಂಬಿಯ ಕನಸು' ಕನ್ನಡಿಗರಿಗೆ ಚಿರಪರಿಚಿತರಾದ ಕನ್ನಡ ಸಣ್ಣ ಕತೆಗಾರರಾದ ಶ್ರೀ ಹರಳಾಲೆ ಅನಂತಭಟ್ಟರ ಚೊಚ್ಚಲು ಕಾದಂಬರಿ. ಶ್ರೀ ಎಚ್. ಎ. ಭಟ್ಟರ 'ಜರತಾರಿ ಕುಪ್ಪಸ' ಕಥಾಸಂಕಲನವನ್ನು ನಮ್ಮ ಪುಸ್ತಕ ಮಾಲೆಯಲ್ಲಿ ೨ ವರ್ಷದ ಹಿಂದೆ ಪ್ರಕಟಿಸಿದ್ದೆವು. ಅದನ್ನು ಸಹೃದಯ ಕನ್ನಡಿಗರು ತುಂಬ ಆದರ ವಿಶ್ವಾಸಗಳಿಂದ ಆಹ್ವಾನಿಸಿದರು. ಈ ಕಾದಂಬರಿ ಅವರ ಪ್ರಥಮ ಪ್ರಯತ್ನದ ಫಲವಾದರೂ ಕಥಾವಸ್ತು ಬಹಳ ಶ್ಲಾಘನೀಯವಾಗಿದೆ. ಕಾದಂಬರಿ ಯಲ್ಲಿಯ ಸನ್ನಿವೇಶಗಳು ಕಣ್ಣೀರು ಮಿಡಿಸುತ್ತವೆ. ಕಾದಂಬರಿಕಾರರು ಜೀವನ ದಲ್ಲಿನ ಘಟನೆಗಳ ನಗ್ನ ಸತ್ಯವನ್ನು ಸುಸ್ಪಷ್ಟವಾಗಿ ಮೂಡಿಸಿದ್ದಾರೆ. ಈ ಕರುಳು ಕಿವಿಚುವ ಕಾದಂಬರಿಯನ್ನು ಕನ್ನಡಿಗರು ಮೆಚ್ಚಿಕೊಳ್ಳುವರೆಂಬುದರಲ್ಲಿ ಸಂದೇಹವಿಲ್ಲ.

ಬೆಂಗಳೂರು,
೧೫-೬-೪೯

**ಹಾ. ಶ್ರೀ. ದೊರೆಸ್ವಾಮಿ,**
ಪ್ರಕಾಶಕ.

# ದುಂಬಿಯ ಕನಸು

## [೧]

ರಂಗಣ್ಣ ನೀರಿನಲ್ಲಿ ಕಾಲುಚಾಚಿ ಮಲಗಿದ್ದ. ತಲೆದಿಂಬಿಗೆ ಒಂದು ಕಲ್ಲಿತ್ತು ದ್ದಿತು. ನೀರು ಬೆಚ್ಚಗೆ ಹಿತವಾಗಿತ್ತು. ದೂರದ ದೇವಾಲಯಗಳಿಂದ ಘಂಟಾ ನಾದ ಗಾಳಿಯಲ್ಲಿ ಅಲೆಯಲೆಯಾಗಿ ತೇಲಿಬರುತ್ತಿತ್ತು. ಸೂರ್ಯ ಪಕ್ಕದ ಗುಡ್ಡದ ಮಗ್ಗುಲಿನಿಂದ ಇಣಿಕಿ ನೋಡುತ್ತಿದ್ದ. ವಾತಾವರಣದಲ್ಲಿಯೇ ಏನೋ ಒಂದು ಸೊಗಸಿತ್ತು. ರಂಗಣ್ಣನ ಮನಸ್ಸು ಎಲ್ಲಾ ಯೋಚನೆಗಳಿಂದ ವಿಮುಖವಾಗಿತ್ತು. ಹಾಗಿದ್ದರೂ ಏನೋ ಒಂದು ಸುಖಾನುಭವ ಮಾತ್ರ ಆಗುತ್ತಿತ್ತು. ಅವನು ವೈಮರೆತ್ತಿದ್ದದ್ದರಿಂದ ಅವನಿಗೆ 'ಸ್ವಲ್ಪ ಬಟ್ಟೆ ತೆಗೆದು ಆಕಡೆ ಇಟ್ಟುಕೊಂಡು ಕಲ್ಲುಬಿಟ್ಟುಕೊಡ್ತೀರಾ?' ಎಂಬ ಆ ಹುಡುಗಿಯ ಮೆಲುದನಿ ಕೇಳಿಸಲಿಲ್ಲ.

ಹುಡುಗಿ ಸ್ವಲ್ಪ ಗಟ್ಟಿಯಾಗಿ ಇನ್ನೊಮ್ಮೆ ಕೇಳಿದಳು. ರಂಗಣ್ಣ ಎಚ್ಚೆತ್ತು ಆ ಮಧುರವಾದ ಧ್ವನಿಬಂದ ದಿಕ್ಕನ್ನು ನೋಡಿದ. ಹತ್ತುವರ್ಷದ ಹುಡುಗಿ ಯೊಬ್ಬಳು ನೆನೆಯಿಸಿದ ಬಟ್ಟೆಗಳನ್ನು ಕೈಯಲ್ಲಿ ಹಿಡಿದು ನಿಂತಿದ್ದಳು. ರಂಗಣ್ಣ ಒಂದು ಕ್ಷಣ ಆಪಾದಮಸ್ತಕವಾಗಿ ಆ ಹುಡುಗಿಯನ್ನು ನೋಡಿದ. ನೋಡಿದ ಕ್ಷಣದಲ್ಲಿಯೇ ಅವಳು ಅತ್ಯಂತ ಚಲುವೆಯೆಂಬುದು ಖಚಿತವಾಯಿತು. ಆ ಹೊಂಬಣ್ಣದ ದೇಹಕಾಂತಿ, ಆ ತುಂಬಿದ ಅವಯವಗಳು, ನೀಳವಾದ ಕೇಶರಾಶಿ, ಕೋಮಲವೆಂದು ನೋಟಮಾತ್ರದಿಂದಲೇ ಹೇಳಬಹುದಾದ ಕೈಗಳು, ದುಂಡನೆಯ ಮುಖ, ಮಾಟವಾದ ಮೂಗು, ಆ ಬೊಗಸೆಗಣ್ಣುಗಳು, ಆ ಒಂದು ಕ್ಷಣದಲ್ಲಿಯೇ ರಂಗಣ್ಣನ ಮನಸ್ಸನ್ನು ಸೂರೆಗೈದುಬಿಟ್ಟುವು.

ತಾನು ಕೇಳಿದ್ದಕ್ಕೆ ಉತ್ತರಕೊಡದೆ ತನ್ನನ್ನು ನಟ್ಟ ದೃಷ್ಟಿಯಿಂದ ನೋಡುವ ರಂಗಣ್ಣನನ್ನು ನೋಡಿ ಆ ಹುಡುಗಿ ತುಸು ನಾಚಿದಳು. ಮುಖ ಕೆಂಪೇರಿತು. ರಂಗಣ್ಣ ಕೂಡಲೇ ಎದ್ದು ಬಟ್ಟೆಗಳನ್ನು ತೆಗೆದು ದಡದ ಕಲ್ಲುಗಳ ಮೇಲಿಟ್ಟ. ಹುಡುಗಿ ಬಟ್ಟೆಗಳಿಗೆ ಸೋಪು ಹಚ್ಚತೊಡಗಿದಳು. ರಂಗಣ್ಣ ಮೊದಲಿನ ಸ್ಥಳ ದಲ್ಲಿಯೇ ಮಲಗಿಕೊಂಡ. ದೃಷ್ಟಿಮಾತ್ರ ಆಗತಾನೆ ನೋಡಿದ ಸೌಂದರ್ಯರಾಶಿ ಯಲ್ಲಿ ನೆಟ್ಟುಹೋಗಿತ್ತು. ಹುಡುಗಿ ಬಟ್ಟೆಯನ್ನು ಕೈಯಲ್ಲಿ ತೆಗೆದುಕೊಂಡು

ಸುತ್ತಲೂ ನೋಡಿದಳು ನೋಡಿ ಅತಿ ಮೃದುವಾದ ಧ್ವನಿಯಲ್ಲಿ 'ಬಟ್ಟೆ ನೀರು ಸಿಡಿಯುತ್ತೆ' ಎಂದಳು. ಆ ಹುಡುಗಿಯ ದೂರಾಲೋಚನೆ ನೋಡಿ ರಂಗಣ್ಣ ಬೆರಗಾದ. ಆಗ ಅವನ ಮನಸ್ಸಿನ ಮುಂದೆ ಬೆಂಗಳೂರಲ್ಲಿ ನಡೆದ ಘಟನೆಯೊಂದು ಹಾದು ಹೋಯಿತು. ಚಿತ್ರಮಂದಿರದಲ್ಲಿ ಅವನೂ ಗೆಳೆಯ ಸೂರ್ಯನಾರಾಯಣನೂ ಕುಳಿತಿದ್ದಾಗ ಮೇಲಿನಿಂದ ಏನೋ ನೀರು ಹನಿತಂತಾಯಿತು. ಅವರು ಮೇಲೆ ನೋಡುವುದಕ್ಕೂ ಸುಂದರಿಯೊಬ್ಬಳು ಮುಖವನ್ನು ಹಿಂದೆಳೆದುಕೊಳ್ಳುವುದಕ್ಕೂ ಸರಿಹೋಯಿತು. ನೋಟವನ್ನು ಕೆಳಗಿಳಿಸಿದಾಗ ತನ್ನ ಅಚ್ಚ ಬಿಳಿಯ ಬಟ್ಟೆಗಳ ಮೇಲೆ ರಕ್ತವರ್ಣದ ಚುಕ್ಕೆಗಳು ಮೂಡಿದ್ದುದು ಗೋಚರವಾಯಿತು. ತಂಬುಲವನ್ನುಗಿದ ಹೆಂಗಸಿನ ಅಸಭ್ಯವರ್ತನೆಯನ್ನು ಚಿತ್ರಮಂದಿರದ ವ್ಯವಸ್ಥಾಪಕರಿಗೆ ತಿಳಿಸಿ ಗಲಾಟೆಮಾಡಿದ್ದೇನೋ ಆಯಿತು. ಅದೇ ಈ ಎಳೆಹುಡುಗಿ ಎಷ್ಟು ಸೂಕ್ಷ್ಮ ಬುದ್ಧಿಯುವಳು!

'ಪರವಾಯಿಲ್ಲ. ಹೇಗೂ ಸ್ನಾನಮಾಡುತ್ತೇನೆ' ಎಂದ ರಂಗಣ್ಣ. ಅದರಿಂದ ಹುಡುಗಿ ಸಮಾಧಾನಹೊಂದಲಿಲ್ಲ. ಬಟ್ಟೆ ಕೈಯಲ್ಲಿದ್ದಂತೆಯೇ ನಿಂತುಬಿಟ್ಟಳು. ಅವಳ ನೋಟದಲ್ಲಿ 'ನೀವಲ್ಲಿಂದ ಏಳಬಾರದೇ? ನೀವು ಆಶ್ವಾಸನವನ್ನಿತ್ತರೂ ನಿಮ್ಮ ಮೈಗೆ ನೀರು ಸಿಡಿಯುವಂತೆ ನಾನು ಬಟ್ಟೆ ಒಗೆಯಲಾರೆ' ಎನ್ನುವ ಭಾವನೆ ವ್ಯಕ್ತವಾಗುತ್ತಿತ್ತು. ಆ ಹುಡುಗಿ ಸದ್ವಂಶೀಯಳಾಗಿ, ಸದ್ವ್ಯವಹಾರದಲ್ಲಿ ತಿದ್ದಿ ಬಂದವಳಾಗಿರಬೇಕು. ಅಂತಹವಳು ಹೇಗೆ ತಾನೇ ತನ್ನ ಬಟ್ಟೆಯ ನೀರನ್ನು ತಿಳಿದೂ ತಿಳಿದೂ ಒಬ್ಬ ಆಗಂತುಕನ ಮೇಲೆ ಬೀಳಿಸಿಯಾಳು!' ರಂಗಣ್ಣ ಅಲ್ಲಿಂದೆದ್ದು ನಿಂತ. ಅಂತಹ ಜಾಗ ಬೇರೆ ಇರಲಿಲ್ಲ. ತಳದಲ್ಲಿ ನೀರಿನ ಘರ್ಷಣೆಯಿಂದ ದುಂಡಾದ ಶುಭ್ರವಾದ ಉಂಡೆಗಲ್ಲುಗಳು. ಆಳ ಹೆಚ್ಚೂ ಇಲ್ಲ. ಕಡಮೆಯೂ ಇಲ್ಲ. ಉಳಿದವರು ದೂರದಲ್ಲಿ ಈಜುತ್ತ, ಎತ್ತರದ ಬಂಡೆಯಿಂದ ನೀರಿಗೆ ಧುಮುಕುತ್ತಾ, ನೀರಿನೊಳಗೇ ಸರಿದು ಹೋಗಿ ಒಬ್ಬರೊಬ್ಬರ ಕಾಲನ್ನೆಳೆದು ಹುಡುಗಾಟಮಾಡುತ್ತಾ, ಗಲಾಟೆಮಾಡುತ್ತಿದ್ದರು. ರಂಗಣ್ಣನಿಗೆ ಅವರ ಜೊತೆ ಸೇರಲು ಇಷ್ಟವಿರಲಿಲ್ಲ. ಆದ್ದರಿಂದ ಎದ್ದು ಮೈ ಒರೆಸಿಕೊಂಡ. ಹುಡುಗಿ ಅವನ ಕಡೆ ಒಂದು ಕೃತಜ್ಞತೆಯ ದೃಷ್ಟಿಬೀರಿ ತನ್ನ ಕೆಲಸದಲ್ಲಿ ತೊಡಗಿದಳು.

ಒಣಗಿದ ಬಟ್ಟೆಯುಟ್ಟುಕೊಂಡು ರಂಗಣ್ಣ ತನ್ನ ಜೊತೆಗಾರರಿಗೆ ಕಾಯುತ್ತ ಮರಳ ಮೇಲೆ ಸ್ವಲ್ಪ ದೂರದಲ್ಲಿ ಕುಳಿತ. ಅವನ ಕಣ್ಣುಗಳು ಆ ಹುಡುಗಿಯಲ್ಲಿ ನೆರೆಯಾಗಿಬಿಟ್ಟಿದ್ದುವು. ಹುಡುಗಿ ತೆಳ್ಳಗಿನ ಸೀರೆಯನ್ನುಟ್ಟಿದ್ದಳು. ಒಂದು ಕಾಲು

ನೀರಲ್ಲಿಟ್ಟು ಒಂದು ಕಾಲು ಕಲ್ಲಮೇಲಿಟ್ಟು ಬಟ್ಟೆ ಒಗೆಯುವ ಆ ಭಂಗಿಯು ಮೋಹಕವಾಗಿತ್ತು ಹೆಣ್ಣು ಇನ್ನೂ ಬಾಲ್ಯಾವಸ್ಥೆಯನ್ನು ಮೀರದಿರುವಾಗ ಒಂದು ಮಾಧುರ್ಯವಿರುತ್ತದೆ. ಆಗಿನ್ನೂ ಆಕೆಯ ಸೌಂದರ್ಯಕ್ಕೆ ಕಾಮದ ಮೆರಗು ಬಂದಿರುವುದಿಲ್ಲ. ಆ ಹುಡುಗಿಯನ್ನು ನೋಡಿದಷ್ಟೂ ನೋಡಬೇಕೆನ್ನಿಸುತ್ತಿತ್ತು. ಜೊತೆಗೆ ಆ ಸುಂದರವಾದ ವಾತಾವರಣ. ತಿರುಗಿ ತಿರುಗಿ ಹರಿಯುವ ನದಿ. ನದಿಯಾಚೆ ಸಣ್ಣ ಕಾಡು. ದೂರದಲ್ಲಿ ಹಲವಾರು ದೇವಸ್ಥಾನಗಳು. ಈಕಡೆ ವಿಶಾಲವಾದ ಸೈಕತರಾಶಿ, ಅದರಾಚೆ ಗುಡ್ಡದ ಮಗ್ಗುಲಿನಿಂದ ಇಣಿಕಿನೋಡುವ ಸೂರ್ಯನ ಕಿರಣಗಳಲ್ಲಿ ಮಿಂದು ನಿಂತಿರುವ ಊರು. ತಾನೊಬ್ಬ ಚಿತ್ರಕಾರನಾಗಿದ್ದರೆ! ಎನ್ನಿಸಿತು ಅವನಿಗೆ. ಆಗದಿದ್ದರೇನಂತೆ? ಅಂತಹ ಒಂದು ದೃಶ್ಯ ಸುಲಭವಾಗಿ ಮನಸ್ಸಿನಿಂದ ಅಳಿದುಹೋದೀತೇನು?

ಗೆಳೆಯರು ಬಂದು ಸೇರಿದ ಮೇಲೆ ಮನಸ್ಸಿಲ್ಲದ ಮನಸ್ಸಿನಿಂದ ತಿರುಗಿ ತಿರುಗಿ ನೋಡುತ್ತಾ ಅವನಲ್ಲಿಂದಹೊರಟುಹೋದ. ಆ ಹುಡುಗಿ ಯಾರು ಎಂದು ತಿಳಿಯಲು ಅವನಿಗೆ ಕುತೂಹಲ. ಆದರೆ ಯಾರನ್ನು ಕೇಳುವುದು? ಶೃಂಗೇರಿ ಅಂತಹ ದೊಡ್ಡ ಊರೇನೂ ಅಲ್ಲ. ಆ ಹುಡುಗಿಯನ್ನು ಇನ್ನೊಂದು ಸಾರೆ ನೋಡದೆ ಹೋಗುವುದಿಲ್ಲ ಎಂದುಕೊಂಡ ರಂಗಣ್ಣ.

[೨]

'ಬರಲಿ, ಧೊರೆ ಹೊರಗೆ' ಎನ್ನುತ್ತಾ ಬಂದರು ರಾಮಯ್ಯನವರು. ರಾಮಯ್ಯನವರಿಗೆ ಚದುರಂಗ ಎಂದರೆ ಪ್ರಾಣ. ಕೊನೆಗೆ ಯಾರೂ ಸಿಕ್ಕದಿದ್ದರೆ ಒಂದು ಮಗುವನ್ನಾದರೂ ಎದುರಿಗೆ ಕೂರಿಸಿಕೊಂಡು ಎರಡು ಆಟವನ್ನೂ ತಾವೇ ಆಡಬೇಕು, ಇಲ್ಲದಿದ್ದರೆ ಅವರಿಗೆ ರಾತ್ರಿ ನಿದ್ರೆಹತ್ತಲೊಲ್ಲದು. ಚಂದ್ರಶೇಖರನಿಗೆ ಚದುರಂಗ ಎಂದರೆ ಎಲ್ಲಿಲ್ಲದ ಬೇಜಾರು. ಆದರೆ ರಾಮಯ್ಯ ಬಿಡಲೊಲ್ಲರು. 'ರಂಗಣ್ಣ ಆಡ್ತಾನೆ ನಿಮ್ಮ ಜೊತೆಗೆ' ಎಂದು ಮೆಲ್ಲಗೆಜಾರಿಕೊಂಡ ಚಂದ್ರಶೇಖರ. ರಂಗಣ್ಣ ಸಿಕ್ಕಿಬಿದ್ದ. 'ನಾನು ಒಂದಾಟದ ಮೇಲೆ ಆಡೊಲ್ಲ' ಎಂದು ಷರತ್ತು ಹಾಕಿದ ರಂಗಣ್ಣ. ಚದುರಂಗದ ಆಟದ ಪ್ರಾರಂಭದಲ್ಲಿ ಮಾತ್ರ ಇಬ್ಬರು. ಆಮೇಲೆ ಆವರಿಬ್ಬರು ನೆಪಕ್ಕೆ ಮಾತ್ರ. ಆಟ ನೋಡುತ್ತಕುಳಿತವರದು.

'ಲೋ ರಂಗಣ್ಣ, ಕುದುರೆ ಲಾಯದಲ್ಲೇ ಮುಪ್ಪಾಗುತ್ತಲ್ಲೋ ಹೊರ ಹೊರಡಿಸೋ'

' ಲೋ ರಂಗಣ್ಣ, ಆನೇನ ಮುಂದೆ ನುಗ್ಗಿಸೋ '

' ಸ್ವಲ್ಪತಾಳು ಅದಲ್ಲ ಆಟ, ಧೊರೆಗೆ ಷಹ ಕೊಟ್ಟರೆ ಆ ಪ್ಯಾದೇಗೆ ದೇವರೇ ಗತಿ .' ಮೊದಲು ಸಲಹೆಗಾರರಾಗಿದ್ದವರು ತಾವೇ ಕಾಯಿನಡೆಸಲು ಮೊದಲಿಟ್ಟರು. ರಂಗಣ್ಣ ಅದೇ ಸಮಯ ಕಾದಿದ್ದು ಮೆಲ್ಲನೆ ಎದ್ದ. ಆಗ ಜಗುಲಿಯ ಇನ್ನೊಂದು ಮೂಲೆಯಲ್ಲಿ ಎಲೆಯಡಿಕೆ ಜಗಿಯುತ್ತ ಕುಳಿತ ಮುದುಕರೊಬ್ಬರು ' ಏನಯ್ಯಾ ರಂಗಣ್ಣ ' ಎಂದು ಕರೆದರು. ರಂಗಣ್ಣ ಅಲ್ಲಿಯೇ ನಿಂತ.

' ಏನಯ್ಯ ರಂಗಣ್ಣ, ನನ್ನ ಗುರುತಿದೆಯೆ ?'

' ಇಲ್ಲ ' ಎಂದ ರಂಗಣ್ಣ.

' ನಾನೂ ನಿನಗೆ ಸಂಬಂಧ ಆಗಬೇಕು ಕಣೋ '

ಹೌದೇನು ? ಕ್ಷಮಿಸಿ. ನನಗೆ ಊರುಬಿಟ್ಟು ಹೊರಗಿದ್ದು ನಮ್ಮವರ ಪರಿಚಯವೇ ಇಲ್ಲ '

' ಹೌದು, ಹೌದು. ರಂಗಣ್ಣ ಆದರೆ, ಸಂಬಂಧೀಕರನೆಲ್ಲಾ ಮರೆಯಬೇಡಪ್ಪ.'

ರಂಗಣ್ಣ ಸುಮ್ಮನಿದ್ದ.

' ನೋಡು, ಆ ಲಾಂದ್ರಕಂಬ ಇದೆಯಲ್ಲ, ಅದರ ಎದುರು ಮನೆಯೇ ನನ್ನದು. ಒಂದು ಸಾರೆ ಬಾರಯ್ಯಾ ' ಎಂದರು ಮುದುಕರು.

' ಅಗತ್ಯವಾಗಿ ' ಎಂದ ರಂಗಣ್ಣ. ಮುದುಕರು ' ನಾಳೆ ಇಷ್ಟು ಹೊತ್ತಿಗೆ ನಿನಗಾಗಿ ಕಾದಿರ್ತೇನೆ ಮರೆಯಬೇಡ ' ಎಂದರು. ಮನಸ್ಸಿಲ್ಲದಿದ್ದರೂ ರಂಗಣ್ಣ ದಾಕ್ಷಿಣ್ಯಕ್ಕೆ ಒಪ್ಪಿಕೊಂಡ.

ಅಂದು ರಾತ್ರಿಯೆಲ್ಲಾ ಆ ಹುಡುಗಿ ರಂಗಣ್ಣನ ಮನಸ್ಸನ್ನು ಬಿಟ್ಟು ಹೋಗಲೇ ಇಲ್ಲ. ' ಥೇ ! ಇದೇನಿದು ಆ ಒಂದು ಹುಡುಗಿಯ ವಿಷಯವಾಗಿ ಇಷ್ಟು ಯೋಚಿಸುತ್ತಿದ್ದೇನಲ್ಲಾ ' ಎಂದು ಅವನಿಗೇ ನಾಚಿಕೆ. ಆದರೆ ಕಣ್ಣು ಮುಚ್ಚಿದರೆ ಅದೇ ಚಿತ್ರ ಕಣ್ಣಮುಂದೆ. ಅವಳಂತಹ ರೂಪವತಿಯೇ ? ಹೇಳಲು ಬರದು. ಅವಳೆಂತಹ ರೂಪವತಿಯಾಗುವಳೆಂದು ಊಹಿಸಲು ಬರುವುದೇ ಹೊರತು ಈಗಲೇ ಅವಳ ರೂಪರಾಶಿಯ ಪರಿಮಿತಿಯನ್ನು ನಿಷ್ಕರ್ಷಿಸಲು ಬರುವುದಿಲ್ಲ. ಹಾಗಿದ್ದರೆ ಈಗ ಸುಂದರಿಯಲ್ಲವೆ? ಅಲ್ಲವೇನು ಆ ಆಕರ್ಷಣೆ ತಾನು

ಯಾವ ಹುಡುಗಿಯರಲ್ಲಿಯೂ ಕಂಡಿರಲಿಲ್ಲ. ಬೆಂಗಳೂರಲ್ಲಿ ಇಂತಹವರು ಅನೇಕ ಇರಬೇಕು. ಆದರೆ ಯಾರಾದರೂ ಈಕೆಯ ಸಾಟಿಗೆ ಬಂದಾರೇನು? ಹೆಣ್ಣಿನ ಸೌಂದರ್ಯ ಬರಿಯ ಮುಖಲಕ್ಷಣದಲ್ಲಿ ಮಾತ್ರ ಎಂದು ಹೇಳುವುದಾದರೆ ಅಲ್ಲಿ ಅನೇಕರು ರೂಪವತಿಯರಿದ್ದಾರೆ. ಬಿದಿರು ಗಳದಂತಿರುವ ಕೈಕಾಲುಗಳು, ಅದ ಕ್ಕೊಂದು ಸುಂದರವಾದ ಮುಖ ಸೇರಿಸಿದರೆ ಸುಂದರಿಯಾದಾಳೆ? ಈ ಹುಡುಗಿ;- ಈಕೆಯ ಪ್ರತಿಯೊಂದು ಅವಯವವೂ ರೂಪವನ್ನು ಅನುಪಮ ಸೌಂದರ್ಯವನ್ನು ಹಿಡಿಸಲಾರದೇ ಹೊರಚೆಲ್ಲುತ್ತಿತ್ತು. ಇಷ್ಟಕ್ಕೂ ರೂಪಕ್ಕೂ ಮಿಗಿಲಾದದ್ದು ಒಂದುಂಟು.

ಅಂದು ರಾತ್ರಿ ಮಲಗಿದಾಗ ಸ್ವಪ್ನ. ಸ್ವಪ್ನದಲ್ಲಿ ರಂಗಣ್ಣ ದಣಿದು ಬಂದು ಮಲಗಿದ್ದಾನೆ. ಮೈಯಲ್ಲಿ ಜ್ವರ ಕೆಂಡದಂತೆ ಕಾದಿದೆ. ಪ್ರಜ್ಞೆ, ಅರ್ಧ ತಪ್ಪಿ ಹೋಗಿದೆ. ತನ್ನವರು ಎನ್ನುವರು ಯಾರೂ ಇಲ್ಲ. ಇನ್ನು ತನಗೆ ಸಾವೇ ಬಿಡುಗಡೆ ಎಂದು ಯೋಚಿಸುತ್ತಿದ್ದಾನೆ, ಆಗ ಯಾರೋ ತಲೆಯ ಮೇಲೆ ಮೃದುವಾಗಿ ಕೈ ಯಿಟ್ಟಂತಾಯಿತು. ದ್ರುತಪದದಿಂದ ಹೋಗುತ್ತಿದ್ದ ನಾಡಿ ಸ್ವಸ್ಥ ಸ್ಥಿತಿಕ್ಕೆ ಬಂದಂ ತಾಯಿತು. ತಲೆಯಮೇಲೆ ಹಿಮದ ಚೀಲವಿಟ್ಟಂತಾಯಿತು. ಆ ಒಂದು ಕರ ಸ್ಪರ್ಶದಿಂದ ತನ್ನ ಬೇನೆಯಲ್ಲಿ ಅರ್ಧ ಮಾಯವಾದಂತೆ ಭಾಸವಾಯಿತು. ಆಗ ಅವನು ಕಣ್ಣುಬಿಟ್ಟು ನೋಡಿದ. ಅದೇ ಹುಡುಗಿ ಮರುಕದಿಂದ ಕೂಡಿದ ಪ್ರೇಮ ದೃಷ್ಟಿಯಿಂದ ತನ್ನನ್ನು ನೋಡುತ್ತಿದ್ದಾಳೆ. ಮುಖದಲ್ಲಿ ಅದೇ ಮುಗುಳುನಗೆ, ಹುಡುಗಿ ವೀಣೆಯನ್ನು ನಾಚಿಸುವ ಧ್ವನಿಯಲ್ಲಿ ಹೇಳಿದಳು 'ಬಾ, ಹೋಗೋಣ' ಕ್ಷೀಣಧ್ವನಿಯಲ್ಲಿ ರಂಗಣ್ಣ ಕೇಳಿದ 'ಎಲ್ಲಿಗೆ?'

'ಅದೇಕೆ ನಿನಗೆ? ನಿನ್ನನ್ಯಾರೂ ನೋಡುವವರಿಲ್ಲ. ಬಾ ನನ್ನ ಜೊತೆಗೆ ನಾನು ನಿನ್ನನ್ನು ನೋಡಿಕೊಳ್ಳುತ್ತೇನೆ' ಎಂದು ಕೈಹಿಡಿದು ಎಬ್ಬಿಸಿದಳು. ತಾನೂ ಎದ್ದು ಹೊರಟ. ನಾಲ್ಕು ಹೆಜ್ಜೆ ನಡೆಯುವಷ್ಟರಲ್ಲಿ ತನ್ನ ಜ್ವರ ಮಾಯವಾಯಿತು. ಮುಂದೆ ಅದೆಲ್ಲಿಯೋ ಪ್ರಯಾಣ. ಅದೇನೇನೋ ಮಾತುಕತೆಗಳು.

ಮರುದಿವಸ ಬಟ್ಟೆಹಾಕಿಕೊಂಡು ಹೊರಡುವಾಗ 'ಎಲ್ಲಿಗೆ ಹೊರಟೆ?' ಎಂದು ಅತ್ತಿಗೆ ರಂಗಣ್ಣನನ್ನು ಕೇಳಿದಳು.

'ನಿನ್ನೆ ಇಲ್ಲಿ ಬಂದಿದ್ದರಲ್ಲ ಮುದುಕರು ಅವರ ಮನೆಗೆ ಹೇಳಿಕಳುಹಿಸಿದ್ದಾರೆ ಹುಡುಗನ ಹತ್ತಿರ' ಎಂದ ರಂಗಣ್ಣ.

'ಯಾರು ? ಶ್ರೀನಿವಾಸಯ್ಯನ ಮನೆಗೋ ?' 'ಏನು ? ಹೆಣ್ಣುನೋಡಲು ಹೋಗುತ್ತಿದ್ದೀಯೇನು ?'

'ಅದೇನು ? ಅದೇ ಕೆಲಸಕ್ಕೆ ಮಾತ್ರ ನಾನಿನ್ನೊಬ್ಬರ ಮನೆಗೆ ಹೋಗುವುದೆಂದು ತಿಳಿದಿದ್ದೀಯೇನು ?' ಅವರು ನನಗೆ ಸಂಬಂಧವಂತೆ, ಕರೆದಿದ್ದಾರೆ. ಬೇರೇನೂ ಕೆಲಸವಿಲ್ಲ. ಸುಮ್ಮನೆ ಹೋಗಿಬರೋಣ ಅಂತ'

ಆದರೂ ಅಕ್ಕಿಗೆ ನಂಬಲಿಲ್ಲ. 'ಆಗಲಿ, ಹೋಗಿ ಬಾ ?' ಎಂದು ನಕ್ಕಳು.

ಹಾಗಾದರೆ ಮುದುಕ ಕರೆದಿದ್ದು ತನಗೆ ಬಲೆ ಬೀಸುವುದಕ್ಕೋಸ್ಕರವೆ ? ಆಗಲಿ ಅದರಿಂದೇನು ನಷ್ಟ. ಸುಖವಾಗಿ ತಿಂಡಿ, ಉಪಚಾರ. ಐದು ನಿಮಿಷ ಯಾವುದೋ ಒಂದು ತರಹದ ಸಂಗೀತ. ಆ ಸ್ವಲ್ಪ ಹೊತ್ತು ತನಗೆ ಒಂದು ಪ್ರಾಮುಖ್ಯತೆ ಇರುತ್ತದೆ. ಎಲ್ಲಿಯೋ ಹುಟ್ಟಿ ಬೆಳೆದ ಒಂದು ಹೆಣ್ಣು, ಇವನು ತನ್ನ ಗಂಡನಾದರೆ ? ಎಂದು ಯೋಚಿಸುತ್ತಿರುತ್ತದೆ. ಅದೇ ಒಂದು ಸುಖ. ಅಂತಹ ಸಮಯದಲ್ಲಿ ಹೆಣ್ಣು ಏನೇನು ಯೋಚಿಸಬಹುದು ? ಅದೊಂದು ಗೂಢವಾದ ಸಮಸ್ಯೆ. ಆ ಕೆಲವು ನಿಮಿಷಗಳಲ್ಲಿ. ಎರಡು ಜೀವಿಗಳ ಭವಿಷ್ಯ, ನಿಶ್ಚಯವಾಗಿ ಬಿಡುತ್ತದೆ. ಹೀಗಿರುವಾಗ ಜೀವನದಲ್ಲಿ ಯಾವುದೋ ಕಾಣದ ಕೈಯ ಕೈವಾಡವಿಲ್ಲವೆಂದು ಹೇಗೆ ಹೇಳಲು ಬಂದೀತು. ತನಗೆ ವಿಧಿ ಯಾವ ಹೆಣ್ಣನ್ನು ಕಾದಿಟ್ಟಿದೆಯೋ ? ಯಾವ ನದೀತೀರದ ಹೆಣ್ಣು ತಲೆಯಿಟ್ಟಳು. ಅವಳನ್ನು ಕುರಿತು ಯೋಚಿಸಲು ನಡುಬೀದಿ ತಕ್ಕ ಸ್ಥಳವಲ್ಲ, ಆದರೂ.......ಅಷ್ಟರಲ್ಲಿ ತಾನು ಹೋಗಬೇಕೆಂದಿದ್ದ ಮನೆ ಬಂದಿತು. ಮುದುಕರು 'ಬಾರಯ್ಯ' ಎಂದವನನ್ನು ಒಳಗೆ ಕರೆದೊಯ್ದರು.

ನಡುಮನೆಯಲ್ಲಿಯ ಚಾಪೆಯ ಮೇಲೆ ಕುಳಿತು, ಸುತ್ತಲೂ ನೋಡಿದ ರಂಗಣ್ಣ. ಮನೆ ಬಡವರದು, ಮುದುಕರು 'ಗೌರಾ, ಗೌರಾ' ಎಂದು ಕೂಗಿದರು. ಸುಮಾರು ಮೂವತ್ತೈದು ವರ್ಷದ ವಿಧವೆಯೊಬ್ಬರು ಬಾಗಿಲಹತ್ತಿರ ಬಂದು ನಿಂತರು.

'ಇವನ್ಯಾರು ಗೊತ್ತೇನೇ ?' ಎಂದು ಕೇಳಿದರು, ಗೌರಮ್ಮ ಉತ್ತರಕೊಡಲಿಲ್ಲ.

'ಹೊಸಹಳ್ಳಿಯ ನರಸಿಂಹಯ್ಯನವರ ಹಿರಿಯ ಮಗಕಣೇ ಬೆಂಗಳೂರಲ್ಲಿ ಓದುತ್ತಿದ್ದಾನೆ, ನಮಗೆ ಹತ್ತಿರದ ಸಂಬಂಧ'

ಗೌರಮ್ಮ ಸಮ್ಮತಿಸೂಚಕವಾಗಿ ತಲೆಯಾಡಿಸಿದರು. ಮುದುಕ ರಂಗಣ್ಣನನ್ನು ಕುರಿತು.

'ನಿನ್ನ ತಾಯಿ, ಸಾವಿತ್ರಿಯ ಅಜ್ಜಿಯೂ, ನನ್ನ ತಾಯಿಯೂ ಅಕ್ಕತಂಗಿಯರು ರಂಗಣ್ಣ. ಗೌರ ನಿನಗೆ ಅತ್ತೆಯಾಗಬೇಕು' ಎಂದರು. 'ಹೂಂ' ಎಂದ ರಂಗಣ್ಣ. ಯಾವ ಸಂಬಂಧವೋ ಏನೋ? ಲೆಕ್ಕಹಾಕುತ್ತ ಹೋದರೆ ಎಲ್ಲರೂ ಸಂಬಂಧವೆ- ತನ್ನ ಸಣ್ಣ ಜಾತಿಯಲ್ಲಿ, ಎಂದುಕೊಂಡ ಮನಸ್ಸಿನಲ್ಲಿ.

ಮುದುಕರು ಅದೂ ಇದೂ ಯೋಗಕ್ಷೇಮ ವಿಚಾರಿಸುತ್ತಿರುವಾಗ ಯಾರೋ ಒಂದು ತಟ್ಟೆಯಲ್ಲಿ ತಿಂಡಿ ನೀರು ತಂದಿಟ್ಟರು. ಒಂದು ಸೂಕ್ಷ್ಮವಾದ ಸುವಾಸನೆಯ ಅನುಭವವಾಗಿ ರಂಗಣ್ಣ ತಲೆಯೆತ್ತಿ ನೋಡಿದ. ಇದೇನು ಕನಸೋ, ನಿಜವೋ? ಯಾವ ಹುಡುಗಿಯ ಯೋಚನೆಯಲ್ಲೇ ಒಂದು ದಿನವೆಲ್ಲಾ ಕಳೆದಿದ್ದನೋ, ಯಾರನ್ನು ಇನ್ನೊಮ್ಮೆ ನೋಡಲು ಕಾತರನಾಗಿದ್ದನೋ ಅದೇ ಬಾಲೆ ಎದುರಿನಲ್ಲಿ! ಅತ್ಯಂತ ಸಮೀಪದಲ್ಲಿ! ಹುಡುಗಿಯೂ ಇವನನ್ನು ನೋಡಿ ತುಸು ಆಶ್ಚರ್ಯದಿಂದ ನಿಂತಲ್ಲಿಯೇ ನಿಂತುಬಿಟ್ಟಳು. ಶ್ರೀನಿವಾಸಯ್ಯನವರು ವಿವರಣಾರ್ಥವಾಗಿ 'ಇವಳು ನನ್ನ ಮೊಮ್ಮಗಳು. ಲಲಿತ ಅಂತ ಹೆಸರು' ಎಂದರು. 'ಹುಡುಗಿಗೆ ತಕ್ಕ ಹೆಸರು!' ಎಂದುಕೊಂಡ ರಂಗಣ್ಣ ಮನಸ್ಸಿನಲ್ಲಿ. ಲಲಿತ ಒಳಗೆ ಓಡಿದಳು. ಇನ್ನೊಂದು ಸಲ ಕಾಫಿ ತಂದಿಟ್ಟು ಹೊರಟುಹೋಗುತ್ತಿರುವಾಗ ಅವಳನ್ನು ತಡೆದು ತಾತ ಹೇಳಿದರು.

'ಯಾಕೋಡ್ತಿ? ಅವನೇನೂ ಹೊಸಬನಲ್ಲ ಮಗೂ. ನಿನಗೆ ಭಾವ ಆಗಬೇಕು' ಈಗ ಮಾತ್ರ ರಂಗಣ್ಣ ಈ ಹೊಸ ಸಂಬಂಧದಿಂದ ಸಂತೋಷಹೊಂದಿದ.

'ತಂದೆಯಿಲ್ಲದ ಹುಡುಗಿ. ನಾನೇ ಸಾಕುತ್ತಿದ್ದೇನೆ. ಏನೋ ಈಗಿನ ಕಾಲಕ್ಕೆ ತಕ್ಕಂತಿರಲೆಂದು ಸ್ಕೂಲಿಗೆ ಕಳಿಸುತ್ತಿದ್ದೇನೆ. ಇಂಗ್ಲೀಷು ಮೂರನೇ ಕ್ಲಾಸಿನಲ್ಲಿ ಓದುತ್ತಿದ್ದಾಳೆ. ಸ್ವಲ್ಪ ಸಂಗೀತಾನೂ ಕಲಿಸುತ್ತಿದ್ದೇನೆ. ಹುಡುಗಿ ಬಲು ಜಾಣೆ. ಚಿನ್ನದಂತಹ ಗುಣ. ನಾವೇ ಹೊಗಳಿದರೆ ಬೆಲೆಯಿಲ್ಲ. ಏನೋ ಒಂದು ಸರಿಯಾದ ಕಡೆ ನೋಡಿ ಸೇರಿಸಿಬಿಟ್ಟರೆ ನನ್ನ ಕರ್ತವ್ಯ ಮುಗಿದಂತೆ. ಇನ್ನು ಚಂದ್ರು- ನಿನ್ನ ಕರೆಯಲು ಬಂದಿದ್ದನಲ್ಲ ಆ ಹುಡುಗ ಹೇಗೂ ಗಂಡು. ಅವನ ಪಾಡು ಹೇಗೋ ಆಗುತ್ತದೆ.'

ಸುಮ್ಮನೆ ಹೂಂ ಗುಟ್ಟಿದ ರಂಗಣ್ಣ. ಇವಳಿಗೂ ಗಂಡು ಸಿಕ್ಕುವುದು ಕಷ್ಟವೇ? ಪುಣ್ಯಮಾಡಿರಬೇಕು ಅವಳ ಕೈಹಿಡಿಯಲು! ಆದರೂ ಪಾಪ, ಮುದುಕರು ಒದ್ದಾಡುತ್ತಿದ್ದಾರೆ.

ಶ್ರೀನಿವಾಸಯ್ಯನವರು ಮೊಮ್ಮಗಳನ್ನು ಕರೆದರು. 'ಏನು ತಾತ' ಎಂದು ಬಾಗಿಲ ಮರೆಯಿಂದಲೇ ಲಲಿತ ಕೇಳಿದಳು.

'ನೋಡು. ಭಾವ ನಿನ್ನ ಸಂಗೀತಾನ ಕೇಳಬೇಕಂತೆ ಬಾ, ಒಂದು ಕೀರ್ತನೆ ಹೇಳು ನೋಡೋಣ'

ಲಲಿತ ಹೊರಗೆ ಬರಲಿಲ್ಲ. ಶ್ರೀನಿವಾಸಯ್ಯ ಬಿಡಲಿಲ್ಲ. ಅವರಿಗೆ ಮೊಮ್ಮಗಳ ಪಾಂಡಿತ್ಯ ಪ್ರದರ್ಶನ ಮಾಡಬೇಕೆಂಬ ಚಪಲ. ಅಥವಾ ಇನ್ನೇನಾದರೂ ಅಭಿಸಂಧಿ ಇತ್ತೋ ಏನೋ? ಹೆಣ್ಣು ಇರುವ ಪ್ರತಿಯೊಬ್ಬರೂ ನಡೆಸುವ ಕಾರಸ್ಥಾನ ತಾನೆ ಅದು!

'ಅದಕ್ಯಾಕೇ ನಾಚಿಕೆಪಡುತ್ತೀ? ಈಗೇನೂ ಇವನು ನಿನ್ನ ಮದುವೆಯಾಗೋಕೆ ಬಂದಿಲ್ಲ. ಆ ಪ್ರಸ್ತಾಪ ಮುಂದೆ ನೋಡಿಕೊಳ್ಳೋಣ.'

ರಂಗಣ್ಣ ಕೇಳಿ ರೋಮಾಂಚಿತನಾದ. ಅತ್ತಿಗೆ ನಿಜವನ್ನೇ ಹೇಳಿದಳು. ಆದರೆ ಅವನಿಗೆ ಈಗ ಮದುವೆಯ ಪ್ರಸ್ತಾಪದಲ್ಲಿ ಅಷ್ಟು ಅಲಕ್ಷ್ಯವಿಲ್ಲ. ಮದುವೆ? ಲಲಿತೆಯೊಂದಿಗೆ, ಯೋಚನೆಯೇ ಮಧುರವಾದದ್ದು. ಆದರೆ ಆ ಪ್ರಸ್ತಾಪ ಈಗಲೇ ಬರದಿದ್ದರೆ ಚೆನ್ನಾಗಿತ್ತು.

ಆಗ ಶ್ರೀನಿವಾಸಯ್ಯನವರ ಮನಸ್ಸಿನಲ್ಲಿ ಆ ಯೋಚನೆ ಇತ್ತೆಂದು ಹೇಳುವ ಹಾಗಿರಲಿಲ್ಲ. ತಮ್ಮ ಜಾತಿಯಲ್ಲಿ ಪ್ರೌಢ ಶಿಕ್ಷಣಕ್ಕೆ ಹೋಗಿರುವ ತರುಣನನ್ನು ತಮ್ಮವನನ್ನಾಗಿ ಮಾಡಿಕೊಳ್ಳಬೇಕು. ಅವನ ತಮ್ಮ ಸಂಬಂಧವನ್ನು ಸ್ಥಾಪಿಸಬೇಕು. ಎಂದೇ ಯೋಚನೆಯಿತ್ತು, ಲಲಿತೆಗೆ ಅವನು ತಕ್ಕ ವರನಾದಾನು ಎನ್ನುವುದು ದೂರದ ಆಸೆಯಾಗಿತ್ತು. ಆದರೆ ಆ ಆಸೆ ಅಷ್ಟೇನೂ ಪ್ರಬಲವಾಗಿರಲಿಲ್ಲ. ತಮ್ಮಿಬ್ಬರ ಆರ್ಥಿಕ ಸ್ಥಿತಿಯಲ್ಲಿ ಬಹು ಅಂತರವಿತ್ತು.

ಲಲಿತ 'ಇಲ್ಲ ತಾತ. ಗಂಟಲು ಕೂತುಹೋಗಿದೆ' ಎಂದಳು.

'ಪರವಾಯಿಲ್ಲ. ಸ್ವರ ಹೊರಡದಿದ್ದರೆ ಬಿಟ್ಟರೆ ಸರಿ. ಬಾ ನೋಡೋಣ'

'ಹೋಗಲಿ ಬಿಡಿ, ಇನ್ನೊಂದಾದರೂ ಕೇಳಿದರೆ ಸರಿ. ನಿಮ್ಮ ಮನೆ ನನಗೇನೂ ಇನ್ನು ಹೊಸದಲ್ಲವಲ್ಲ' ಎಂದ ರಂಗಣ್ಣ.

'ಅಷ್ಟು ಅಭಿಮಾನವಿದ್ದರೆ ಸಾಕು.' ಎಂದರು ಶ್ರೀನಿವಾಸಯ್ಯ.

ಸ್ವಲ್ಪಹೊತ್ತು ಮಾತುಕತೆಗಳಾದ ಮೇಲೆ ರಂಗಣ್ಣ ಹೊರಟ. ಆದರೆ ಅವನು ಅಲ್ಲಿ ಇದ್ದಷ್ಟು ಹೊತ್ತೂ ಬಾಗಿಲ ಮರೆಯಿಂದ ಲಲಿತ ತನ್ನನ್ನು ನೋಡು

ತ್ತಿರುವಂತೆ ಅವನ ಮನಸ್ಸಿಗೆ ಭಾಸವಾಯಿತು. ಮನೆಯ ಮುಂದೆ ಎರಡು ಹೆಜ್ಜೆ ಇಟ್ಟು ತಿರುಗಿನೋಡಿದ. ಮುಂದಿನ ಕೋಣೆಯ ಕಿಟಕಿಯ ಹಿಂದಿನಿಂದ ಲಲಿತ ತನ್ನನ್ನೇ ನೋಡುತ್ತಿದ್ದಳು. ಇಬ್ಬರದೃಷ್ಟಿಯೂ ಸೇರಿತು. ರಂಗಣ್ಣನ ಎದೆ ತುಂಬಿಬಂತು. ಅಲ್ಲಿಂದ ಸರಸರನೆ ಹೊರಟುಬಿಟ್ಟ.

ಮನೆಯಲ್ಲಿ ಅತ್ತಿಗೆ ಕೇಳಿದಳು. 'ಹೆಣ್ಣು ಒಪ್ಪಿಗೆಯಾಯಿತೇ?'

'ಅದೊಂದೇ ಧ್ಯಾನ ನಿನಗೆ. ಮದುವೆ ಯಾರಿಗೆ ಬೇಕಾಗಿದೆ ಈಗ?' ಎಂದು ನಕ್ಕುಬಿಟ್ಟ ರಂಗಣ್ಣ. ಆದರೆ ಈಸಾರೆ ಶೃಂಗೇರಿಯಲ್ಲಿ ಬಹಳ ದಿನ ನಿಂತು ಬಿಟ್ಟ.

[೩]

ಪಶ್ಚಿಮಘಟ್ಟಗಳ ಸಾಲುಗಳಮಧ್ಯದಲ್ಲಿದೆ ಶೃಂಗೇರಿ. ತುಂಗಾನದಿಯ ಪಡದಲ್ಲಿ ಆಕಡೆ ಈಕಡೆ ಸ್ವಲ್ಪದೂರ ಮಾತ್ರ ಬಯಲು. ಅಲ್ಲಿಂದ ಮುಂದೆ ಬೆಟ್ಟಗಳ ಸಾಲುಗಳು ಒಂದರ ಹಿಂದೊಂದು ತಲೆಯೆತ್ತಿ ನಿಂತಿವೆ. ಆ ಬೆಟ್ಟಗಳ ತಪ್ಪಲಲ್ಲಿ ಗಹನವಾದ ಕಾಡು. ಕಣಿವೆಯಲ್ಲಿ ತಿಳಿನೀರಿನ ಶೀತಲವಾದ ತೊರೆಗಳು. ಎಲ್ಲೆಲ್ಲಿಯೂ ತಂಪು, ಹಸಿರು, ಶಾಂತಿ. ಎರಡು ಗುಡ್ಡಗಳ ನಡುವೆ ಸ್ವಲ್ಪಸಮ ಜಾಗಸಿಕ್ಕಿದರೆ ಅಲ್ಲಿ ಒಂದು ಅಡಕೆಯ ತೋಟ. ಸಣ್ಣ ತೊರೆಯೊಂದು ಆತೋಟದ ಮಧ್ಯೆ ಹರಿಯುತ್ತದೆ. ತೋಟದ ಪಕ್ಕದಲ್ಲಿ ಎತ್ತರದ ಸ್ಥಳದಲ್ಲಿ ಮನೆ. ಮನೆಗೆ ಅಡಿಕೆಯ ಸೋಗೆಯನ್ನು ಹೊದಿಸಿದೆ. ಮನೆಯ ಮುಂದೊಂದು ದೊಡ್ಡ ಚಪ್ಪರ. ಸಣ್ಣ ಹೂ ತರಕಾರಿಗಳ ಕೈತೋಟ. ಆ ಮನೆಯೇ ಒಂದು ಹಳ್ಳಿ. ಆ ಹಳ್ಳಿಗೊಂದು ಹೆಸರು.

ಆತೋಟಗಳ ಮಾಲೀಕರೆಲ್ಲ ಬಹುಪಾಲು ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದ ಬ್ರಾಹ್ಮಣರು. ಶತಮಾನಗಳ ಹಿಂದೆ ಇಲ್ಲಿ ಬಂದು ನೆಲೆಸಿ ಮನುಷ್ಯರ ಹೆಜ್ಜೆ ಸೋಕದ ಸ್ಥಳವನ್ನೆಲ್ಲಾ ಅಗೆದು ತೋಟ ಮಾಡಿದರು. ತಮ್ಮ ತಾಯ್ನಾಡನ್ನು ಮರೆತು ಇಲ್ಲಿಯೇ ಸ್ಥಿರವಾಗಿ ಬಿಟ್ಟರು.

ಪ್ರತಿಯೊಂದು ತೋಟವೂ ಒಂದುಪಾಳೆಯ. ಕಂದಾಯ ತೋಟಕ್ಕೆ ಮಾತ್ರ. ಆದರೆ ಸುತ್ತಮುತ್ತಲಿನ ಪ್ರದೇಶಕ್ಕೆಲ್ಲಾ ಅವನೇ ಒಡೆಯ. ಅಲ್ಲಿ ಅವನ ಅಧಿಕಾರಕ್ಕೆ ತಡೆಯೇ ಇಲ್ಲ. ಅವಶ್ಯವಾಗಿ ನೋಡಬೇಕಾದರೆ ಮಾತ್ರ ಬೇರೆ

ಯುವರ ಮುಖದರ್ಶನ. ತಾನಾಯಿತು, ತನ್ನ ಸಂಸಾರವಾಯಿತು, ತನ್ನ ತೋಟ ವಾಯಿತು. ತೋಟಕ್ಕೆ ಮೂರುತಿಂಗಳು ಕಷ್ಟಪಟ್ಟರೆ ಸಾಕು. ಇನ್ನು ಉಳಿದ ಕಾಲ ವಿರಾಮ. ಈ ಮೂರುತಿಂಗಳ ದುಡಿಮೆಯಲ್ಲಿ ಸುಖಜೀವನ ಕಳೆಯುತ್ತದೆ. ಇದರಿಂದ ಜನರಲ್ಲಿ ಸಂಪತ್ತು ಹೆಚ್ಚಿತು.

ಮಲೆನಾಡು ಎಂದರೆ ಸಿರಿವಂತರ ತೌರುಮನೆ ಎಂದು ಶಿವಮೊಗ್ಗೆಯ ಅಡಿ ಕೆಯ ಮಂಡಿಯವರು ಹೇಳುವಂತಾಯಿತು. ಆದರೆ ಈ ನೆಮ್ಮದಿಯು ಸೋಮಾರಿ ತನವನ್ನೂ, ವಿಷಯಲೋಲುಪತೆಯನ್ನೂ ತಂದಿತು. ಹಿಂದಿನ ಯುದ್ಧದ ಸರಿ ಸುಮಾರಿನಲ್ಲಿದ್ದ ತಲೆಮಾರಿನವರು, ತಮ್ಮ ಹಿರಿಯರು ಗಳಿಸಿದ್ದ ಸಂಪತ್ತನ್ನು ಪೋಲುಮಾಡುತ್ತ ಬಂದರು. ದುಂದುಗಾರಿಕೆಯ ಕಾಡಾನೆ ಐಶ್ವರ್ಯದ ಕಬ್ಬಿನಗದ್ದೆ ಯನ್ನು ಹೊಕ್ಕಮೇಲೆ ಎಷ್ಟಿದ್ದರೇನು ?

ಮೊದಲು ಅಲ್ಲಲ್ಲಿ ಒಬ್ಬೊಬ್ಬ ಸಾಹುಕಾರನಿದ್ದ. ಅವನೇ ತನ್ನ ಎಲ್ಲಾ ಕುಳ ಗಳ 'ತರುವುದು ಕೊಡುವುದು' ನೋಡಿಕೊಂಡು ಹೋಗುತ್ತಿದ್ದ. ಅದರಿಂದ ಅವನೂ ಲಾಭ ಸಂಪಾದಿಸುತ್ತಿದ್ದ. ತನ್ನ ಕುಳಗಳ ಮಧ್ಯೆಯೇ ಜೀವಿಸುತ್ತಿದ್ದುದರಿಂದ ಅವರ ಕಷ್ಟಕಾಲದಲ್ಲಿ ನೆರವಾಗುತ್ತಿದ್ದ. ಅವನಿಗೆ ಎಲ್ಲರ ಯೋಗ್ಯತೆಯೂ ತಿಳಿದಿರು ತ್ತಿತ್ತು. ಎಲ್ಲರ ಯೋಗಕ್ಷೇಮದ ಮೇಲೂ ದೃಷ್ಟಿಯಿರುತ್ತಿತ್ತು. ಈಚೀಚೆಗೆ ಜನರಿಗೆ ನಾಗರೀಕತೆಯ ಸೋಂಕುತಗುಲಿ ಸ್ವತಂತ್ರಮನೋವೃತ್ತಿ ಬೆಳೆಯಿತು. ಅವರೇ ನೇರವಾಗಿ ಅಡಿಕೆ ಮಂಡಿಯವರೊಡನೆ ವ್ಯವಹಾರ ಬೆಳೆಸಿದರು. ತಮ್ಮ ಸ್ವಲ್ಪ ಮಾಲುಗಳ ವ್ಯಾಪಾರಕ್ಕಾಗಿ ಮದರಾಸಿನವರು ಶಿವಮೊಗ್ಗೆಗೆ ಬಂದ ಸಮಯದಲ್ಲಿ ತಾವೇ ಖುದ್ದಾಗಿ ಹೋಗುವುದು ಪ್ರತಿಯೊಬ್ಬನಿಗೂ ಸಾಧ್ಯವಿರಲಿಲ್ಲ. ಆದ್ದರಿಂದ ಮಂಡಿಯವರು ಮಾಡಿದ್ದೇ ಮಾಟವಾಯಿತು. ಅವರು ಮಾಡಿದ್ದೇ ದರ. ಅಲ್ಲದೆ ದಾನಧರ್ಮ, ಬಡ್ಡಿ, ತೂಕ, ಅದು ಇದು ಎಂದು ಮಂಡಿಯವರು ಇವರಿಗೆ ಗೊತ್ತಾಗದಂತೆ ಇವರ ರಕ್ತ ಹೀರಿದರು. ಸಿರಿದೇವತೆ ಕೊಟ್ಟುದೆಲ್ಲಾ ಶಿವ ಮೊಗ್ಗಾಕ್ಕೆ ಸೂರೆಹೋಯಿತು, ಹೊರಲಾರದ ಸಾಲದ ಹೊರೆ ತಲೆಯ ಮೇಲೆ ಹೇರಲ್ಪಟ್ಟಿತು.

ರಂಗಣ್ಣನ ತಂದೆ ನರಸಿಂಹಯ್ಯನೂ ಇದೇ ಒಂದು ಮನೆತನಕ್ಕೆ ಸೇರಿದವರು. ನರಸಿಂಹಯ್ಯನ ತಂದೆ ಸುಬ್ಬಯ್ಯ ಚೆನ್ನಾಗಿ ದುಡಿದು ಸಂಪಾದನೆ ಮಾಡಿದರು. ವ್ಯವಸಾಯದ ಜೊತೆಗೆ ವ್ಯಾಪಾರ, ಲೇವಾದೇವಿ, ಇಟ್ಟುಕೊಂಡು ತಮ್ಮ ಆಸ್ತಿ

ಯನ್ನು ಹತ್ತುಪಾಲು ಹೆಚ್ಚಿಸಿದರು. ಅವರಿಗೆ ನಾಗರೀಕತೆಯ ಗಾಳಿ ಬಡಿದಿರಲಿಲ್ಲ. ಅದರಿಂದ ಅವರು ಮಾಡಿದ ಸಂಪಾದನೆಗೆ ಖರ್ಚಿನ ದಾರಿಯೂ ಇರಲಿಲ್ಲ. ಹೊಸ ಹಳ್ಳಿಯಲ್ಲಿ ಹೊಸದಾಗಿ ಜಮೀನು ಕೊಡಿಸಿ, ಮನೆ ಕಟ್ಟಿಸಿದರು. ಮನೆ ತುಂಬ ವಸ್ತು ಒಡವೆಗಳನ್ನು ಹೇರಳವಾಗಿ ತುಂಬಿಸಿದರು. ಆದರೆ ಅವರು ಒಂದುಕಾಸೂ ವ್ಯರ್ಥಾ ಖರ್ಚು ಮಾಡಿದವರಲ್ಲ. ಚಿಕ್ಕಮಗಳೂರು ಹೊಸಹಳ್ಳಿಗೆ ನಲವತ್ತು ಮೈಲಿ ದೂರ. ಆಗ ಮೋಟಾರು ಬಂದಿದ್ದರೂ ಅವರು ಅಷ್ಟು ದೂರವೂ ನಡೆದೇ ಹೋಗುತ್ತಿದ್ದರು. ದಾರಿಯಲ್ಲಿ ತಿನ್ನಲು ಹಸಿಕಡಲೆ ತೆಗೆದುಕೊಂಡು ಹೋಗುತ್ತಿದ್ದರು.

ಇಷ್ಟು ಸಂಪಾದನೆ ಮಾಡಿ ಸುಬ್ಬಯ್ಯ ಒಬ್ಬ ತೂಕದ ವ್ಯಕ್ತಿಯೆನ್ನಿಸಿಕೊಂಡರು. ತಮ್ಮ ಜಾತಿಯ ಇತರ ಶ್ರೀಮಂತ ಮನೆತನಗಳ ಅಂತಸ್ತಿಗೆ ತಮ್ಮ ಮನೆತನವನ್ನು ತಂದರು. ಅವರೊಂದಿಗೆ ಹೆಣ್ಣು ಗಂಡುಗಳ ಸಂಬಂಧವನ್ನು ಬೆಳೆಸಿದರು.

ಸುಬ್ಬಯ್ಯನ ಮರಣಾನಂತರ ಇಬ್ಬರು ಮಕ್ಕಳೂ ಪಾಲುಮಾಡಿಕೊಂಡರು. ನರಸಿಂಹಯ್ಯನ ಅಣ್ಣ ಜಮೀನುಗಳನ್ನು ಗುತ್ತಿಗೆಗೆ ಹಾಕಿ ಶೃಂಗೇರಿಯಲ್ಲಿ ಬಂದು ನೆಲೆಸಿದರು. ನರಸಿಂಹಯ್ಯ ಅಪ್ಪಮಾಡಿಟ್ಟ ಆಸ್ತಿಯ ಬಲದಿಂದ ದರ್ಬಾರು ನಡೆಸಲು ಮೊದಲಿಟ್ಟರು.

ನರಸಿಂಹಯ್ಯನಿಗೆ ಕೋರ್ಟಿನ ವ್ಯವಹಾರ ಎಂದರೆ ಒಂದು ಹುಚ್ಚು. ಹೈಕೋರ್ಟು ಹತ್ತಿದರೂ ಸರಿಯೇ ತನ್ನ ಕೇಸನ್ನು ಗೆದ್ದು ಬರಬೇಕು. ಸುಬ್ಬಯ್ಯನು ಮಾಡಿಟ್ಟ ಆಸ್ತಿಯೆಲ್ಲಾ ನರಸಿಂಹರಾಜಪುರ, ಶಿವಮೊಗ್ಗ, ಬೆಂಗಳೂರು ಲಾಯರುಗಳ ಪಾಲಾಯಿತು. ಕೊನೆಗೆ ಉಳಿದಿದ್ದು ಸುಬ್ಬಯ್ಯ ಸಂಪಾದಿಸಿದ ದೊಡ್ಡ ಮನೆತನದ ಹೆಸರು. ಅದಕ್ಕೆ ಸರಿಯಾದ ಶ್ರೀಮದ್ಗಾಂಭೀರ್ಯ.

ರಂಗಣ್ಣನ ಓದಿನ ಪ್ರಾರಂಭದಲ್ಲಿ ನರಸಿಂಹಯ್ಯ ಸ್ವಲ್ಪ ಉತ್ತಮಸ್ಥಿತಿಯಲ್ಲಿಯೇ ಇದ್ದರು. ಬರಬರುತ್ತಾ ರಂಗಣ್ಣ ಸುಖವಾಗಿರುವುದಕ್ಕೆ ಅನುಕೂಲ ಕಲ್ಪಿಸುವುದೇ ಕಷ್ಟವಾಯಿತು. ಅವನಾದರೋ ಡಿಗ್ರಿ ತೆಗೆದುಕೊಳ್ಳಲೇಬೇಕೆಂಬ ಹಠದಿಂದ ಓದುತ್ತಿದ್ದ.

ಈಸಾರೆ ರಜಾಕ್ಕೆ ಊರಿಗೆ ಬಂದವನು ತನ್ನ ದೊಡ್ಡಪ್ಪನ ಮಗ ಚಂದ್ರಶೇಖರನ ಮನೆಯಲ್ಲಿ ಸ್ವಲ್ಪ ದಿವಸ ನಿಂತ. ಶೃಂಗೇರಿಯಲ್ಲಿರುವಷ್ಟು ದಿವಸವೂ ಶ್ರೀನಿವಾಸಯ್ಯನ ಮನೆಗೆ ಹೋಗದಿರುತ್ತಿರಲಿಲ್ಲ. ಶ್ರೀನಿವಾಸಯ್ಯನಾದರೂ ತನ್ನ

ಮೊಮ್ಮಗಳ ಸಂಗೀತದ ಪ್ರೌಢಿಮೆಯನ್ನು ಅವನಿಗೆ ಪರಿಚಯ ಮಾಡಿಸದೆ ಬಿಡಲಿಲ್ಲ. ಲಲಿತೆಯೂ ಬರಬರುತ್ತ ಲಜ್ಜೆಯನ್ನು ದೂರ ಸರಿಸಿ ಸಲಿಗೆಯಿಂದ ನಡೆದುಕೊಳ್ಳುತ್ತ ಬಂದಳು. ತಂಬೂರಿಯ ಶ್ರುತಿಯೊಂದಿಗೆ ಒಂದೆರಡು ಕೀರ್ತನೆಗಳನ್ನು ಹಾಡಿದಳು. ಹಾರ್ಮೋನಿಯಂ ತಾನೇತಾನಾಗಿ ಮೆರೆಯುತ್ತಿದ್ದ ಆ ಕಾಲದಲ್ಲಿ ತಂಬೂರಿಯ ಸ್ವರವನ್ನು ಕೇಳಿ ರಂಗಣ್ಣನಿಗೆ ಹಾಯೆನಿಸಿತು. ಲಲಿತೆಯ ಗುರುಗಳು ಒಳ್ಳೆಯ ಕಲಾವಿದರಿರಬೇಕೆಂದೆನ್ನಿಸಿತು. ಸಿನಿಮಾ ಹಾಡುಗಳನ್ನು ಕೇಳಿ ಕೇಳಿ ತಲೆ ಚಿಟ್ಟುಹಿಡಿದುಹೋಗಿದ್ದ ರಂಗಣ್ಣನಿಗೆ ಈ ಕೀರ್ತನೆಗಳು ಆಪ್ಯಾಯನವಾಗಿದ್ದುವು. ಲಲಿತೆಗೆ ಅಮೋಘವಾದ ಶಾರೀರವೂ ಇದ್ದಿತು. ಮುಗ್ಧಮನೋಹರ ಲಾವಣ್ಯ, ಸರಳವಾದ ಕೀರ್ತನೆಗಳು, ಸುಖವಾದ ಶಾರೀರ. ರಂಗಣ್ಣ ಲಲಿತೆಗೆ ಮಾರು ಹೋದ.

ಈಸಾರೆ ಹೊಸ ಹಳ್ಳಿಗೆ ಹೋದಾಗ ರಂಗಣ್ಣನಿಗೆ ಯಾವುದರಲ್ಲಿಯೂ ಮನಸ್ಸಿಲ್ಲ. ಮೊದಲು ಬಂದಾಗ ಎಲ್ಲಿಲ್ಲದ ಉತ್ಸಾಹ. ಆ ಸ್ವಲ್ಪದಿನಗಳಲ್ಲಿ ಮನೆಯ ಗಿಡಗಳಿಗೆಲ್ಲಾ ಬುಧದೆಶೆ. ನರಸಿಂಹಯ್ಯನವರು ಹೆಚ್ಚುಕಡಿಮೆ ವರ್ಷವೆಲ್ಲವೂ ಕೋರ್ಟು ಕಛೇರಿಗಳಲ್ಲಿಯೋ ಕಳೆಯುತ್ತಿದ್ದರು. ಮನೆಗೆಲಸಗಳೆಲ್ಲಾ ಪಾಳಾಗಿರುತ್ತಿದ್ದುವು. ರಂಗಣ್ಣ ಮನೆಗೆ ಬಂದಾಗ ಸೋಮಾರಿಗಳಾದ ಆಳುಗಳಿಗೆಲ್ಲಾ ಚಳಿ ಬಿಟ್ಟುಹೋಗುತ್ತಿತ್ತು. ತಾಯಿ ಲಕ್ಷ್ಮಮ್ಮನವರು ಮಾತ್ರ "ಏನೋ ರಂಗು, ಪರಸ್ಥಳದಲ್ಲಿ ಹೊಟ್ಟೆಬಟ್ಟೆ ನೋಡುವವರಿಲ್ಲದೆ ಒಂದೆರಡು ದಿವಸ ಮನೆಗೆ ಬಂದಿದ್ದೀ. ಈಗ ಇಲ್ಲಿಯೂ ಬಿಸಿಲು ಬೇಗೆಯೆನ್ನದೆ ಸುತ್ತ ಬೇಕೇ? ಸ್ವಲ್ಪ ದಿನವಾದರೂ ಸುಖವಾಗಿರಬಾರದೆ ?" ಎನ್ನುವರು.

ರಜಾ ಕಳೆದು ರಂಗಣ್ಣ ಹೊರಟ. ಹೊರಡುವಾಗ ಲಲಿತೆಯನ್ನು ನೋಡದಿರಲಿಲ್ಲ. ಆದರೆ ಊಟಕ್ಕೆ ಕುಳಿತಾಗ ಅತ್ತಿಗೆ ಮಾತೆತ್ತಿದಳು :

"ಈದಿನ ಸಂಜೆ ರಂಗಣ್ಣ ಹೆಣ್ಣು ನೋಡುವುದಕ್ಕೆ ಹೋಗಿದ್ದ"

"ಎಲ್ಲಿಗೆ ?" ಎಂದು ಕೇಳಿದರು ಅಣ್ಣ- ಚಂದ್ರಶೇಖರಯ್ಯ.

"ಶ್ರೀನಿವಾಸಯ್ಯನ ಮನೆಗೆ"

"ಸರಿಯಾದಸ್ಥಳಕ್ಕೇ ಹೋಗಿದ್ದ"

"ಆದರೂ ಶ್ರೀನಿವಾಸಯ್ಯನ ದಾರ್ಷ್ಟ್ಯ ಹೆಚ್ಚುಅಂದ್ರೆ. ತಮ್ಮ ಮೊಮ್ಮಗಳಿಗೆ ರಂಗಣ್ಣನಂತಹ ಗಂಡ ಸಿಕ್ತಾನೆ ಅಂತ ಆಸೆ ಇಟ್ಟಿದ್ದಾರಲ್ಲ !"

" ಯಾಕೆ, ಹುಡುಗಿ ಚಿನ್ನದಹಾಗಿಲ್ವೇ? ತೋರಿಸು ಶೃಂಗೇರಿಯಲ್ಲಿ ಅಂತಹ ಹುಡುಗಿ ಇನ್ನೊಬ್ಬಳನ್ನು ! "

" ಹುಡುಗಿ ನೋಡೋಕೆ ಚನ್ನಾಗಿದ್ದರೆ ಸರಿ ಅಂತ ಕಾಣುತ್ತೆ. ನಾಳೆ ಪೋಲಿ ಯಾರ ಹುಡುಗಿಯೊಂದು ಚನ್ನಾಗಿರುತ್ತೆ ಅಂತ ಅದನ್ನು ಮದುವೆಮಾಡ್ಕೊತ್ತೀರೇನೋ? "

" ಇನ್ನು ಮಾಡಿಕೊಳ್ಳೋತೊಂದರೆಯಾಕೆ? ಈಗ ಮಾಡಿಕೊಂಡಿದ್ದು ಕಾಪಾಡಿಕೊಂಡರೆ ಸಾಕಾಗಿದೆ "

" ಸಾಕು ಬಿಡಿ. ನಾನು ನಿತ್ಯವೂ ತಲೆಯ ಮೇಲೆ ಕಾದೆಣ್ಣೆ ಎರೆಯುತ್ತಿದ್ದೇನೆ ! ಪಾಪ! ಎಷ್ಟು ಕಷ್ಟಪಟ್ಟಿರೋ ನನ್ನ ಕೈಹಿಡಿದು. ನಿತ್ಯ ನಿಮಗೆ ಅರೆಹೊಟ್ಟೆ. ಇಂದಾದರೂ ಹೊಟ್ಟೆತುಂಬಾ ಊಟಮಾಡಿ " ಇನ್ನಷ್ಟು ಅನ್ನ ಎಲೆಗೆ ಜಾರಿಸಿದರು ಅತ್ತಿಗೆ.

' ಹೆಂಗಸರಷ್ಟು ಸಂಕುಚಿತ ಹೃದಯದವರು ಇನ್ನೊಬ್ಬರಿಲ್ಲ. ಒಬ್ಬರು ತಪ್ಪು ಮಾಡಿದರೆ ಅದನ್ನು ಮರೆಯುವುದೇ ಇಲ್ಲ. ಅದನ್ನು ವಂಶಪಾರಂಪರ್ಯವಾಗಿ ಆರೋಪಿಸಿ ತೃಪ್ತಿಪಡೆಯುತ್ತಾರೆ.'

' ಹೌದುಹೌದು, ಗಂಡಸರುಮಾತ್ರ ಬಲುದೊಡ್ಡಮನಸ್ಸಿನವರು. ಮೊನ್ನೆ ವಿಶಾಲೀನ ಜಾತಿಯಿಂದ ಹೊರಗಿಟ್ಟವರು ಹೆಂಗಸರು ಅಂತಕಾಣುತ್ತೆ?'

' ಹೋಗಲಿಬಿಡು. ಅದೆಲ್ಲಾ ಈಗೇಕೆ? ಕೂಸುಹುಟ್ಟುವ ಮೊದಲೇ ಕುಲಾಪಿ ' ಚಂದ್ರಶೇಖರಯ್ಯನಿಗೆ ಮಾತುಮುಗಿಸುವ ಅಪೇಕ್ಷೆ. ಆದರೆ ಅತ್ತಿಗೆ ಬಿಡಲಿಲ್ಲ.

' ರಂಗಣ್ಣ, ಹೆಣ್ಣು ಮದುವೆಮಾಡಿಕೊಳ್ಳಬೇಕಾದರೆ ಬರಿಯ ರೂಪು ಮಾತ್ರ ನೋಡಿದರೆಸಾಲದು. ಕುಲ, ಜಾತಿ ಎಲ್ಲಾನೋಡಿ ಮದುವೆಮಾಡಿಕೊಳ್ಳಬೇಕು. ರೂಪ ಎಷ್ಟುದಿನವಿರುತ್ತದೆ? ಕೊನೆಯವರೆಗೆ ಉಳಿಯುವುದು ಗುಣಮಾತ್ರ.

ರಂಗಣ್ಣ ನಸುನಗುತ್ತಾ ' ಹಾಗಾದರೆ ಲಲಿತೆಯಗುಣ ಒಳ್ಳೆಯದಲ್ಲವೇನು? ' ಎಂದುಕೇಳಿದ. ' ಅಬ್ಬಬ್ಬಾ. ಆಗಲೇಹುಡುಗಿಯ ಹೆಸರುಹಿಡಿದು ಕರೆಯುತ್ತೀಯೇನು ?"

'ಅವಳೊಡನೆ ಇನ್ನೂ ಒಂದುಮಾತು ಕೂಡ ಆಡಿಲ್ಲ. ಸುಮ್ಮನೆ ನಿನ್ನ ಕಲ್ಪನೆ'

ಲಲಿತೆಯ ಗುಣವಲ್ಲ ನಾನು ಹೇಳಿದ್ದು. ಲಲಿತೆಯ ತಾಯಿಯ...........

ಚಂದ್ರಶೇಖರಯ್ಯನಿಗೆ ಮಾತು ಔಚಿತ್ಯದ ಎಲ್ಲೆಯನ್ನು ಮೀರುತ್ತಿದೆ ಯೆನ್ನಿಸಿತು. ಸ್ವಲ್ಪಸಿಟ್ಟಿನಿಂದ 'ನಿನ್ನ ಈ ತಲೆಹರಟೆ ನನಗೆ ಬೇಕಿಲ್ಲ. ಬೇಗ ಮಜ್ಜಿಗೆ ಬಡಿಸು' ಎಂದ. ಅತ್ತಿಗೆ ಪರಿಸ್ಥಿತಿಯನ್ನು ಅರಿತು ಅಲ್ಲಿಗೇ ಮಾತುನಿಲ್ಲಿಸಿ ದಳು. ಆದರೆ ಅವಕಾಶ ಸಿಕ್ಕಿದಾಗ ಗೌರಮ್ಮನ ನಡತೆಗೆ ಹತ್ತಿದ್ದ ಕಲಂಕವನ್ನು ರಂಗಣ್ಣನಿಗೆ ವಿಶದೀಕರಿಸದೆ ಹೋಗಲಿಲ್ಲ. ಇನ್ನೊಬ್ಬ ಹೆಂಗಸಿನ ಮೇಲೆ ದೋಷಾ ರೋಪಣೆ ಮಾಡಲು ಏನು ಹುಚ್ಚೋ ಹೆಂಗಸರಿಗೆ! ಅವರ ಉಚ್ಚಮನೋಭಾವದ ಪರಿಣಾಮವದೇನೋ!

ಶ್ರೀನಿವಾಸಯ್ಯನವರ ವಿಷಯವೂ ರಂಗಣ್ಣನಿಗೆ ತಿಳಿಯಿತು. ಅವರೂ ಚನ್ನಾಗಿಬಾಳಿದವರು. ಮಲೆನಾಡಿನ ಅವನತಿಯಲ್ಲಿ ಅವರದೂ ಪಾತ್ರವಿದ್ದು, ತಮ್ಮ ಆಸ್ತಿಯನ್ನೆಲ್ಲಾಕಳೆದು, ಈಗ ಶೃಂಗೇರಿಗೆ ಬಂದು ಮಠದಲ್ಲಿ ಚಿಕ್ಕ ಕೆಲಸಕ್ಕೆ ಸೇರಿ ಕೊಂಡು ಜೀವನ ನಡೆಸುತ್ತಿದ್ದರು. ಚಂದ್ರಶೇಖರಯ್ಯ ಲಲಿತೆಯನ್ನು ಬಾಯಿ ತುಂಬಾಹೊಗಳಿ, ಅಂತಹ ರತ್ನವನ್ನು ಪಡೆಯುವುದು ಪುಣ್ಯವೆಂದು ಹೇಳಿದ. ಆದರೆ ಅತ್ತಿಗೆಯ ಸಂಶಯಪ್ರಚೋದಕ ವಾಕ್ಯಗಳು ಅವನ ಮನಸ್ಸನ್ನು ಕೊರೆಯ ಹತ್ತಿದುವು.

[೪]

ಲಲಿತೆಯ ಸವಿನೆನಪನ್ನು ಹೊತ್ತುಕೊಂಡು ರಂಗಣ್ಣ ಬೆಂಗಳೂರಿಗೆ ಬಂದ. ಇಷ್ಟು ದಿವಸ ಅವನ ಮನಸ್ಸು ವ್ಯಾಸಂಗದ ಮೇಲಿತ್ತು. ಈಸಾರೆ ಬೇರೆಯಾಯಿತು. ಅವನೀಗ ಪ್ರತಿಯೊಬ್ಬ ಹುಡುಗಿಯನ್ನೂ ಲಲಿತೆಯೊಂದಿಗೆ ಹೋಲಿಸುವನು. ಭವಿಷ್ಯತ್ತಿನ ರಾಜ್ಯದಲ್ಲಿ ಪ್ರಯಾಣ ಬೆಳೆಸಿ ಅಲ್ಲಿ ಲಲಿತೆಯನ್ನು ಕಾಣುವನು. ಯಾರೂ ಅವಳಿಗೆ ಸರಿಬಾರರು. ಬರಬರುತ್ತ ಅವಳರೂಪು ಅವನ ಮನಸ್ಸಿನಲ್ಲಿ ಸ್ಥಿರವಾಗಿ ಹೋಯಿತು. ಅವಳಲ್ಲಿ ಆತ್ಮೀಯಭಾವನೆ ಬೆಳೆದುಬಂದಿತು.

ಬೆಂಗಳೂರಿನಲ್ಲಿ ಬಸವನಗುಡಿಯಲ್ಲೊಂದು ರೂಮಿನಲ್ಲಿ ರಂಗಣ್ಣನ ವಾಸ. ಜೊತೆಗೆ ಬಾಡಿಗೆಯನ್ನು ಹಂಚಿಕೊಳ್ಳಲು ಇನ್ನೂ ನಾಲ್ಕುಜನರು ಸೇರಿದ್ದರು. ಹೋಟೆಲು ಮಾಣಿ ರೂಮಿಗೆ ಎರಡು ಊಟ ತಂದಿಡುತ್ತಿದ್ದ. ಅದರಲ್ಲಿ ಐದುಜನ ರಿಗೆ ಪಾಲು. ರೂಮಿನ ಮುಂದಿನ ನಲ್ಲಿಯಲ್ಲಿ ಸ್ನಾನ. ಅಲ್ಲಿಂದ ಕಾಲೇಜಿಗೆ

ಉರಿಬಿಸಿಲಿನಲ್ಲಿ ಇವರ ಪ್ರಯಾಣ. ಕೆಳಗೆ ಬಿಸಿ, ಮೇಲೆಉರಿ. ಹೊಟ್ಟೆಯಲ್ಲಿ ಆಗಿನ್ನೂ ಉಂಡ ಹೋಟೆಲು ಊಟದಉರಿ. ಈ ಸುಖದಲ್ಲಿ ಅವರಿಗೆ ಕಾಲೇಜಿನಲ್ಲಿ ಕೆಲಸಕ್ಕೆ ಬಾರದ ಮನಸ್ಸಿಗೆ ಹಿಡಿಯದ ಆರುಗಂಟೆಗಳ ಪಾಠ, ಪ್ರವಚನಗಳು. ತಿರುಗಿ ಸಂಜೆಗೆ ರೂಮಿಗೆ ಪುನರಾಗಮನ. ಸಂಜೆಯ ಪಾಲಿನ ಊಟವನ್ನು ಊಟ ಎನ್ನುವುದಕ್ಕಿಂತ 'ಅನ್ನತಿನ್ನುವುದು' ಎನುವುದು ಸರಿ. ಮನೆಯವರ ಒಂಡು ಕೂಸಿನ ಸಪ್ತಮ ಸ್ವರದ ಆಲಾಪನೆ. ಇವುಗಳ ಮಧ್ಯೆವಿಜ್ಞಾನ ಸಂಬಂಧಪಾದ, ಗಹನವಾದ, ಕಠಿಣಸಮಸ್ಯೆಗಳು ಇವರಿಗೆ ಬಗೆ ಹರಿಯಬೇಕು.

ಈ ವಿದ್ಯಾಭ್ಯಾಸಂಗದ ಮರುಭೂಮಿಯಲ್ಲಿ ಈಗೊಂದು ಓಯಸಿಸ್ ಕಾಣ ಬಂದಿತ್ತು. ಈಗ ಅವನು ರಜದಲ್ಲಿ ತಪ್ಪದೇ ಊರಿಗೆ ಬರುತ್ತಾನೆ. ಈ ಸಾರೆ ಊರಿಗೆ ಬಂದಾಗ ಶೃಂಗೇರಿಯಲ್ಲಿ ಲಲಿತೆ ಇರಲಿಲ್ಲ. ಯಾರೋ ಸಂಬಂಧೀಕರ ಮನೆಯ ಮದುವೆಗೆ ಹೋಗಿದ್ದಾಳೆಂದು ಚಂದ್ರು ಹೇಳಿದ. ಲಲಿತೆಯೊಂದಿಗೆ ಈ ಸಾರೆ ಮಾತಾಡಬೇಕೆಂದು ಬಯಸಿ ಬಂದಿದ್ದ ರಂಗಣ್ಣ. ಇದುವರೆವಿಗೂ ಕಣ್ಣುಗಳಿಂದ ಮಾತಾಡಿದ್ದೇ ಹೊರತು ಬಾಯಿಂದ ಮಾತಾಡಿರಲಿಲ್ಲ. ಈಗ ಅವಳಿಲ್ಲದ್ದರಿಂದ ರಂಗಣ್ಣ ಸ್ವಲ್ಪ ಖಿನ್ನನಾದ.

ಮನೆಯಲ್ಲಿ ಅಪ್ಪ 'ರಂಗಣ್ಣಾ, ಮಾವಿನಕೆರೆಯಲ್ಲಿ ಮದುವೆ. ಅಕ್ಷತೆ ಬಂದಿದೆ. ಹೋಗಿಬಿಟ್ಟುಬಾ' ಎಂದರು.

'ನನಗೆ ಮೈಯಲ್ಲಿ ಚನ್ನಾಗಿಲ್ಲ. ನಾನುಹೋಗೋಲ್ಲ' ಎಂದ ರಂಗಣ್ಣ. 'ಕರೆದಮೇಲೆ ಯಾರಾದರೂ ಹೋಗಬೇಕು ಕಣೋ. ನನಗೆ ಆದಿವಸ ನರಸಿಂಹ ರಾಜ ಪುರದಲ್ಲಿ ಹಿಯರಿಂಗಿದೆ ಇಲ್ಲದಿದ್ದರೆ ನಾನೇಹೋಗುತ್ತಿದ್ದೆ. ಯಾರೂ ಹೋಗದಿದ್ದರೆ ಪುಕಾರಾಗುತ್ತದೆ.' ಎಂದರು ತಂದೆ. ರಂಗಣ್ಣನಿಗೆ ಮನಸ್ಸಿಲ್ಲದಿದ್ದರೂ ಹೋಗಬೇಕಾಯಿತು, ಮಲೆನಾಡಲ್ಲಿ ಅಕ್ಷತೆ ಕೊಟ್ಟಮೇಲೆ ಯಾರೂ ಹೋಗದಿದ್ದರೆ, ಅದೇ ಯುದ್ಧಘೋಷಿಸಿದಂತೆ.

ಮಲೆನಾಡ ಮದುವೆಯ ಸಂಭ್ರಮವೇ ಸಂಭ್ರಮ. ಪ್ರಪಂಚದ ಎಲ್ಲಾ ಕಡೆಗಳಲ್ಲಿಯೂ ಮದುವೆಯೆಂದರೆ ಉತ್ಸವವೇ. ಯಾವ ಹೆಣ್ಣೋ, ಯಾವ ಗಂಡೋ ಒಂದರಜೀವ ಇನ್ನೊಂದರೊಡನೆ ಬೆರತು ಹೋಗುವ ಮುಹೂರ್ತ ಅತ್ಯಂತ ಸಂತೋಷದುದೇ, ಹೌದು. ಆದರೆ ಮಲೆನಾಡಿನ ಮದುವೆಗೆ ಇವಕ್ಕಿಂತ ಹೆಚ್ಚು ವ್ಯಾಪಕತೆ ಇದೆ. ಅದು ಜನಜೀವನದಲ್ಲಿಯ ಒಂದು ರಸನಿಮಿಷ. ವಧೂ

ವರರು ನಿಮಿತ್ತಮಾತ್ರ. ಅವರು ಜಾತ್ರೆಯಲ್ಲಿನ ದೇವರ ಉತ್ಸವಮೂರ್ತಿಗಳಂತೆ. ಜನರು ಒಬ್ಬರೊಡನೊಬ್ಬರು ಬೆರೆಯುವುದು, ಸೌಹಾರ್ದ ಬೆಳೆಸುವುದು, ಸುಖ ದುಃಖಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದು, ಸಂಬಂಧವನ್ನು ಬಲಗೊಳಿಸುವುದು, ಎಲ್ಲಾ ಮದುವೆಯ ಮನೆಯಲ್ಲಿಯೇ. ವರ್ಷದಲ್ಲಿ ಹೆಚ್ಚು ದಿವಸ ಒಬ್ಬರನ್ನೊಬ್ಬರು ನೋಡದೆ ಏಕಾಂತವಲ್ಲಿ ಕಳೆದಿರುವ ಜನ. ಮನುಷ್ಯ ಜೊತೆಯ ಜನರ ಸಂಗವನ್ನು ಆಶಿಸುತ್ತಾನೆ. ಅದರ ಪ್ರತಿಧ್ವನಿ ಮಲೆನಾಡಿನ ಮದುವೆ. ಇದರಲ್ಲಿ ಬಡವರು ಬಲ್ಲಿದರು ಎಂಬ ಭೇದವಿಲ್ಲದೆ ಎಲ್ಲರೂ ಪಾಲುಗೊಳ್ಳುತ್ತಾರೆ. ಇದರಲ್ಲಿ ಹೆಂಗಸರ ಸಂಭ್ರಮವಂತೂ ವರ್ಣನಾತೀತ. ಅವರಿಗೆ ಜೊತೆಯವರೊಡನೆ ನೆರೆಯಲು ಇದೊಂದೇ ಸಮಯ. ತಮ್ಮ ಸಂಬಂಧದವರಲ್ಲಿ ಮದುವೆಯೆಂದರೆ ಸಾಕು. ಹೆಂಗಸಿನ ಹಿಗ್ಗು ಹಿಡಿಸಲಾರದುದಾಗುತ್ತದೆ. ಸಂಸಾರದಲ್ಲಿ ಸುಖಬಯಸುವ ಯಾವ ಗಂಡೂ ಆಕೆಯನ್ನು ಆಗ ಅಡ್ಡಿಪಡಿಸುವುದಿಲ್ಲ.

ಒಡವೆ ವಸ್ತ್ರಗಳಿಗೆ ಬೆಲೆ ಬರುವುದು ಅದು ಮೆಚ್ಚಲ್ಪಟ್ಟರೆ ಮಾತ್ರ. ಅವು ಪ್ರದರ್ಶನಕ್ಕೋಸ್ಕರ ಮಾತ್ರ. ಆತ್ಮತೃಪ್ತಿಗಲ್ಲ. ಹಳ್ಳಿಯಲ್ಲಿ ನಿತ್ಯಜೀವನದಲ್ಲಿ ಅವನ್ನು ಯಾರು ಮೆಚ್ಚಬೇಕು ! ಇನ್ನೊಬ್ಬರು ತನ್ನನ್ನು ಮೆಚ್ಚಬೇಕು ಎಂಬ ಆಸೆ ಹೆಣ್ಣಿಗೆ ರಕ್ತಗತವಾದದ್ದು. ಆ ಆಸೆ ಫಲಿಸುವುದು ಮದುವೆಯ ಮನೆಯಲ್ಲೇ.

ಯಾವರೀತಿ ಇಲ್ಲಿಯ ಸಮಾರಂಭ ವೈಯುಕ್ತಿಕವಲ್ಲವೋ ಅಲ್ಲಿನ ಆದರಾತಿಥ್ಯಗಳೂ ವೈಯಕ್ತಿಕವಲ್ಲ. ಮದುವೆಯ ಖರ್ಚೆಲ್ಲಾ ಬಂಧು ಮಿತ್ರರ ಊಟೋಪಚಾರಗಳಿಗೋಸ್ಕರ. ಅದರಲ್ಲಿ ವಧೂವರರ ಪಾಲು ಬಲುಕಡಿಮೆ. ಆಗಿನ ಆತಿಥ್ಯ ಸತ್ಕಾರಕ್ಕೆ ಎಲ್ಲೆಯಿಲ್ಲ. ವಧೂವರರ ವಿಷಯದಲ್ಲಿ ಎಷ್ಟು ಮುತುವರ್ಜಿಯೋ ಬಂದವರ ವಿಷಯದಲ್ಲಿಯೂ ಅಷ್ಟೆ. ಅಲ್ಲಿಯ ಯಜಮಾನ ಹೆಸರಿಗೆ ಮಾತ್ರ. ಉಳಿದ ವ್ಯವಸ್ಥೆಯ ಜವಾಬ್ದಾರಿ ಬಂದವರದೇ. ಆತಿಥ್ಯದಲ್ಲಿ ಮಲೆನಾಡು ಎತ್ತಿದ ಕೈ. ಇನ್ನು ಮದುವೆಯಲ್ಲಿ ಅದು ಮಿತಿಮೀರಿಹೋಗುತ್ತದೆ. ಯಜಮಾನ ಬಡವನಾದರೇನು ? ಶ್ರೀಮಂತನಾದರೇನು? ಅನ್ನಪೂರ್ಣೆಯ ಅರ್ಚನೆ ಲೋಪವಿಲ್ಲದೆ ನಡೆಯಬೇಕು. ಮನೆಗಳು ಒಂದಕ್ಕೊಂದು ದೂರವಾದದ್ದರಿಂದ ಪಟ್ಟಣಗಳಂತೆ ತೆಂಗಿನಕಾಯಿ, ಹೂ ಗಂಧಗಳ ಅತಿಥಿಗಳು ಯಾರೂ ಬರುವುದಿಲ್ಲ. ಬಂದವರು ಮದುವೆಯ ನಾಲ್ಕುದಿನವೂ ಅಲ್ಲೇ ತಳಊರುತ್ತಾರೆ. ಅವರಿಗೆ ಸ್ನಾನ ಊಟ, ತಿಂಡಿ ಕಾಫಿ, ಹಾಸಿಗೆ, ಔಷಧೋಪಚಾರಗಳು, ಮನರಂಜನೆಗಳು. ಕೋಲಾಹಲವೋ ಕೋಲಾಹಲ. ಅದೇ ಒಂದುರೀತಿಯ ಸೊಗಸು. ಅದೊಂದು ರಸಿಕರಿಗೆ ರಸದೌತಣ.

ರಂಗಣ್ಣ ಮದುವೆಗೆ ಹೋದವನು ಆ ಕೋಲಾಹಲವಲ್ಲಿ ಲೀನನಾಗಿ ಹೋದ. ತನ್ನ ನಾಗರೀಕತೆಯ ಮುಸುಕು ಇಲ್ಲಿ ಹಾಸ್ಯಾಸ್ಪದವೆಂದು ತೋರಿತು ಅವನಿಗೆ. ಇವರ ಸರಳತೆಯ ಮುಂದೆ ತನ್ನ ಆ ಕೃತಕತೆ ನಾಚಿಕೆಗೇಡೆಂದು ತೋರಿತು. ಆದರೆ ಆ ಸಂತೋಷದಲ್ಲಿ ಪೂರಾ ಪಾಲುಗೊಳ್ಳುವುದು ಅವನಿಂದಾಗಲಿಲ್ಲ. ಏಕೆಂದರೆ ಎರಡನೆಯ ದಿನವೇ ಅಕಸ್ಮಾತ್ ಲಲಿತೆ ಸಿಕ್ಕಿಬಿಟ್ಟಳು.

ಇಬ್ಬರ ಕಣ್ಣುಗಳೂ ಎಂದಿನಂತೆ ಮಾತಾಡಿದುವು. ರಂಗಣ್ಣ ತನ್ನ ನಿರ್ಧಾರದಂತೆ ಮೊದಲಸಾರೆ ಮಾತಾಡಿಯೇ ಬಿಟ್ಟ. ' ಏನು ಲಲಿತ, ತಾತ ಬರಲಿಲ್ಲವೇ?' ಇನ್ನು ಚಿಕ್ಕಮುಡುಗಿ ಆಕೆ. ಅವಳೊಂದಿಗೆ ಮಾತಾಡಲು ಅವನೇಕೆ ಅಷ್ಟುಕಷ್ಟಪಟ್ಟನೋ ತಿಳಿಯದು. ಅದಕ್ಕೆಷ್ಟುಸಂಭ್ರಮ. ಮನಸ್ಸಿನಲ್ಲೆಷ್ಟು ಗುಣಾಕಾರ.

ಲಲಿತ ಸರಳವಾಗಿ ಉತ್ತರವಿತ್ತಳು. ' ಇಲ್ಲ ಭಾವ. ಶೃಂಗೇರಿಯಲ್ಲೇ ಇದ್ದಾರೆ'. ರಂಗಣ್ಣ ಉಬ್ಬಿಹೋದ. ಭಾವ ! ಭಾವ ! ಅವಳು ಅವನನ್ನು ಹಾಗೆ ಸಂಬೋಧಿಸಿದುದರಲ್ಲಿ ಅವನಿಗೇನೋ ಹೆಚ್ಚಳತೋರಿತು. ಸಾವಿರಮಾತುಗಳನ್ನಾಡಿದ್ದರೂ ಅವನಿಗೆ ಅವು ಆ ಒಂದು ಮಾತಿನಷ್ಟುಹಿತಕರವಾಗುತ್ತಿರಲಿಲ್ಲ.

ಒಂದೇ ದಿನವಿದ್ದು ಹೊರಟುಹೋಗಬೇಕೆಂದಿದ್ದ ರಂಗಣ್ಣನ ನಿರ್ಧಾರವೀಗ ಕರಗಿ ಹೋಯಿತು. ಅವನಲ್ಲಿಂದ ಕದಲಲೇ ಇಲ್ಲ. ಲಲಿತೆಯ ನಡೆನುಡಿಗಳನ್ನು ಅವಲೋಕಿಸಲು ಅವನಿಗೀಗ ಸುಸಂಧಿ. ಇಂತಹ ಗಲಾಟೆಯಲ್ಲಿ ಯಾರನ್ನಾದರೂ ಕಣ್ಣಿಟ್ಟುನೋಡುವುದು ಸುಲಭ. ನಾಚಿಕೆ, ಅತಂಕ, ಜನರದೃಷ್ಟಿ, ಇವುಗಳ ಮೇಲೆ ಗಲಾಟೆಯ ತೆರೆ ಹಾಯ್ದು, ಆ ತೆರೆಯ ಮರೆಯಲ್ಲಿ ಏನುಮಾಡಲೂ ಅವಕಾಶವಾಗುತ್ತದೆ. ಲಲಿತೆಯ ಉಡಿಗೆ ತೊಡಿಗೆ ತೀರಾ ಸಾಧಾರಣವಾಗಿದ್ದರೂ ಅವುಗಳಲ್ಲಿ ಒಂದು ನಾಜೂಕು ಇರುತ್ತಿತ್ತು. ಅವುಗಳಲ್ಲಿಯೇ ಪರಸ್ಪರ ಮೇಳವಿದ್ದು ಸೊಗಸಿರುತ್ತಿತ್ತು. ಅವಳ ಸೀರೆಯುಡುವರೀತಿ. ಅವಳ ಬೈತಲೆ, ಅವಳ ತಿಲಕ ಎಲ್ಲವೈಶಿಷ್ಟ್ಯದಿಂದ ಕೂಡಿದ್ದು, ಮನಃಪೂರ್ವಕವಾಗಿಯೇ, ಸೌಂದರ್ಯದ ತಿರುಳನ್ನು ತಿಳಿದು ಮಾಡಿದ್ದು ಎನ್ನುವಂತಿತ್ತು. ಅವಳ ನಡೆನುಡಿಗಳಲ್ಲಿನ ನಯ, ಗಾಂಭೀರ್ಯ, ಅವಳ ಕೆಲಸದಲ್ಲಿನ ಪಿತರಣೆ, ಜಾಗರೂಕತೆ, ಅವಳ ಹಾಸ್ಯಪ್ರವೃತ್ತಿ ಅವನ ಮನಸ್ಸನ್ನು ಸೂರೆಗೈದವು. ಅವಳ ಕಂಠಧ್ವನಿಯಂತೂ ಸ್ವರ್ಗೀಯವಾಗಿತ್ತು. ನಾಗೋಲಿಯದಿನ ಕಣ್ಣೀರ ಹೊಳೆಯೊಂದಿಗೆ ಹೆಣ್ಣೊಪ್ಪಿಸಿಕೊಟ್ಟರು. ಎಲ್ಲರೂ

ಹೊರಟುಹೋದಮೇಲೆ ಮನೆಯೆಲ್ಲಾಶೂನ್ಯವೆಂದು ಕಂಡಿತು. ಅವರ ಜೊತೆಗೆ ಲಲಿತೆಯೂ ಹೊರಟುಹೋದಳು. ರಂಗಣ್ಣನಿಗೆ ಆಗ ಎಲ್ಲವೂ ಬರಿಶೂನ್ಯವಾಗಿ ತೋರಿತು.

[೫]

ಈಗ ಲಲಿತೆ ರಂಗಣ್ಣನೊಂದಿಗೆ ಧಾರಾಳವಾಗಿ ಮಾತಾಡುತ್ತಾಳೆ. ಶ್ರೀನಿವಾಸಯ್ಯನವರು ಇವರಿಬ್ಬರನಡುವೆ ಸಲುಗೆಬೆಳೆದುಬರುವಂತೆ ಪ್ರಯತ್ನಪಡುತ್ತಾರೆ. ಮದುವೆಯ ಪ್ರಸ್ತಾಪ ಯಾರೂ ಎತ್ತದಿರುವುದರಿಂದ ಲಲಿತೆಯ ನಾಚಿಕೆ ಅಡಗಿಹೋಗಿದೆ. ಎಷ್ಟೋ ವೇಳೆ ಅವರಿಬ್ಬರೇ ಕುಳಿತು ಹರಟೆ ಹೊಡೆಯುತ್ತಿರುತ್ತಾರೆ. ಬೆಂಗಳೂರಿನ ನಾಗರೀಕತೆಯ ವೈಭವವನ್ನೆಲ್ಲಾ ರಂಗಣ್ಣ ರಂಗುಕೊಟ್ಟು ಲಲಿತೆಗೆ ಹೇಳುವನು. ಇನ್ನೂ ಮೋಟಾರು ಹತ್ತದಿದ್ದ ಆ ಹುಡುಗಿ ಅದನ್ನೆಲ್ಲಾ ಕೇಳಿ ಬೆರಗಾಗುವಳು. ಅಲ್ಲಿಯ ಬಂಗಲೆಗಳು, ರೈಲು ಮೋಟಾರುಗಳು ಅಲ್ಲಿಯಜನರ ಶೃಂಗಾರಶಿಸ್ತುಗಳು ಎಲ್ಲಕೇಳಿ ಅದೊಂದು ಸ್ವರ್ಗಸಮವಾದ ಪ್ರಪಂಚ ಎಂದು ಲಲಿತ ಭಾವಿಸುವಳು. ರಂಗಣ್ಣನಿಗೆ ಬೇರೆ ತರಹೆಯ ಚಿತ್ರ ರೂಪಿಸುವುದರಲ್ಲಿ ಆಸಕ್ತಿಯಿಲ್ಲ. ಪ್ರಾಯಶಃ ಅದರಲ್ಲಿ ಲಲಿತೆಗೆ ಉತ್ಸಾಹವಿರದು ಎಂಬ ಅಭಿಪ್ರಾಯವೇನೋ. 'ನಾನೂ ಎಂದಾದರೂ ಒಂದುದಿವಸ ಬೆಂಗಳೂರು ನೋಡಬೇಕು' ಎಂದು ಲಲಿತ ತನ್ನಾಶೆಯನ್ನು ವ್ಯಕ್ತಪಡಿಸುವಳು. 'ನೋಡೇ ನೋಡುವಿ' ಎಂದು ರಂಗಣ್ಣ ಹೇಳುವನು.

ರಂಗಣ್ಣರಜಕ್ಕೆ ಬರುವಾಗ ಲಲಿತೆಗೆ ಏನಾದರೂ ತಂದೇತರುವನು. ಬಣ್ಣ ಬಣ್ಣದ ರಿಬ್ಬನ್‌ಗಳು, ಹೊಸನಮೂನೆಯ ಬಳೆಗಳು. ವಿಧವಿಧವಾದ ಕುಂಕುಮಗಳು ಒಳ್ಳೆಯ ಚೀಟಿ, ವಾಯಿಲ್ ಬಟ್ಟೆಗಳು,-ತಂದು ಅತ್ತಿಗೆಗೆ ಗೊತ್ತಾಗದಂತೆ ಗುಟ್ಟಾಗಿ ಕೊಡುವನು, ಅತ್ತಿಗೆಗೆ ಗೊತ್ತಾದರೆ ಹಾಸ್ಯಮಾಡುತ್ತಾಳೆ ಎಂಬ ಭಯ. ಆಕೆಗೆ ತಾನು ಶ್ರೀನಿವಾಸಯ್ಯನ ಮನೆಗೆ ಹೋಗುವುದಿಷ್ಟವಿಲ್ಲ ಎಂದು ಅವನಿಗೆ ಗೊತ್ತು. ಈ ಸಣ್ಣಪುಟ್ಟ ವಸ್ತುಗಳಿಂದ ಲಲಿತೆ ಸಂತೋಷಪಡುವಳು.

'ಹೌದೇಭಾವ. ಬೆಂಗಳೂರಿನಲ್ಲಿ ಹೆಂಗಸರು ಸಂಗೀತ ಕಛೇರಿ ನಡೆಸುತ್ತಾರಂತೆ! ನಮ್ಮ ಸಂಗೀತದ ಮೇಷ್ಟ್ರು ಹೇಳುತ್ತಿರುತ್ತಾರೆ'

'ಅದೇನು ಸಾಮಾನ್ಯವಾದ ವಿಷಯ. ಯಾವಾಗಲೂ ಅಂತಹ ಕಛೇರಿಗಳು ನಡೆಯುತ್ತವೆ.

' ನೀವು ಯಾವುದಕ್ಕಾದರೂ ಹೋಗಿದ್ದೀರಾ? '

' ಹೋಗದೇ ಏನು ! ಬೇಕಾದಷ್ಟುಕಛೇರಿ ನೋಡಿದ್ದೇನೆ !

' ಚನ್ನಾಗಿರುತ್ತದೆಯೇನು ?'

'ಅದೇನು ಹಾಗೆಕೇಳುತ್ತೀಯಲ್ಲಾ ಲಲಿತ. ಸರಸ್ವತಿ ಹೆಣ್ಣಲ್ಲವೇನು ? ಸಂಗೀತ ಹೆಂಗಸರಿಗೆ ಒಲಿದಹಾಗೆ ಗಂಡಸರಿಗೆ ಎಲ್ಲಿ ಒಲಿದೀತು ?'

ಲಲಿತ ನಿರಾಶೆಯ ನಿಟ್ಟುಸಿರು ಬಿಡುವಳು. ' ಅದೇನು !' ಎಂದುಕೇಳಿದ ರಂಗಣ್ಣ. ' ನಮ್ಮ ಮೇಷ್ಟ್ರು ಹೇಳಿದರು. ನಿನಗೆ ಇನ್ನೇನೂ ಹೆಚ್ಚುಹೇಳಿಕೊ ಡುವುದು ನನ್ನಿಂದಾಗುವುದಿಲ್ಲ. ನನಗೆ ಬರುವಷ್ಟೂ ನಿನಗೆ ಹೇಳಿಕೊಟ್ಟಾಯಿತು. ನಿನಗೆ ಮುಂದಿನಪಾಠ ಹೇಳುವವರು ಶೃಂಗೇರಿಯಲ್ಯಾರೂ ಇಲ್ಲ. ಅಂತಹವರು ಬೆಂಗಳೂರು ಮೈಸೂರುಗಳಲ್ಲಿ ಮಾತ್ರ ಇದ್ದಾರೆ,' ಎಂದು.

' ನಿನಗೆ ಅಷ್ಟು ಸಂಗೀತಕಲಿಯಲು ಆಸಕ್ತಿಯೇನು ಹಾಗಾದರೆ ? ಕಛೇರಿ ಗಿಛೇರಿ ಮಾಡಬೇಕೂಂತ ಆಸೆಯೇನು ?'

'ಕಛೇರಿ ನನಗೆ ತಿಳಿಯದು ಅದಕ್ಕೋಸ್ಕರವೇ ಏನು ಸಂಗೀತಕಲಿಯುವುದು? ಸಂಗೀತದಿಂದ ದೇವರ ಸಾಕ್ಷಾತ್ಕಾರವಾಗುವುದು ಎಂದು ಹೇಳುತ್ತಾರೆ ನಮ್ಮ ಮೇಷ್ಟರು! ಅದೇನೋ ಭಾವ, ನನಗೆ ಅದೆಲ್ಲಾ ಅರ್ಥವಾಗುವುದಿಲ್ಲ. ಆದರೆ ಒಂದು ಒಳ್ಳೆಯಹಾಡು ಹಾಡುತ್ತಿರುವಾಗ ಬೇರೆ ಯೋಚನೆಯೇ ಮರೆತುಹೋಗುತ್ತೆ. ಮನಸ್ಸಿಗೆ ಆನಂದವಾಗುತ್ತೆ. ನಮ್ಮ ಮೇಷ್ಟರು ಹೇಳುತ್ತಾರೆ. ಕಲಿತದ್ದು ಕಡಿಮೆ. ಕಲಿತೆ ಎಂದು ಹೇಳಿಕೊಳ್ಳುವಷ್ಟೂ ಇಲ್ಲ. ಕಲಿಯುವುದು ಬೇಕಾದಷ್ಟಿದೆ ಎಂತ. ನಿಜವಾಗಿಯೂ ಕಲಿತೆ ಎಂದು ಹೇಳಿಕೊಳ್ಳುವಷ್ಟು ಕಲಿತಾಗ ಇನ್ನೂ ಎಷ್ಟು ಆನಂದವಾಗುತ್ತೋ ಏನೋ'

ರಂಗಣ್ಣನಿಗೆ ಲಲಿತಯ ಸಂಗೀತದ ಗೀಳುನೋಡಿ ಅಚ್ಚರಿ. ' ನನ್ನೊಂದಿಗೆ ಬಾ ನೀನು ಕಲಿಯುವಷ್ಟು ಸಂಗೀತ ಕಲಿಸುತ್ತೇನೆ ' ಎಂದು ಹೇಳಲು ತವಕ-ಅದರ ಆದಿನ ವಿನ್ನೂ ಬಂದಿಲ್ಲ ಎಂದು ಸುಮ್ಮನಾಗುವನು.

' ನಿನ್ನ ಆಸೆ ಎಂದಾದರೂ ಪೂರ್ತಿಯಾಗುವುದು. ಬಯಕೆ ಬಲವಾಗಿದ್ದರೆ ಅದು ಎಂದಾದರೂ ಪೂರ್ತಿಯಾಗಲೇಬೇಕು' ಎಂದು ಭರವಸೆಕೊಡುವನು ರಂಗಣ್ಣ.

ಲಲಿತೆಗೆ ಸಂಬಿಕೆಸಾಲದು. ತಾನೆಲ್ಲಿ–ಬೆಂಗಳೂರಿನಲ್ಲಿ ಸಂಗೀತ ಕಲಿಯುವುದೆಲ್ಲಿ? ಎಲ್ಲಾ ತೀರದತಾಸೆ ಎಂದುಕೊಳ್ಳುವಳು ಮನಸ್ಸಿನಲ್ಲಿ.

ಶೃಂಗೇರಿಯನ್ನು ಬಿಡಲಾರದೇಬಿಟ್ಟು ರಂಗಣ್ಣಹಳ್ಳಿಗೆಹೊರಟ. ಅಲ್ಲಿ ನಾಲ್ಕು ದಿನಗಳಿದ್ದು ಪುನಃ ಬೆಂಗಳೂರಿಗೆ ಹೊರಡಬೇಕಾಗಿತ್ತು. ರಜ ಇನ್ನೇನು ತೀರುವುದರಲ್ಲಿತ್ತು. ಹೊಸಹಳ್ಳಿಗೆ ಹೋಗಬೇಕಾದರೆ ತುಂಗಾನದಿಯನ್ನು ದಾಟಿ ನಾಲ್ಕಾರು ಮೈಲಿ ಹೋಗಬೇಕು. ನದಿಯನ್ನುದಾಟಿದಮೇಲೆ ಗುಡ್ಡಗಳಸಾಲು. ಮಧ್ಯೆ ಮಧ್ಯೆ ಜುಳುಜುಳು ಶಬ್ದಮಾಡುತ್ತ ಹರಿಯುವ ತಿಳಿನೀರಿನ ತೊರೆ. ಎಲ್ಲೆಲ್ಲಿಯೂ ಹಸಿರು. ಗುಡ್ಡವನ್ನು ಹತ್ತುವಾಗ ಆಯಾಸದಿಂದ ಮೇಲುಸಿರುಬರುತ್ತಿತ್ತು. ಅಲ್ಲಿಯೇ ಒಂದು ಕೋಡುಗಲ್ಲಿನ ಮೇಲೆ ವಿಶ್ರಾಂತಿಗಾಗಿ ಕುಳಿತ. ಗಾಳಿತಣ್ಣಗೆ ಬೀಸುತ್ತಿತ್ತು. ಸೂರ್ಯನಿನ್ನೂ ಮೇಲೇರಿರಲಿಲ್ಲ. ಬಿಸಿಲಿನ ತಾಪ ಹೆಚ್ಚಿರಲಿಲ್ಲ. ಅಲ್ಲಿಕುಳಿತು ಸುತ್ತಲಿನ ಸೃಷ್ಟಿಸೌಂದರ್ಯವನ್ನು ಅವಲೋಕಿಸಿದ. ಇಂದು ಅವನಿಗೆ ಅದರಲ್ಲೇನೋ ಹೊಸತು ಕಂಡಿತು. ಅದರಲ್ಲಿಯ ಹೊಸ ಆಕರ್ಷಣವು ಅವನ ಮನವನ್ನುಮುಟ್ಟಿತು.

ಕೆಳಭಾಗದಲ್ಲಿ ವಿಸ್ತಾರವಾದ ಕಾಡು. ಆಕಾಶವನ್ನು ಮುಟ್ಟುವ ಹಂಬಲದಿಂದ ಬೆಳೆದು ನಿಂತ ಹೊನ್ನೆ, ನಂದಿ, ಹೆಬ್ಬಲಸು, ಜಿನುಗಿ, ಮತ್ತಿ ಮುಂತಾದ ಮರಗಳು. ಕಾಡಿನ ಅಂಚಿನಲ್ಲಿ ಬೆಳೆದು ನಿಂತಿರುವ ಬಿದಿರುಮೆಳೆಗಳು ಗಾಳಿ ಬಂದೊಡನೆ ಶಬ್ದಮಾಡುತ್ತ ಮೆಳೆಗೆಮೆಳೆಯೇ ಒಂದಾಗಿ ವೈಯ್ಯೊಲೆಯುತ್ತಿವೆ. ತನ್ನಹಿಂದೆ ಇಳಿಜಾರಾದ ಬಯಲು. ಬಯಲಹಿಂದೆ ಪರ್ವತಶಿಖರ ಬೋಳಾಗಿ ಹಸಿರಾಗಿ ನಿಂತಿದೆ. ಮುಂದೆ ದೂರದಲ್ಲಿ ಒಂದರ ಹಿಂದೊಂದು ಪರ್ವತಪಂಕ್ತಿಗಳು ದಿಗಂತದವರೆಗೂ ಹಬ್ಬಿವೆ; ಮಲಗಿರುವ ಮದ್ದಾನೆಗಳಂತೆ ಕಾಣುತ್ತಿವೆ. ಅವುಗಳ ಮಧ್ಯದಲ್ಲಿ ಕಾಣುವ ಬಿಳಿಯ ತೇಪೆಯೇ ಶೃಂಗೇರಿ ಹಕ್ಕಿಗಳ ವಿಚಿತ್ರವಾದ ಸ್ವರಗಳ ಮೇಳ. ಗುಡ್ಡದ ಮೇಲಿಂದ ಧುಮುಕುತ್ತಿರುವ ಸರಿಯೊಂದರ ಗಂಭೀರನಾದ. ಮರಗಳ ಸಂದಿನಲ್ಲಿ ತೂರಿಬರುತ್ತಿರುವ ಗಾಳಿಯ ಸಂಗೀತ ಶ್ರುತಿ. ತನ್ನೂರು ಇಷ್ಟು ಚಂದವೆಂದು ಇದುವರೆಗೂ ಅವನಿಗನ್ನಿಸಿರಲಿಲ್ಲ. ಬಹುಸಾಧಾರಣವಾದ ಸಂಗತಿಯದು. ತನ್ನತಾಯಿ ತಂಗಿಯರು ಸುಂದರಿಯರೇ ಎಂದು ಯಾರು ಪರೀಕ್ಷಿಸುತ್ತಾರೆ? ಅಕಸ್ಮಾತ್ ಆಭಾವನೆ ಬಂದು ಅವಳು ಸುಂದರಿಯರೆಂದು ಖಚಿತವಾದರೆ ಅದರಲ್ಲಿ ಅಪೂರ್ವ ಆನಂದವಿರುತ್ತದೆ. ಈಗ ಅವನಿಗೆ ಈ ವಾತಾವರಣವನ್ನು

ನೋಡಿ ಹಾಗೆಯೇ ಎನ್ನಿಸಿತು. ಏನು ಹುಚ್ಚುತನಗೆ! ಇದನ್ನು ಬಿಟ್ಟು ಯಾವುದೋ ಬೆಂಗಾಡಿನಲ್ಲಿ, ಕಿವಿಕೊರೆಯುವ, ಮನವನ್ನು ಅರೆಯುವ ಗಲಾಟೆ, ಗೊಂದಲಗಳಲ್ಲಿ ಜೀವನ ಕಳೆಯಬೇಕೆಂಬ ಆಸೆ ಏಕೆ ತನ್ನ ಮನಸ್ಸಿನಲ್ಲಿ ಬೇರೂರಿತು? ತನ್ನ ತಂದೆ ಕಳೆದ ಸಂಪತ್ತನ್ನು ತಾನು ಪುನಃ ಸಂಪಾದಿಸಬೇಕು. ಆದರೆ ತನ್ನ ಓದಿನಿಂದ ಅದು ಸಾಧ್ಯವೆ? ಎಷ್ಟು ಜನ ತನ್ನಂತೆಯೇ ಓದಿದವರು ಕೆಲಸಕ್ಕೆ ಅಲೆದಾಡುತ್ತಿಲ್ಲ.! ಏನು ಕೆಲಸತಾನೆ ಸಿಕ್ಕೀತು? ಅದರಿಂದ ತನ್ನ ಜೀವನಕಳೆದು ಏನು ಮಿಕ್ಕೀತು.? ತನ್ನೂರಿನಲ್ಲಿ ನಿಂತರೇನೋ ಮನಸ್ಸಿಗೆ ಸುಖ ಶಾಂತಿಗಳುದೊರೆಯುವುವು. ಇಲ್ಲಿ ಪರರು ತಮ್ಮ ಹೆಚ್ಚುಗಳವನ್ನು ಪ್ರದರ್ಶನಮಾಡಿ ಮನಸ್ಸು ನೋಯಿಸಲು ಅವಕಾಶವಿಲ್ಲ. ಪಟ್ಟಣದಂತಹ ಆಮೋದ ಪ್ರಮೋದಗಳಿಗೆ ಇಲ್ಲಿ ಅವಕಾಶವಿಲ್ಲ. ಹಾಗಾದರೆ ಜೀವನದ ಗುರಿ ಅದೇ? ಅದಲ್ಲದಿದ್ದರೆ ಇಲ್ಲಿಯ ಸರಳಜೀವನವೇ? ಅದು ಗಹನವಾದ ವಿಚಾರ. ಬಹಳಹೊತ್ತು ರಂಗಣ್ಣ ಯೋಚಿಸುತ್ತ ಕುಳಿತ. ಕೊನೆಗೆ ಬಿಸಿಲ ತಾಪ ನೆತ್ತಿಗೆ ತಾಕಿ, ಎದ್ದು ಮುಂದೆ ಹೊರಟ. ಮುಂದೆ ಏರುತಗ್ಗುಗಳು, ತೋಟಗದ್ದೆಗಳು. ಎಲ್ಲಿ ಸ್ವಲ್ಪ ಮಟ್ಟವಾದ ಜಾಗ, ನೀರಿನಸೆಲೆ ಸಿಕ್ಕಿದರೆ ಅಲ್ಲೆಲ್ಲಾ ತೋಟಗದ್ದೆಗಳು. ಇಂತಹ ಸಸ್ಯಶ್ಯಾಮಲವಾದ ದೇಶದ ಸಂಪತ್ತಿಗಿಂತ ಮಿಗಿಲಾದುದ್ಯಾವುದು. ಇವನ್ನುಬಿಟ್ಟು ರಣರಣ ಬಿಸಿಲು ಉರಿಯುತ್ತ ಸುಡುಗಾಡಿನಂತಿರುವ ಪ್ರದೇಶ, ಮುಳ್ಳುಪೊದೆಗಳು, ಈಚಲಮರಗಳೇ ಸಸ್ಯ, ಬೆವರೇ ನೀರು–ಅಂತಹಸ್ಥಳಕ್ಕೆ ತಾನೇಕೆ ಹೋಗಬೇಕು.?

ಮುಂದೆ ಸುಬ್ಬಯ್ಯನು ಸಂಪಾದಿಸಿ, ಈಗ ಅನ್ಯರಪಾಲಾಗಿರುವ ತೋಟಬಂದಿತು. ಸುತ್ತಲೂ ಅಡಿಕೆಯತೋಟ. ಮಧ್ಯೆಗದ್ದೆ. ತೋಟದಲ್ಲಿ ಹರಿಯುವ ಒರತೆ ನೀರು ಮೂರುಧಾರೆಕೂಡಿ ಒಂದು ಸಣ್ಣತೊರೆಯಾಗಿ ಗದ್ದೆಯ ಮಧ್ಯೆ ಹರಿಯುತ್ತಿದೆ. ತೋಟದ ಹಿಂದೆ ಸ್ವಲ್ಪದೂರ ಗುಡ್ಡದಬಯಲು. ಬಯಲಿನಲ್ಲಿ ಹುಲ್ಲು ಬೆಳೆದುನಿಂತಿದೆ. ಅದರಹಿಂದೆ ಕಾಡು. ಎತ್ತರದ ಸ್ಥಳದಲ್ಲಿ ಮನೆ. ಇಲ್ಲಿ ಯಾವುದಕ್ಕೂ ಕೊರತೆಯಿಲ್ಲ. ಗದ್ದೆಯಲ್ಲಿ, ಕಬ್ಬು, ಭತ್ತ, ತರಕಾರಿ, ಗುಡ್ಡದಲ್ಲಿ ಕಿತ್ತಲೆ, ಮಾವು, ಕಾಫಿ, ಗೇರು, ಹಲಸು, ಗದ್ದೆಯಂಚಿನಲ್ಲಿ ತೆಂಗು–ಯಾವುದು ಬೇಕು ಅದು ಬೆಳೆಯುವಂತಹ ಜಾಗ. ಆದರೆ ಅಪ್ಪ ಆ ಚಿನ್ನದಗಣಿಯನ್ನು ಇನ್ನೊಬ್ಬರಿಗೆ ಭೋಗ್ಯಮಾಡಿದ್ದರು. ತನಗೆ ಸಿಕ್ಕಿದರೆ ನಾಲ್ಕೇವರ್ಷದಲ್ಲಿ ಇದನ್ನು ನಂದನವನ ಮಾಡಿಯೇನು ಎಂದುಕೊಂಡ ರಂಗಣ್ಣ.

‘ ಎಷ್ಟುದಿವಸ ಕೂತುಬಿಟ್ಟೆಯೋ ಶೃಂಗೇರಿಯಲ್ಲಿ ? ಎಂದರು ತಾಯಿ. ಕುಡಿಯಲು ನಿಂಬೇಹಣ್ಣಿನ ಪಾನಕ ಮಾಡಿಕೊಟ್ಟು, ತಿನ್ನಲು ಸೊಗಸಾಗಿ ಕಳಿತ ವಾಟೆ ಬಾಳೆಯಹಣ್ಣು, ಹೆರೆದುಪ್ಪ, ತಂದುಕೊಟ್ಟರು. ತಾಯಿಯ ಮಮತೆನೋಡಿ ತಾನಿಷ್ಟು ದಿವಸ ಅಲ್ಲಿ ಯಾವುದೋ ಹೆಣ್ಣಿನಮುಖ ನೋಡಿ ಕುಳಿತುದಕ್ಕೆ ತುಸು ನಾಚಿಕೆಯಾಯಿತು. ‘ಅಣ್ಣ ಒತ್ತಾಯಮಾಡಿದರು ’ ಎಂದು ನೆಪಹೇಳಿದ ರಂಗಣ್ಣ.

‘ ಅಪ್ಪ ಎಲ್ಲಿ ಹೋಗಿದ್ದಾರೆ ? ’

‘ ಅವರು ಶಿವಮೊಗ್ಗಾಕ್ಕೆ ಹೋಗಿ ಮೂರುದಿವಸವಾಯಿತು ’

‘ ಯಾವಾಗಬರುತ್ತಾರೆ ? ’

‘ ಅವರದನ್ನೆಲ್ಲಾ ಎಲ್ಲಿಹೇಳುತ್ತಾರೆ ? ಯಾವಾಗ ಬರುತ್ತಾರೋ ಏತಕ್ಕೆ ಹೋಗಿದ್ದಾರೋ ಯಾರಿಗೆಗೊತ್ತು ? ’ ತಾಯಿಯ ನುಡಿಯಲ್ಲಿ ಬೇಸರವಿತ್ತು. ತಾಯಿ: ‘ನಾವು ಹೆಂಗಸರು ಮನೆಯಲ್ಲಿ ಮುಸುರೆ ತಿಕ್ಕುವುದಕ್ಕೆ,ಕಾಲುಕಸಕ್ಕೆ ಸಮ.’ ನಮ್ಮಕಾಲ ಹೀಗೆಯೇ ಹೋಯಿತು. ನೀನೂ ಹೀಗೆಮಾಡಬೇಡ ರಂಗೂ ’ ಎಂದು ಹೊರಟುಹೋದರು. ಹೋಗುವಾಗ ಕಣ್ಣೀರೊರೆಸಿಕೊಳ್ಳುವುದು ಅವನ ಕಣ್ಣಿಗೆ ಬಿತ್ತು. ಬಹುಶಃ ಅವರು ಆಚೆಗೆ ಹೋಗಿ ಅತ್ತಿರಬೇಕು. ತಾಯಿಯ ಮನಸ್ಸಿನಲ್ಲಿ ಎಂತಹ ಬೇಗೆಬೇಯುತ್ತಿದೆ ಎಂಬುದರ ಅರಿವು ರಂಗಣ್ಣನಿಗೆ ಇಂದಾದಷ್ಟು ಹಿಂದೆಂದೂ ಆಗಿರಲಿಲ್ಲ.

ತಾಯಿಗೆ ಒಂದುದಿವಸವೂ ಮನೆಯಲ್ಲಿ ಸುಖವಿಲ್ಲವೆಂದು ರಂಗಣ್ಣ ಮನಸ್ಸಿನಲ್ಲಿ ಸಂಕಟಪಟ್ಟ. ಸಂಪತ್ತು ತುಂಬಿದ ಮನೆಗೆ ಲಕ್ಷ್ಮಿಯಂತೆ ತಾಯಿ ಬಂದಳು ಅವಳ ಮದುವೆಯ ವಿವರ ಅವಳ ಬಾಯಿಂದಲೇ ಕೇಳಿದ್ದ. ಎಂಟುವರ್ಷಕ್ಕೇ ಮದುವೆ. ಅಪ್ಪನಿಗಿನ್ನೂ ಹದಿನಾಲ್ಕೇವರುಷ. ಆ ಮದುವೆಯ ವೈಭವ ಇನ್ನೂ ತಾಯಿಯ ನೆನಪಿನಲ್ಲಿ ನಿನ್ನಿನ ಕನಸಿನಂತಿತ್ತು. ಅಜ್ಜನಮನೆಯವರೂ ಅನುಕೂಲವಂತರು. ಸುಬ್ಬಯ್ಯ ಜಿಪುಣರಾದರೂ ಮದುವೆ ಮುಂಜಿಗಳಲ್ಲಿ ಕೈಹಿಡಿದವರಲ್ಲ. ಆ ದಿಬ್ಬಣದ ಅಟ್ಟಹಾಸವೇನು, ಮನೆಗೆ ಮೂರು ಮೈಲಿದೂರದಿಂದಲೇ ಕೇಳಿಸುತ್ತಿತ್ತಂತೆ ಹಲಿಗೆ ಕೊಂಬಿನ ಅಬ್ಬರ. ದಿಬ್ಬಣದ ಎರಡುಕಡೆಯೂ ಹಿಲಾಲುಗಳು. ಮುಂದುಗಡೆ ಶೃಂಗೇರಿ ಪರಮೇಶ್ವರನ ಜೋಡುವಾಲಗ. ಕದ್ನಿಗಳು, ಗರ್ನಾಲುಗಳು. ಕುದುರೆಯಮೇಲೆ ಮದುವಣಿಗ. ದೇವರಕೋಣೆಯ ಕಿಟಿಕಿಯಿಂದ ತಾಯಿ ಈ ಸಂಭ್ರಮವನ್ನೆಲ್ಲಾ ನೋಡಿದ್ದಳಂತೆ. ದಿಬ್ಬಣ ಅಂಗಳದ ಅಂಚಿಗೆ ಬಂದಾಗ

ಎಲ್ಲರೊಡನೆ ತಾನೂ ಹೊರಗೆ ಓಡಿಬಂದಳಂತೆ. ಆಗ ಯಾರೋ 'ಏನೇ, ನಿನ್ನಮದುವೆಯ ದಿಬ್ಬಣ ನೀನೇ ಎದುರುಗೊಳ್ಳುತ್ತೀಯೇನೇ ?' ಎಂದು ಹಾಸ್ಯ ಮಾಡಿದರಂತೆ.

ಆ ಕುಂದಾಪುರದಿಂದ ಕರೆಸಿದವರು ಕಟ್ಟಿದ ಧಾರೆಯಮಂಟಪ! ಸೀರೆ ಒಡವೆಗಳ ವಿಸ್ತಾರವರ್ಣನೆ ತಾಯಿ ಉತ್ಸಾಹದಿಂದ ಮಾಡುತ್ತಿದ್ದರು. ಮೊದಲ ಸಾರಿ ಗಂಡನ ಮನೆಗೆ ಬರುವಾಗ ತಾನು ಮಂಚದಕೆಳಗೆ ಅವಿತುಕೊಂಡಳಂತೆ. 'ಯಾರ ಕಾಲುಕಟ್ಟಿದರೂ ಗಂಡನ ಮನೆಗೆ ಹೋಗುವುದು ತಪ್ಪಲಿಲ್ಲ;' ಎನ್ನುವುದು ಆಗಿನಕಾಲಕ್ಕೆ ಸರಿಹೋಗುತ್ತಿರಬಹುದು. 'ಈಗೇನುಬಿಡು. ಮದುವೆಯ ಮೊದಲೇ ಹುಡುಗಿಯರು ಗಂಡನಾಗೋನಕ್ಕೈಲಿ ಮಾತಾಡ್ತಾರೆ. ಗಂಡನ ಮನೆ ಅಂದರೆ ನಿಂತನಿಲುವಿನಲ್ಲಿಯೇ ಓಡಿಹೋಗುತ್ತಾರೆ. ನಮ್ಮಕಾಲದಲ್ಲಿ ಗಂಡನ ಮನೆಗೆ ಹೋಗುವುದು ಎಂದರೆ ಪ್ರಾಣವೇಹೋಗುತ್ತಿತ್ತು' ಎನ್ನುತ್ತಿದ್ದರು.

ಮದುವೆಯಾದಾಗ ಲಕ್ಷಮ್ಮನಿಗೆ ಎಳೆಯವಯಸ್ಸು. ಗಂಡನ ಮನೆಗೆ ಬಂಡಿ ಹೋಗುವ ದಾರಿಯಿರಲಿಲ್ಲ. ಮನೆಯಾಳು ಮಲ್ಲ ಅಕೆಯನ್ನು ಹೆಗಲ ಮೇಲೆ ಕೂರಿಸಿಕೊಂಡು ಗಂಡನಮನೆಗೆ ತಂದು ಬಿಡುತ್ತಿದ್ದನಂತೆ. ಹೀಗೆ ಒಂದು ಸಾರೆ ಅವನು ಕರೆತಂದಾಗ ಸುಬ್ಬಯ್ಯ ಯಾರೋ ಅಧಿಕಾರಿಗಳೊಡನೆ ಮಾತಾಡುತ್ತ ಜಗುಲಿಯ ಮೇಲೆ ಕುಳಿತಿದ್ದರು. ಅಂದು ಅವರಿಗೆ ಆಕೆ ತನ್ನ ಸೊಸೆ ಎಂದುಕೊಳ್ಳಲು ಬಹಳ ನಾಚಿಕೆಯಾಗಿ ಅಂಬಿನಿಂದ ಮನೆಗೆ ಸ್ವಲ್ಪದೂರವಿರುವಾಗಲೇ ಇಳಿದು ನಡೆ ದುಕೊಂಡು ಬರುವಂತೆ ಹೇಳಿದರಂತೆ.

ಮಾವ ಸ್ವಲ್ಪದಿನದಲ್ಲಿ ತೀರಿಹೋದರು. ಯಜಮಾನಿಕೆ ಗಂಡನಿಗಾಯಿತು. ಸುಬ್ಬಯ್ಯನ ಕಾಲದಲ್ಲಿ ಲಕ್ಷಮ್ಮನಿಗೆ ಮೈಮೇಲಿನ ಭಂಗಾರ ಹೊತ್ತುಕೊಂಡು ತಿರುಗುವುದೇ ಪ್ರಯಾಸವಾಗಿತ್ತು. ಅದು ಮಗನ ದರ್ಬಾರಿನಲ್ಲಿ ಸ್ವಲ್ಪಸ್ವಲ್ಪವಾಗಿ ಹಗುರವಾಗುತ್ತ ಬಂದಿತು. ಆಸ್ತಿಯೂ ಕರಗುತ್ತಬಂದಿತು. ಹೆಂಡತಿ ಏನಾದರೂ ಹೇಳಿದರೋ 'ಮನೆ ಮೂಳಿಯರಿಗೆಲ್ಲಾ ಏನುಪಾರುಪತ್ಯ' ಎಂದು ಗದರಿಸಿಬಿಡುತ್ತಿದ್ದರು ನರಸಿಂಹಯ್ಯ. ಇನೂ ಹೆಚ್ಚಾಗಿ ಮಾತಾಡಿದರೆ ಏಟುಗಳು ಮಳೆ ಯಂತೆ ಸುರಿಯುತ್ತಿದ್ದುವು. ನಾಲ್ಕುಮಕ್ಕಳ ತಾಯಿಯಾದರೂ ಗಂಡನಿಂದ ಏಟು ತಪ್ಪಲಿಲ್ಲ. ಅದೇ ಹುಚ್ಚಾಪಟ್ಟೆ ಹೊಡೆತ. ಆರುತಿಂಗಳ ಬಸಿರಿಯಾಗಿದ್ದಾಗ

ಒದೆದ ಒದೆತದಿಂದ ಸೊಂಟ ಉಳುಕಿ, ಹೆರಿಗೆ ಕಳೆಯುವವರೆಗೂ ಹಾಸಿಗೆ ಬಿಟ್ಟು ಏಳುವುದಕ್ಕಾಗಲಿಲ್ಲವಂತೆ. ಮನೆಯಲ್ಲಿ ದಿನವೂ ಹತ್ತೆಂಟುಜನ ಅತಿಥಿಗಳು. ಅವರಿಗೆ ಆದರಾತಿಥ್ಯಗಳು ಸ್ವಲ್ಪವೂ ಕುಂದಿಲ್ಲದೆ ನಡೆಯಬೇಕು. ಗಂಡ, ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಬೇಕು. ಇವರ ಮಧ್ಯೆ ನರಸಿಂಹಯ್ಯನಿಗೆ ಊರಮೇಲಿನ ತಿರುಗಾಟ. ಮನೆಗೆಲಸಗಳನ್ನೆಲ್ಲಾ ತಾಯಿಯೇ ನೋಡಿಕೊಳ್ಳಬೇಕು. ಎಲ್ಲ ವನ್ನೂ ಲಕ್ಷ್ಮಮ್ಮ ಒಬ್ಬರೇ ನಿರ್ವಹಿಸುತ್ತಿದ್ದರು. 'ಲಕ್ಷಮ್ಮನಿಂದ ಹೊಸಹಳ್ಳಿ ಯೊಂದು ಮನೆ' ಎಂದು ಊರಿನವರು ಹೇಳುತ್ತಿದ್ದರು.

ಇದರಮಧ್ಯೆ ತಾಯಿಯ ದುಃಖ ಸಾಲದು ಎಂತ ಆಕೆಗೆ ಒಬ್ಬ ಸವತಿಯೂ ಹುಟ್ಟಿಕೊಂಡಳು. ಸಾವಿತ್ರಿ ಮಾಲೇರ ಜಾತಿಯವಳು. ಬ್ರಾಹ್ಮಣರಲ್ಲಿ ಕುಲಗೆಟ್ಟ ವರೆಲ್ಲಾ ಒಂದು ತಮ್ಮದೇ ಜಾತಿ ಮಾಡಿಕೊಂಡು, ಕಾಲಕ್ರಮದಲ್ಲಿ ಎಲ್ಲರಂತೆ ಸಂಸಾರ ನಡೆಸುತ್ತಿದ್ದರು. ಆದರೆ ಅವರಲ್ಲಿ ಮದುವೆಯಾಗಬೇಕೆಂಬ ನಿರ್ಬಂಧವೇನೂ ಇರಲಿಲ್ಲ. ಹೆಣ್ಣುಮಕ್ಕಳನ್ನು 'ವೆಂಕಟರಮಣನಿಗೆ ಧಾರೆಯೆರೆಯುವ ಪದ್ಧತಿಯೂ ಇತ್ತು. ವ್ಯವಹಾರದಲ್ಲಿ ಶೋಭನಪ್ರಸ್ತದ ಖರ್ಚನ್ನು ವಹಿಸಿದವನು ಆಕೆಯ ಗಂಡ. ಅವನಿಗೇ ಪ್ರಥಮ ಸನ್ಮಾನ ಅವಳ ಮನೆಯಲ್ಲಿ- ಸಾವಿತ್ರಿಯ ಶೋಭನ ಪ್ರಸ್ತದಲ್ಲಿ ಈ ಮೊದಲನೆಯ ಸ್ಥಾನವನ್ನು ನರಸಿಂಹಯ್ಯ ಪಡೆದರು.

ಅಂದಿನರಾತ್ರಿ ತಾಯಿಗೆ ಇಂದೂ ಚನ್ನಾಗಿ ನೆನಪಿದೆ. ಶಿಸ್ತು ಶೃಂಗಾರದಿಂದ ಹೊರ ಹೊರಟ ಗಂಡನನ್ನು ತಾಯಿ ಅಂಜುತ್ತಂಜುತ್ತ 'ಯಾವಊರಿಗೆ? ಎಂದು ಕೇಳಿದಳು. ಅವರು ಉತ್ತರ ಕೊಡದೇ ಹೊರಟು ಹೋದರು. ಲಕ್ಷಮ್ಮ ನಡು ರಾತ್ರಿಯವರೆಗೂ ಕಾದು ಮಲಗಿಕೊಂಡರು ಮನಸ್ಸು ಭಯಂಕರವಾದ ಕಲ್ಪನೆಗಳಿಂದ ತಲ್ಲಣಗೊಂಡಿತು. ದೇವರು ಇದನ್ನೂ ತನ್ನ ಹಣೆಯಮೇಲೆ ಬರೆದಿದ್ದಾನಲ್ಲ ಎಂದು ವ್ಯಥೆಯಾಯಿತು. ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ಹೊರಲಾಡಿದರು. ಮರು ದಿನದಿಂದ 'ನರಸಿಂಹಯ್ಯ ಸಾವಿತ್ರಿಗೆ ಕೊಟ್ಟು ನಡೆಸುತ್ತಾರೆ' ಎಂದು ಸುದ್ದಿಹರಡಿ ಅವರ ಅಂತಸ್ತು ಹೆಚ್ಚಿತು. ಆದರೆ ಮನೆಯಲ್ಲಿ ಒಂದು ಜೀವ ಕೊರಗಿನಿಂದ ಕುಗ್ಗಿ ಹೋಯಿತು. ಇದಾದ ಕೆಲವುದಿನಗಳು ಲಕ್ಷಮ್ಮ ಸಾವಿತ್ರಿಯೊಡನೆ ವೈರದಿಂದಲೇ ಇದ್ದರು. ಸಾವಿತ್ರಿಗೆ ಗೃಹಚಾಮರದಿಂದ ಸೇವೆಮಾಡಬೇಕೆಂಬ ಆವರ ಆಸೆ ಹುಟ್ಟಿಸತ್ತಿತು. ಪಾಪ ಅವಳದೇನು ತಪ್ಪು? ತಾನು ತನ್ನ ಗಂಡನನ್ನು ಕೈಯಲ್ಲಿಟ್ಟುಕೊಳ್ಳದಿದ್ದುದು ತನ್ನದೇ ದೋಷ ಎಂದುಕೊಂಡರು. ತನ್ನಗಂಡನ

ಈ ಹೊಸಹುಚ್ಚಿಗೆ ಆಕೆ ಹೊಂದಿಕೊಂಡರು. ಸಾವಿತ್ರಿ ಮನೆಯವರಲ್ಲಿ ಒಬ್ಬಳಾಗಿ ಹೋದಳು. ಸ್ವತಃ ಲಕ್ಷಮ್ಮನೇ ಸಾವಿತ್ರಿಯ ಮಗುವಿಗೆ ಲೋಲಾಕು ಮಾಡಿಸಿ ಕೊಟ್ಟು ಮುದ್ದಾಡಿದರು. ಇದನ್ನು ನೋಡಿ ಸಾವಿತ್ರಿಯ ಕಣ್ಣಿನಲ್ಲಿ ನೀರುತುಂಬಿ ಬಂದಿತು.

ತಾಯಿ ಅಳುವುದನ್ನು ನಿಲ್ಲಿಸಿ ಅಡಿಗೆಮಾಡುತ್ತಿದ್ದರು. ನೋಡಿ ರಂಗಣ್ಣ ನಿಗೆ ಕರುಳು ಕಿವಿಚಿತು. ಸಹನೆಯೇ ಮೂರ್ತೀಭವಿಸಿದೆಯೋ ಎಂಬಂತಿದ್ದಳು ತಾಯಿ. ಆಕೆಯಲ್ಲಿ ಯಾವಕೊರತೆಯನ್ನು ಕಂಡು ತಂದೆ ಸಾವಿತ್ರಿಯಲ್ಲಿ ಅನು ರಕ್ತರಾದರು ? ಆ ಕ್ಷಣದಲ್ಲಿ ತಂದೆಯಮೇಲೆ ಅವನ ಮನಸ್ಸಿನಲ್ಲಿ ವಿಷದಹೊಗೆ ಹೊರ ಟಿತು. ಆಸ್ತಿಹೋದರೆ ಹೋಗಲಿ. ಪುನಃ ಸಂಪಾದಿಸಬಹುದು. ಆದರೆ ತಾಯಿಗೆ ಕೊಟ್ಟ ಕಷ್ಟಕ್ಕೆಂದು ಪರಿಹಾರ ದೊರೆತೀತು ? ನೊಂದು ಬೆಂದ ಆ ಒಡಲು ಇನ್ನೆಂದಾ ದರೂ ಸರಿಯಾದೀತೇ ?

ಹಾಗಿದ್ದರೆ ತಂದೆಯಾದರೂ ಸುಖವಾಗಿದ್ದಾರೆಯೆ? ಅವರಿದುವರೆವಿಗೆ ಮಾಡಿದ ಪಾಪವೆಲ್ಲಾ ಈಗ ಅವರನ್ನೆದುರಿಸಿ ನಿಂತಿದೆ. ಕೊಡುವ ಕೈ ಬರಿದಾಯಿತು. ಈಗ ಅವರಿಗೆ ಮೊದಲಿನ ಗೌರವದಲ್ಲಿ ನೂರರಲ್ಲೊಂದು ಪಾಲೂ ಸಲ್ಲುವುದಿಲ್ಲ, ನಿತ್ಯವೂ ರುಚಿಯಾದ ಭಕ್ಷ್ಯಗಳ ಸಾಲು ಮಾಡಿ ಜನರನ್ನು ತಣಿಸುವಾಗ ಮನೆ ಮದುವೆ ಮನೆಯಂತಿರುತ್ತಿತ್ತು. ಈಗ ಯಾರೂ ಬರುವುದಿಲ್ಲ. ಅವರ ಕಬ್ಬಿಣದ ಪೆಟ್ಟಿಗೆ ತುಂಬಿರುವಾಗ ಅವರ ಕೀರ್ತಿ ಗಗನಕ್ಕೆ ಏರಿದ್ದಿತು. ಈಗ ಬರಿದಾದಾಗ ಅದು ಕೆಸರಿನಲ್ಲಿ ಅದ್ದಿಹೋಯಿತು. ನರಸಿಂಹಯ್ಯನವರು, ನರಸಿಂಹ ಆಗಿ ಗ್ರಾಮ ಸಿಂಹ ಎಂದು ಜನರು ಅವರೆದುರಿಗೇ ಹೇಳುವ ಕಾಲಬಂದಿತ್ತು ಆ ವೈಭವದಲ್ಲಿ ಮೆರೆ ದವರು ಈ ಅವಹೇಳನದ ಮುಂದೆ ತಮ್ಮ ಸಿಟ್ಟನ್ನು ತಾವೇ ಜೀರ್ಣಿಸಿಕೊಳ್ಳುವ ಕಾಲ ಬಂದಿತ್ತು.

ಕೆಳಮನೆಯ ರಾಮಯ್ಯ ಪರದೇಶಿಯಾಗಿ ಅಲೆಯುತ್ತಿದ್ದ, ಅವನನ್ನು ತಂದು ಮದುವೆಮಾಡಿಸಿ, ಮನೆ ಕಟ್ಟಿಸಿಕೊಟ್ಟು ಒಕ್ಕಲು ಕೂರಿಸಿದ್ದು ಅವರೇ. ಅವನಿಗೀಗ ಕೈಯಲ್ಲಿ ದುಡ್ಡುಸೇರಿತು. ಅವನೇ ಈಗ ನರಸಿಂಹಯ್ಯನ ಜಮಾ ನನ್ನು ಹರಾಜಿನಲ್ಲಿ ನಿಂತು ತುಂಬುಸಭೆಯಲ್ಲಿ ಅವರನ್ನು 'ಗ್ರಾಮಸಿಂಹ' ಎಂದು ಅಪಹಾಸ್ಯಮಾಡುವ ಮದಕ್ಕೆ ಬಂದಿದ್ದ. ತಂದೆ ಅನ್ಯಾಯಮಾಡಿದ್ದರೆ ಅದು ತನ್ನ ಹೆಂಡತಿ ಮಕ್ಕಳಿಗೆ. ಅದನ್ನನುಭವಿಸುವವರು ಅವರು. ಅವರಿಗೆ ಅವರ ಮೇಲೆ

ದ್ವೇಷವಿರಬೇಕು. ಉಳಿದವರು ಅವರಿಂದ ಉಪಕೃತರಾದವರೇ. ಏನೋ ಕಾಲ ಹಾಗಿತ್ತು. ಅವರಿಗೂ ಬುದ್ಧಿಕೆಟ್ಟಿತ್ತು. ಅವರೊಬ್ಬರೇ ಏಕೆ, ಮಲೆನಾಡಿನ ನೂರಾರು ಜನರು ಅವರಂತೆಯೇ ಆಸ್ತಿಯನ್ನು ಕರಗಿಸಿದ್ದರು. ತನ್ನ ತಾಯಿ ಕಷ್ಟ ಪಟ್ಟಿದ್ದಳು. ಆದರೆ ಅಗಿನ ಕಾಲದಲ್ಲಿ ಹೆಣ್ಣು ಕಷ್ಟಪಡುವುದು ಸಾಮಾನ್ಯವಾಗಿತ್ತು.

ನರಸಿಂಹಯ್ಯ ಮನೆಗೆ ಮಾರಿಯಾಗಿದ್ದರೂ ಅವರಲ್ಲಿ ಅನೇಕ ಸದ್ಗುಣ ಗಳಿದ್ದುವು. ಆ ಪ್ರದೇಶದಲ್ಲಿ ಅವರಂತಹ ಬುದ್ಧಿವಂತರಿರಲಿಲ್ಲ. ಎಂತಹವನೇ ಆಗಲಿ ಅವರ ಅಭಿಪ್ರಾಯಕ್ಕೆ ತಲೆತಗ್ಗಿಸಬೇಕು. ಅಂತಹ ವಾಕ್ಸರಣಿ, ವಾದಶಕ್ತಿ ಅವರದು. ತೆಗಳುವವರು ತೆಗಳಲಿ. ಸುಬ್ಬಯ್ಯ ಹೊಸಹಳ್ಳಿಯ ಆರ್ಥಿಕ ಸಂಪತ್ತನ್ನು ಹೆಚ್ಚಿಸಿದ್ದರು. ನರಸಿಂಹಯ್ಯ ಹೊಸಹಳ್ಳಿಯ ಮನೆತನದ ಹೆಸರು ಮಲೆನಾಡಿನ ಮೂಲೆಮೂಲೆಗೂ ಹರಡುವಂತೆ ಮಾಡಿದ್ದರು. ಯಾರಮುಂದೂ ತಾನು ಇಂತಹ ವನು ಎಂದು ಹೇಳಿಕೊಳ್ಳುವ ಪ್ರಮೇಯವಿರಲಿಲ್ಲ. ಎಲ್ಲಿಹೋದರೂ 'ಹೊಸ ಹಳ್ಳಿಯ ನರಸಿಂಹಯ್ಯನವರ ಮಗನಿವನು. ಇತ್ತಬಾ, ಎಂದು ಜನರು ಗೌರವ ತೋರಿಸುತ್ತಿದ್ದರು. ಯಾವುದು ಹೆಚ್ಚು ಯಾವುದು ಕಡಿಮೆ! ತಾನು ಓದಲು ನರ ಸಿಂಹಯ್ಯ ವೆಚ್ಚಕ್ಕೆ ಲೆಕ್ಕಾಚಾರ ಹಾಕಿದವರಲ್ಲ. ಒಮ್ಮೆಯಾದರೂ 'ನೀನಿಷ್ಟು ಏಕೆ ಖರ್ಚುಮಾಡುವಿ, ಎಂದು ಕೇಳಿದವರಲ್ಲ. ಹೊಸಹಳ್ಳಿಯ ಮನೆತನಕ್ಕೆ ತಂದೆ ಸಂಪಾದಿಸಿದ ಹೆಸರನ್ನು ಸಂರಕ್ಷಿಸಿಕೊಂಡು ತಾತನ ಆಸ್ತಿಯನ್ನು ಪುನಃ ಸಂಪಾದಿಸ ಬೇಕೆಂದು ರಂಗಣ್ಣ ಸಂಕಲ್ಪಿಸಿದ. ಆ ಧ್ಯೇಯದಿಂದ ಅವನ ಉತ್ಸಾಹ ಉಕ್ಕಿತು.

ತಂದೆಯವರು ಮನೆಗೆ ಬಂದರು. ತಾನು ಹೊರಡುವ ಮುಂಚಿನ ದಿನ ರಂಗಣ್ಣ ತಂದೆಯೊಡನೆ 'ನಾನು ನಾಳೆ ಹೊರಡುವೆ' ಎಂದ.

'ರಜಾ ತೀರಿಹೋಯಿತೇನು?'

'ಹೂಂ'

'ಇನ್ನೂ ನಾಲ್ಕುದಿನವಿದ್ದು ಹೋದರಾಗದೇ?'

'ಇಲ್ಲ'

'ಎಷ್ಟು ದುಡ್ಡು ಬೇಕು?'

'ಐವತ್ತು ರೂಪಾಯಿ ಬೇಕಾಗಿತ್ತು. ಸ್ವಲ್ಪ ಪುಸ್ತಕ ಕೊಳ್ಳುವುದಿದೆ

'ಸರಿ. ಐವತ್ತು ಸಾಕಷ್ಟೆ?'

ಅಂದುಸಂಜೆ ತಂದೆ ಎಲ್ಲಿಗೋ ಹೋಗಿದ್ದರು. ದುಡ್ಡಿಗೆ ಸಾಲಕ್ಕಿರಬಹುದು. ರಂಗಣ್ಣ ಗಂಟುಕಟ್ಟಿದ. ತಾಯಿ ರಾತ್ರಿಯೆಲ್ಲಾ ಎದ್ದಿದ್ದು. ಕೋಡಬಳೆ, ರವೆ

ಉಂಡೆ, ಬಾಳೆಕಾಯಿ ಹುರುಕಲುಮಾಡಿದ್ದರು. ಜೊತೆಗೆ ಹಪ್ಪಳ ಅವಲಕ್ಕಿ ಕಟ್ಟಿ ಕೊಟ್ಟರು. ದೇವರಿಗೆ ನಮಸ್ಕಾರಮಾಡಿ ತಾಯಿಗೆ ನಮಸ್ಕಾರಮಾಡಿದ. ತಾಯಿ ಕುಡಿಯಲು ಕೆನೆಹಾಲು ಕೊಟ್ಟರು. ತಂದೆಗೆ ನಮಸ್ಕರಿಸಿದಾಗ ಅವರು ಅರುವತ್ತು ರೂಪಾಯಿ, ಮೇಲಿಷ್ಟು ಚಿಲ್ಲರೆ, ಕೊಟ್ಟು 'ಸಾಕೆ?' ಎಂದು ಕೇಳಿದರು. ರಂಗಣ್ಣ ನಿಗೆ ಮಾತಾಡಲಾಗಲಿಲ್ಲ ತಂದೆ, ತಾಯಿ, ತಮ್ಮಂದಿರು, ತಂಗಿ, ಅರ್ಧಮೈಲಿಯ ವರೆಗೂ ಬಂದು 'ನಿದಾನ. ಜೋಕೆ' ಎಂದು ಹೇಳಿ ಬೀಳ್ಕೊಟ್ಟರು. 'ಕಾಗದ ತಪ್ಪದೆ ಬರೆ ರಂಗಣ್ಣ' ಎಂದು ಹೇಳಬೇಕಾದರೆ ತಾಯಿಗೆ ಮಾತು ಹೊರಡಲಿಲ್ಲ. ರಂಗಣ್ಣ ಒಂದು ಮಾತೂ ಆಡಲಿಲ್ಲ, ಹಾಗೆ ಅವನೂ ಪ್ರಯತ್ನಪಟ್ಟಿದ್ದರೆ ಎಲ್ಲರೆದು ರಿಗೂ ಬಿಕ್ಕಿ ಬಿಕ್ಕಿ ಅಳಬೇಕಾಗುತ್ತಿತ್ತು. ಅವನು ಅಂದು ರಾತ್ರಿಯೆಲ್ಲಾ ಶೃಂಗೇರಿ ಯಲ್ಲಿ ತಲೆದಿಂಬನ್ನು ಕಣ್ಣೀರಿನಿಂದ ತೋಯಿಸಿದ.

[೬]

ಎರಡು ವರ್ಷಗಳಲ್ಲಿ ನಾಲ್ಕುಸಲ ಊರಿಗೆ ಬಂದಿದ್ದ ರಂಗಣ್ಣ- ಬಂದಾಗ ಲೆಲ್ಲಾ ಶ್ರೀನಿವಾಸಯ್ಯನ ಮನೆಗೆ ತಪ್ಪದೇ ಹೋಗುತ್ತಿದ್ದ. ಲಲಿತ ದೊಡ್ಡವಳಾಗಿ ಬೆಳೆಯುತ್ತಿದ್ದಳು. ಸೌಂದರ್ಯ ವಿಕಸಿತವಾಗುತ್ತಿತ್ತು. ಯೌವನ ಅಂಗಾಂಗ ಗಳನ್ನು ಪರಿಸ್ಫುಟಗೊಳಿಸುತ್ತಿತ್ತು. ರಂಗಣ್ಣನೂ ಹುಡುಗನಲ್ಲ. ರೂಪರಾಶಿ ಯನ್ನು ನೋಡಿ ಮೆಚ್ಚತಕ್ಕ, ಮಾರುಹೋಗತಕ್ಕ ವಯಸ್ಸು. ಲಲಿತೆಯೂ ಹುಡುಗಿಯಲ್ಲ. ಅವಳಲ್ಲಿಯೂ ಹೆಣ್ಣುತನ ಸ್ಪಷ್ಟವಾಗಿ ಮೂಡುತ್ತಿದೆ. ಈ ಪ್ರಾಯಸ್ಥರಾದ ಹೆಣ್ಣು ಗಂಡುಗಳ ನಡುವೆ ಲಜ್ಜೆಯು ಕಂದಕವಿಲ್ಲ.

ರಂಗಣ್ಣನಿಗೆ ಕಾಲೇಜಿನಲ್ಲಿ ಕೊನೆಯವರ್ಷ. ಇನ್ನೂ ನಾಲ್ಕುತಿಂಗಳು ಓದಿ, ಎರಡುವರ್ಷ ತಿಂದಿದ್ದನ್ನೆಲ್ಲಾ ನಾಲ್ಕುದಿನದಲ್ಲಿ ಕಾಗದದ ಮೇಲೆ ವಾಂತಿಮಾಡಿಬಿಟ್ಟರೆ ಅವನು ಕೃತಾರ್ಥನಾದಂತೆ. ಅವನಿಗೀಗ ಪುರಸೊತ್ತೇ ಇಲ್ಲ. ಐಯಂಗಾರರ ಕೆಮಿಸ್ಟ್ರಿ ಕ್ಲಾಸಿನಲ್ಲಿಯೂ ಪ್ರೊಫೆಸರರ ಇಂಗ್ಲೀಷು ಪೀರಿಯುಡ್ಡಿನಲ್ಲಿಯೂ ನಿದ್ದೆ ಬಂದೇಬಿಡು ತ್ತದೆ. ಅದರಿಂದ ಸ್ವಲ್ಪ ವಿರಾಮ ದೊರೆತಂತೆ ಆಗುತ್ತದೆ. ನಷ್ಟವೂ ಇಲ್ಲ. ಐಯಂಗಾರರು ಬರೆಯಿಸಿದ ಕೆಮಿಸ್ಟ್ರಿ ನೋಟ್ಸ್ ಹತ್ತು ವರ್ಷದ ಹಿಂದಿನ ವಿದ್ಯಾರ್ಥಿ ಕೈಯಲ್ಲಿ ಬೇಕಾದರೂ ಸಿಕ್ಕುತ್ತದೆ. ಪ್ರೊಫೆಸರರು ಹೇಳಿದ್ದೇ ಹೇಳುತ್ತಿರುತ್ತಾರೆ. ಅದನ್ನು ಪೀರಿಯಡ್ ಬಿಟ್ಟು ಮತ್ತೊಂದು ಪೀರಿಯಡ್‌ನಲ್ಲಿ ಕೇಳಿದರೆ ಸಾಕು.

ಸಂಜೆಗೆ ಬರುವಾಗ ಹೊಟ್ಟೆ ಹಸಿಯುತ್ತಿರುತ್ತದೆ. ತಿಂಡಿ ತಿನ್ನಲು ಅವನ ಮಿತವ್ಯಯದಲ್ಲಿ ದುಡ್ಡು ಸಾಲದು. ಉಳಿದವರೂ ಇವರಂತಹವರೇ. ಮೂರು ಕಾಸಿಗೆ ಸೌತೇಕಾಯಿ ತೆಗೆದುಕೊಂಡು ಟೇಪೂ ಸುಲ್ತಾನರ ಅರಮನೆಯ ಹತ್ತಿರದ ದೇವಸ್ಥಾನದಲ್ಲಿ ತಿಂದು ರೂಮಿಗೆ ಬರುವಾಗ 'ಸಾಕಪ್ಪಾ' ಎನ್ನಿಸುತ್ತದೆ. ರೂಮಿನಲ್ಲಿ ಪ್ರತಿಯೊಬ್ಬನೂ ಚಾಪೆಯ ಮೇಲೆ ತಾರಸಿ ಕಡೆ ನೋಡುತ್ತಾ ಸಂಜೆಯ ಊಟ ಬರುವವರೆಗೂ ನಿಮಿಷ ಎಣಿಸುತ್ತಿರುವುದು. ಬಂದ ಕೂಡಲೇ ಗಬಗಬನೆ ತಿಂದು, ಹೊಟೇಲಿನವನ ಕುಲಗೋತ್ರಕ್ಕೆ ಶಾಪವಿಕ್ಕಿ ಪುನಃ ಓದಲು ಕುಳಿತುಕೊಳ್ಳುವುದು.

ಏತಕ್ಕೆ ಈ ಸಂಭ್ರಮ ಎನ್ನಿಸುವುದು ರಂಗಣ್ಣನಿಗೆ, ಬಾಗಿಲಿನಿಂದ ಬಾಗಿಲಿಗೆ ನಾಯಿಯಂತೆ 'ಹಚ' ಎನ್ನಿಸಿಕೊಂಡು ನೌಕರಿ ಬೇಡುವುದಕ್ಕೇ ? ಇಲ್ಲ ಜ್ಞಾನಾರ್ಜನೆಗೇ ? ಜ್ಞಾನಾರ್ಜನೆಯಂತೂ ಇಲ್ಲವೇ ಇಲ್ಲ. ಅಲ್ಲಿ ಕಲಿಸುವ ಪಾಠದಿಂದ ಯಾವ ಪುರುಷಾರ್ಥ ? ಇಲ್ಲಿ ಏನು ಕಲಿಯಬೇಕು ಎನ್ನುವುದರ ಬದಲು ಏನು ಕಲಿಯಬಾರದು ಎಂದು ಹೇಳಿಕೊಡುತ್ತಾರೆ ಎಂದು ಅವನ ಭಾವನೆಯಿತ್ತು. ಉನ್ನತಾಧಿಕಾರಿಗಳೊಬ್ಬರ ಪುಸ್ತಕ ಅವನಿಗೆ ಪಠ್ಯ ಪುಸ್ತಕವಾಗಿತ್ತು. ಅದರ ವಿಷಯವಾಗಿ ಸ್ವಲ್ಪ ಗಂಡೆದೆಯ ಉಪಾಧ್ಯಾಯರೊಬ್ಬರು 'ಇದರಂತಹ ಭಾಷೆಯನ್ನು ನೀವು ಬಳಸಬಾರದು ಎನ್ನುವುದಕ್ಕೆ ಇದನ್ನು ಇಟ್ಟಿದ್ದಾರೆ' ಎಂದು ಹೇಳುತ್ತಿದ್ದರು. ಅದರಂತೆಯೇ ಅಲ್ಲಿಯ ವಿದ್ಯಾಭ್ಯಾಸ.

ಇಂತಹ ಜೀವನ ನಡೆಸುತ್ತಿದ್ದರೂ ಅವನ ಗೆಳೆಯರ ಕೂಟ ವಿನೋದರಹಿತವಾಗಿರಲಿಲ್ಲ. ಅಲ್ಲಿಯ ಹಾಸ್ಯವಾರಿ ವರ್ಷದಲ್ಲೆಲ್ಲಾ ಹರಿಯುತ್ತಿದ್ದು ಪರೀಕ್ಷೆಯ ಹೊತ್ತಿನಲ್ಲಿ ಬತ್ತಿಹೋಗುವುದು. ಪರೀಕ್ಷೆಯಾದ ಮರುದಿವಸ ಪುನಃ ತುಂಬು ಪ್ರವಾಹ. ಸಮತಾವಾದದಿಂದ ಹಿಡಿದು ಸಂಗೀತದವರೆಗೆ ಚರ್ಚೆ ಅಲ್ಲಿ ನಡೆಯುವುದು. ಅವರ ನಗುವಿನ ಹುಚ್ಚುಹೊಳೆ ಮನೆಯವರನ್ನು ಕಂಗಾಲುಗೊಳಿಸುವುದು. ಶಿವ ಅವರ ರೂಮಿನ ಗೋಡೆಯ ಮೇಲೆ 'ಉಡುಪಿ ಅಡಿಗೆಯವರ ಕೊಠಡಿ' ಎಂದು ಬೋರ್ಡು ಹಚ್ಚಿಬಿಟ್ಟಿದ್ದ. ಮರುದಿವಸ ಗೃಹಸ್ಥರೊಬ್ಬರು ಬಂದು 'ನಮ್ಮ ಮನೆಯಲ್ಲಿ ಇನ್ನು ಮೂರು ದಿವಸಕ್ಕೆ ಮುಂಜಿ' ಎಂದರು.

ಗೆಳೆಯರ ಮುಖ ಅರಳಿತು. ಅನಿರೀಕ್ಷಿತವಾಗಿ ಹಬ್ಬದೂಟ ಸಿಗುವಂತಿತ್ತು.

'ಅಗತ್ಯವಾಗಿ' ಎಂದ ಶ್ರೀಕಂಠ.

'ಏನು ಕೊಡಬೇಕು. ಸುಮಾರು ಐವತ್ತು ಜನರಾಗಬಹುದು ಊಟಕ್ಕೆ ?'

ಗೆಳೆಯರು ಸ್ವಲ್ಪ ಕಕ್ಕಾವಿಕ್ಕಿಯಾದರು.

'ಏತಕ್ಕೆ ನಮ್ಮಲ್ಲಿಗೆ ಬಂದಿದ್ದು ?'

'ನೂರು ಚಿರೋಟಿ, ಅಡಿಗೆ, ಬಡಿಸುವುದು ಎಲ್ಲಾ ತಮ್ಮದೇ'

'ತಾವೆಲ್ಲೋ ತಪ್ಪಿ ಬಂದಿರುವಂತಿದೆ. ನಾವು ಅಡಿಗೆಯವರಲ್ಲ'

'ಹಾಗಾದರೆ ಕ್ಷಮಿಸಿ, ನಾನು ಬೋರ್ಡು ನೋಡಿ ಬಂದೆ, ತಾವು ಅಡಿಗೆಯವರಲ್ಲದಿದ್ದರೆ ಬೋರ್ಡು ತೆಗೆಸಿ ಹಾಕಿದರೆ ನಮ್ಮಂತಹವರಿಗೆ ತೊಂದರೆ ತಪ್ಪುತ್ತದೆ.

ಅಂದು ಗೆಳೆಯರು ಬಿದ್ದು ಹೊರಲಾಡಿದುದರ ಪರಿಣಾಮವಾಗಿ ಮರುದಿವಸ ಅವರಿಗೆ ಮನೆಯವರಿಂದ ಅಲ್ಟಿಮೇಟಂ ಬಂದೇಬಂದಿತು.

ಕ್ರಿಸ್‌ಮಸ್ ರಜಾಕ್ಕೆ ಊರಿಗೆ ಹೋಗುವುದಿಲ್ಲ ಎಂದುಕೊಂಡಿದ್ದ ರಂಗಣ್ಣ. ಪರೀಕ್ಷೆಗೆ ಮೂರೇ ತಿಂಗಳಿತ್ತು. ಒಬ್ಬನ ಆಯುಷ್ಯದಲ್ಲಿ ಪೂರೈಸಿದಷ್ಟು ಓದುವುದಿತ್ತು. ಆದರೆ ಚಂದ್ರಶೇಖರಯ್ಯನಿಂದ ಕಾಗದ ಬಂದು ಊರಿಗೆ ಹೊರಡಲೇ ಬೇಕಾಯಿತು. ಅವರು ಬರೆದಿದ್ದರು,

'ಈ ಕಾಗದ ಕಂಡಕೂಡಲೇ ಬಂದುಹೋಗುವುದು. ಬಹಳ ಮುಖ್ಯವಾದ ವಿಚಾರ ತೀರ್ಮಾನವಾಗಬೇಕಾಗಿದೆ. ಕೂಡಲೇ ಹೊರಡು.'

ಕಾಲೇಜು ಮುಚ್ಚಲು ಇನ್ನೂ ನಾಲ್ಕುದಿನಗಳಿದ್ದರೂ ರಜಾ ತೆಗೆದುಕೊಂಡು ತುಸು ಗಾಬರಿಯಿಂದ ಊರಿಗೆ ಹೊರಟ.

## [೭]

ಶೃಂಗೇರಿಯಲ್ಲಿ ರಂಗಣ್ಣನನ್ನು ಕರೆದುಕೊಂಡು ಚಂದ್ರಶೇಖರಯ್ಯ ಸಂಜೆ ಹೊಳೆಯ ದಡಕ್ಕೆ ಹೋದ. ಅಲ್ಲಿ ನಿರಾತಂಕವಾಗಿ ಮಾತಾಡಬಹುದಿತ್ತು. ರಂಗಣ್ಣನಿಗೆ ವಿಷಯವನ್ನು ತಿಳಿಯಲು ಉದ್ವೇಗ. ಎಲ್ಲರೂ ಸುಖವಾಗಿದ್ದಾರೆಂದು ಅತ್ತಿಗೆಯನ್ನು ಕೇಳಿ ತಿಳಿದ. ಆದರೆ ಚಂದ್ರಶೇಖರಯ್ಯ ಯಾಕೆ ಕರೆಸಿದನೆಂಬುದು ಆಕೆಗೂ ತಿಳಿಯದು.

ಚಂದ್ರಶೇಖರಯ್ಯ ಹೇಳಿದ 'ರಂಗಣ್ಣಾ ಲಲಿತೆಯ ಮದುವೆ ನಿಶ್ಚಯವಾದಂತಿದೆ'. ಯಾವುದೋ ಅಶುಭಸಮಾಚಾರವನ್ನು ನಿರೀಕ್ಷಿಸಿ ಕುಗ್ಗಿಹೋಗಿದ್ದ ರಂಗಣ್ಣ ಈಗ ಭೂಮಿಗೆ ಇಳಿದುಹೋದ. ಮಾತಾಡಲು ಶಕ್ತಿಯೇ ಉಳಿಯಲಿಲ್ಲ.

ಅಣ್ಣ ಹೇಳಿದ ' ರಂಗಣ್ಣಾ, ಲಲಿತೆಯನ್ನು ನಿನಗೆ ತಂದುಕೊಳ್ಳುವ ವಿಚಾರದಲ್ಲಿ ಚಿಕ್ಕಪ್ಪನನ್ನು ಶ್ರೀನಿವಾಸಯ್ಯ ಕೇಳಿದರಂತೆ ಅವರು ಒಪ್ಪಲಿಲ್ಲವಂತೆ. ಆ ಸಂದರ್ಭದಲ್ಲಿ ಮಾತುಕತೆಗಳಾಗಿ ಜಗಳವೂ ಆದಂತಿದೆ. ಈಗ ಶ್ರೀನಿವಾಸಯ್ಯ ನಿಮ್ಮ ಮನೆ ವಿಷಯದಲ್ಲಿ ಉರಿದು ಬೀಳುತ್ತಿದ್ದಾರೆ. ಅದೇ ಬಿಸಿಯಲ್ಲಿ ಅವರು ಲಲಿತೆಗೆ ಯಾರೋ ಎರಡನೆಯ ವರ ನಿಶ್ಚಯಿಸಿದಂತಿದೆ. ಇದರಲ್ಲಿ ನನ್ನ ಮಾತೇನೂ ನಡೆಯಲಿಲ್ಲ'.

ಮಾತಿಲ್ಲದೇ ಕುಳಿತಿದ್ದ ರಂಗಣ್ಣ. ಅವನಿಗೆ ಅಣ್ಣ ಹೇಳುತ್ತಿದ್ದುದು ಕೇಳಿಸುತ್ತಿತ್ತೋ ಇಲ್ಲವೋ, ' ನಿನಗೆ ಲಲಿತೆಯನ್ನು ಕಂಡರೆ ವಿಶೇಷ ಪ್ರೀತಿ ಎಂದು ನಾನು ಊಹಿಸಿದ್ದೇನೆ. ಆದರೆ ಅದೆಷ್ಟು ಆಳವಾಗಿದೆಯೆನ್ನುವುದು ನನಗೆ ತಿಳಿಯದು. ಅದೊಂದು ಎಲ್ಲರೂ ಅಪೇಕ್ಷಿಸಬೇಕಾದ ರತ್ನ. ನಿನಗೆ ಆ ವಿಷಯದಲ್ಲಿ ಬಹಳ ಆಸಕ್ತಿಯಿದ್ದರೆ ಇನ್ನೂ ಕ್ವೆಮೀರಿ ಹೋಗುವ ಮೊದಲೇ ಪ್ರಯತ್ನಮಾಡಿ ನೋಡು ಎಂದು ಕರೆಸಿದೆ '.

ರಂಗಣ್ಣ ಇನ್ನೂ ಮಾತಾಡಲಿಲ್ಲ. ಅವನ ಮನಸ್ಸಿನಲ್ಲಿ ಏನು ತಳಮಳವಾಗುತ್ತಿತ್ತೋ ? ಚಂದ್ರಶೇಖರಯ್ಯ ಅವನ ಹೆಗಲಮೇಲೆ ಕೈಯಿಟ್ಟು ಅಲುಗಾಡಿಸಿ ಹೇಳಿದರು.

' ಏನು ರಂಗಣ್ಣಾ ಲಲಿತೆಯನ್ನ ಕಂಡರೆ ನಿನಗೆ ಬಹಳ ಪ್ರೀತಿಯೇ ? ಅವಳನ್ನು ಮದುವೆಯಾಗಬೇಕು, ಎಂದು ಬಯಸಿದ್ದೆಯಾ ? '

ಅವಳನ್ನು ಕಂಡರೆ ಪ್ರೀತಿಯೇ ? ಏನು ಪ್ರಶ್ನೆ ? ಆದರೂ ಇದುವರೆವಿಗೆ ಆ ಪ್ರೀತಿ ಎಷ್ಟು ಆಳವಾಗಿತ್ತು ಎಂದವನು ಯೋಚಿಸಿರಲಿಲ್ಲ. ಈಗ ಅವಳು ಬೇರೆಯವಳಾದಳು ಎನ್ನುವ ಸಂದರ್ಭದಲ್ಲಿ ಆ ಪ್ರೀತಿಯ ಅಗಾಧತೆ ಸ್ಪಷ್ಟವಾಗಿ ಅರಿವಾಯಿತು. ಲಲಿತ ಬೇರೆಯವರವಳಾದರೆ ತನ್ನ ಬದುಕು ಎಷ್ಟು ನಿಸ್ಸಾರವಾದೀತು ಎಂದು ಯೋಚಿಸಿದ.

' ಸುಮ್ಮನೇ ಯೋಚಿಸಿ ಫಲವಿಲ್ಲ. ರಂಗಣ್ಣ ಏನಾದರೂ ಮಾಡಬೇಕು ಈಗ ' ಅವನ ಪ್ರೀತಿಯ ವಿಷಯ ಪ್ರಶ್ನೆಮಾಡುವುದು ಅವಶ್ಯಕವಿರಲಿಲ್ಲ.

' ಏನುಮಾಡಲಿ ಚಂದ್ರಣ್ಣಾ ?' ಎಂದ ಕಣ್ಣೀರು ತುಂಬಿ ರಂಗಣ್ಣ. ಎಲ್ಲಾ ವಿಲೇವಾರಿ ಆಗಿಹೋದಂತಿತ್ತು. ಲಲಿತೆಯಲ್ಲಿ ಯಾವನ ವಿಶ್ವಾಸ ಬೆಟ್ಟದಷ್ಟೋ ಅಂತಹವನನ್ನು ಒಂದು ಮಾತುಸಹ ಕೇಳದೆ ಅವಳ ಭವಿಷ್ಯ ನಿರ್ಧರಿಸಲ್ಪಟ್ಟಿಂ

ತಿತ್ತು. ಚಂದ್ರಶೇಖರಯ್ಯ ಇದನ್ನು ತಿಳಿಯುವ ಗೋಜಿಗೆ ಹೋಗದಿದ್ದರೆ ತನಗೆ ಗೊತ್ತಾಗುವ ಸಂಭವವೇ ಇರಲಿಲ್ಲ.

ಅಣ್ಣಹೇಳಿದರು ' ಮನೆಗೆ ಹೋಗಿ ಚಿಕ್ಕಪ್ಪನನ್ನು ಒಪ್ಪಿಸುವ ಪ್ರಯತ್ನ ಮಾಡು. ಅವರೊಪ್ಪದಿದ್ದರೆ ಸ್ವಲ್ಪಕಷ್ಟವೇ. ಆಮೇಲೆ ಶ್ರೀನಿವಾಸಯ್ಯನನ್ನು ಒಪ್ಪಿಸುವ ಯತ್ನಮಾಡೋಣ. ಇಬ್ಬರೂ ಒಪ್ಪದಿದ್ದರೆ ಮುಂದೆ ಯೋಚಿಸಬೇಕು. ಎಂದಿದ್ದರೂ ಲಲಿತೆ ನಮ್ಮವಳು. ನೋಡಿಕೊಳ್ಳೋಣವಂತೆ ಸುಮ್ಮನೆ ದಾಕ್ಷಿಣ್ಯಗಳಿಗೆ ಕಟ್ಟು ಬೀಳುವ ಸಂದರ್ಭವಲ್ಲ ಇದು. ಒಬ್ಬರ ಜೀವನದ ಸುಖಸಂತೋಷಗಳನ್ನು ನಿರ್ಧರಿಸುವ ಕ್ಷಣ. ನಮ್ಮವರಿಗೇಕೆ ಗೊತ್ತಾಗುವುದಿಲ್ಲವೋ! ಬಹಳ ಕಳವಳದಿಂದ ಮಾತಾಡಿದರು ಅಣ್ಣ. ತನ್ನ ಭವಿಷ್ಯ ನಿರ್ಧರಿಸುವ ಜವಾಬ್ದಾರಿ ಹಟವೇ, ಜೀವನದ ಗುರಿಯಾಗುಳ್ಳ ತಂದೆಯುವರಿಗಿರುವ ಬದಲು ಇವನಿಗಿದ್ದಿದ್ದರೆ?

ಹೊಸಹಳ್ಳಿಯಲ್ಲಿ ದೊಡ್ಡಹೊರಾಟವೇ ಅವನನ್ನು ಕಾದಿತ್ತು. ರಂಗಣ್ಣ ತಾಯಿಯೊಡನೆ ಎಲ್ಲಾ ವಿಷಯವನ್ನೂ ಹೇಳಿದ.

' ಅಪ್ಪ ಏತಕ್ಕೆ ಒಪ್ಪಲಿಲ್ಲ? '

' ಅದೇತಕ್ಕೋ ಏನೋ ಅವರು ಬಹಳ ಬಡವರು ಎಂದಿರಬಹುದು '

' ನಾನು ಲಲಿತೆಯನ್ನೇ ಮದುವೆ ಮಾಡಿಕೊಳ್ಳುವುದು. ಅವರನ್ನೇ ಕಂಡು ಮಾತಾಡುತ್ತೇನೆ '

' ಈಗ ಉಪಯೋಗವಿಲ್ಲ ರಂಗೂ. ಎಲ್ಲಾ ಕೈಮೀರಿಹೋಯಿತು. ಇವರು ಹೇಳಿದ್ದು ಶ್ರೀನಿವಾಸಯ್ಯನವರಿಗೆ ಹೆಚ್ಚಾಗಿ ಹೋಯಿತು. '

' ಏನೆಂದರು ಅಪ್ಪ? '

' ಲಲಿತೆಯ ತಾಯಿ ಗೌರಮ್ಮನ ಶೀಲ ಚನ್ನಾಗಿಲ್ಲವೆಂದು. ಗಂಡನ ಮನೆಗೆ ಬೆಂಕಿ ಹತ್ತಿಸಿ ತೌರಿಗೆ ಓಡಿ ಬಂದವಳೆಂದು ಅವಳನ್ನು ಜನರೆಂದುಕೊಳ್ಳುತ್ತಾರೆ- ಅಂತಹವಳ ಮಗಳನ್ನು ತಾವು ತಂದುಕೊಳ್ಳುವುದಿಲ್ಲವೆಂದು '

' ಅದು ನಿಜವೇ ಅಮ್ಮಾ? '

' ಸುಳ್ಳಿರಬಹುದು. ಗೌರಮ್ಮನಿಗೆ ಗಂಡನ ಮನೆಯಲ್ಲಿ ಕಣ್ಣೀರಲ್ಲಿ ಕೈ ತೊಳೆಸುತ್ತಿದ್ದರು. ಅತ್ತೆಯೇ ಆ ಅಪವಾದ ಸೊಸೆಯ ಮೇಲೆ ಹೊರಿಸಿ ಮನೆ ಬಿಡಿಸಿ ಕಳಿಸಿರಬೇಕು. ಆದರೆ ಜನರ ಬಾಯಿ ಇಲ್ಲದ್ದನ್ನು ಆಡಿ ತೃಪ್ತಿಪಡುತ್ತದೆ. ಅದು ಹೇಗಾದರೂ ಇರಲಿ. ಇದರಿಂದ ಶ್ರೀನಿವಾಸಯ್ಯ ಜೀವವಿರುವ ತನಕ ನಮ್ಮ

ಮನೆ ಮೆಟ್ಟಲು ಹತ್ತುವುದಿಲ್ಲವೆಂದು ಹೇಳಿ ನೀರುಕುಡಿಯದೆ ಹೊರಟುಬಿಟ್ಟರು. ಅದು ಇನ್ನು ಹೇಗೆ ಸರಿಯಾದೀತು ? ' ಎಂತಹ ಅನಾಹುತವಾಗಿಹೋಗಿದೆ! ರಂಗಣ್ಣ ತಲೆಯ ಮೇಲೆ ಕೈಹೊತ್ತುಕೊಂಡು ಕುಳಿತುಬಿಟ್ಟ.

ರಂಗಣ್ಣನ ಮನಸ್ಸನ್ನು ಸರಿಯಾಗಿ ತಿಳಿಯದೇ ತಂದೆ ಹೇಳಿದರು.....

' ರಂಗೂ, ನಾನೇ ನಿನಗೆ ಕಾಗದ ಬರೆಯಬೇಕೆಂದಿದ್ದೆ. ಅದೇ ನಿನ್ನ ಮದುವೆಯ ವಿಷಯ. ಈ ಚೈತ್ರದಲ್ಲಿ ಮದುವೆಯಾದರೆ ಸರಿ ಎಂದು ನನ್ನಭಿಪ್ರಾಯ '

ರಂಗಣ್ಣನ ಮನಸ್ಸು ಒಂದು ಕ್ಷಣ ಆಸೆಯಿಂದ ಹರ್ಷಿಸಿತು. ತಂದೆ ಹಾಗಿದ್ದರೆ ಮನಸ್ಸು ಬದಲಾಯಿಸಿರಬಹುದು. ಎಷ್ಟಾದರೂ ತನ್ನ ಹಿತಚಿಂತಕ ರಲ್ಲವೆ !

' ನೋಡು, ಹೊನ್ನಹಳ್ಳಿಯ ರಾಮಪ್ಪನವರು ನಿನಗೆ ಗೊತ್ತಷ್ಟೆ. ದೊಡ್ಡ ಮನೆತನಸ್ಥರು. ಹುಡುಗಿಯೂ ಲಕ್ಷಣವಾಗಿದೆ. ಇನ್ನೂ ಚಿಕ್ಕ ವಯಸ್ಸು. ನೀನು ಓದಬೇಕಾದರೆ ಮದುವೆಯಿಂದೇನೂ ತೊಂದರೆಯಾಗುವುದಿಲ್ಲ. ಜಾತಕ ಚನ್ನಾಗಿ ಕೂಡಿಬರುತ್ತದೆ. ಚನ್ನಾಗಿ ಉಡಿಸಿ ತೊಡಿಸಿ ಧಾರೆಯೆರೆಯುತ್ತಾರೆ. ನಿನಗೂ ಮುಂದಿನ ಓದಿಗೆ ಅನುಕೂಲ. '

' ನನಗೆ ಆ ಹುಡುಗಿಯನ್ನು ಮದುವೆಯಾಗಲಿಷ್ಟವಿಲ್ಲ '

' ಹಾಗಿದ್ದರೆ ಶ್ರೀನಿವಾಸಯ್ಯನ ಮಗಳನ್ನು ಮದುವೆಯಾಗಬೇಕೆಂದೇನು ನಿನ್ನ ಇಷ್ಟ ? ನನಗೆಲ್ಲಾ ತಿಳಿದಿದೆ. ಅವಳು ನಿನ್ನ ಹುಡುಗಾಟಿಕೆಯ ವಿಷಯ ಎಲ್ಲಾ ಹೇಳಿದಳು. ಆ ಸಂಬಂಧ ನನಗಿಷ್ಟವಿಲ್ಲ '

' ನಾನು ಬೇರೆಯವರನ್ನು ಮದುವೆಯಾಗುವುದಿಲ್ಲ '

' ಇದೇ ನಿನ್ನ ನಿಶ್ಚಯವೇನು ? ನನ್ನ ಮಾತಿಗೆ ನೀನು ಸ್ವಲ್ಪವೂ ಬೆಲೆ ಕೊಡುವುದಿಲ್ಲವೆ ?

' ಇದೊಂದು ವಿಷಯದಲ್ಲಿ ಮಾತ್ರ ನಿಮ್ಮ ಮಾತು ನನಗೆ ಹಿಡಿಸದು ಕ್ಷಮಿಸಿ '

ರಂಗಣ್ಣನ ಧ್ವನಿಯಲ್ಲಿ ನಿರ್ಧಾರದ ಸೂಚನೆಯಿತ್ತು. ತಂದೆ ತಮ್ಮ ಕೊನೆಯಸ್ತ್ರವನ್ನು ಉಪಯೋಗಿಸಿದರು.

' ರಂಗೂ, ನಿನಗೆ ಗೊತ್ತಿರಬಹುದು ನಮ್ಮ ಹೊಸಹಳ್ಳಿಯ ಸೊತ್ತು, ಹೊನ್ನಹಳ್ಳಿಯವರಿಗೆ ಭೋಗ್ಯವಾಗಿವೆ. ಈಗ ಈ ಸಂಬಂಧ ಬೆಳೆಸಿದರೆ ಅವರು

ಭೋಗ್ಯವನ್ನು ಖುಲಾಸೆ ಮಾಡಿಕೊಡಬಹುದು. ಅದನ್ನು ಪರ್ಯಾಯವಾಗಿ ರಾಮಪ್ಪನವರೇ ಸೂಚಿಸಿದ್ದಾರೆ. ಈಗ ನೀನು ಒಲ್ಲೆಯೆಂದರೆ ನಾಳೆಯೇ ಅವರು ಕ್ರಮ ಜರುಗಿಸಿದರೆ ನಮಗೆ ನಿಲ್ಲಲು ನೆಲೆಯಿಲ್ಲದಂತಾಗುವುದು."

"ಏನೋ ದೇವರು ಮಾಡಿದಂತಾಗುತ್ತದೆ, ಅಪ್ಪ. ಆಸ್ತಿಯನ್ನು ಪುನಃ ಸಂಪಾದಿಸಬಹುದು. ಆದರೆ ದುಡ್ಡಿಗೆ ನನ್ನನ್ನು ಮಾರಿಕೊಳ್ಳಲಾರೆ.'

ತಂದೆ ಕಣ್ಣೀರು ತಂದು ಹೇಳಿದರು. "ರಂಗೂ, ನಾನೇನೋ ತಪ್ಪುಮಾಡಿದೆ ನಿಶ್ಚಯ. ಆಸ್ತಿಯನ್ನೆಲ್ಲಾ ಹಾಳುಮಾಡಿದೆ. ನಾನೂ ಇನ್ನಷ್ಟು ಆಸ್ತಿಮಾಡಿದ್ದರೆ ನನ್ನಮಾತಿಗೆ ಬೆಲೆ ಬರುತ್ತಿತ್ತು. ಅದಿಲ್ಲದ್ದರಿಂದ ನಾನು ಮನೆಯವರ ಹತ್ತಿರವೂ ನಾಯಿಯಂತಿರಬೇಕಾಗಿದೆ. ನನ್ನ ಯೋಗ್ಯತೆಯಲ್ಲಂತೂ ಆಗಲಿಲ್ಲ. ನೀನಾದರೂ ನಮ್ಮಪ್ಪ ಸಂಪಾದಿಸಿದ ಹೊಸಹಳ್ಳಿಯ ಆಸ್ತಿಯನ್ನುಳಿಸಿಕೊಂಡು, ಮನೆತನದ ಹೆಸರನ್ನು ಮುಂದಕ್ಕೆ ತರುತ್ತೀ ಎಂದು ಆಸೆಯಿತ್ತು. ಅದೂ ಹೋಯಿತು. ನಿನಗಿಷ್ಟವಿದ್ದಂತೆ ಮಾಡಬಹುದು. ನಾನಿನ್ನು ನಿನ್ನನ್ನ ಕೇಳುವುದಿಲ್ಲ.

ರಂಗಣ್ಣ ಅಲ್ಲಿಂದೆದ್ದು ಗುಡ್ಡದಮೇಲೆ ಹೋದ. ತಲೆ ಆಲೋಚನೆಯಿಂದ ಕಾದು ಸಿಡಿಯುತ್ತಿತ್ತು.. ಅದಕ್ಕೆ ಸ್ವಲ್ಪ ತಂಗಾಳಿ ಅವಶ್ಯವಿತ್ತು. ಅಲ್ಲೆ ಸಂಪಿಗೆಯ ಕಟ್ಟೆಯ ಮೇಲೆ ಕುಳಿತುಕೊಂಡ.

ಒಂದು ಕಡೆ ತನ್ನ ಮನಸ್ಸೊಪ್ಪಿದ ಹುಡುಗಿ ತನ್ನ ಪಾಲಿಗೆ ಸ್ವರ್ಗವನ್ನೇ ತಂದಾಳು. ಇನ್ನೊಂದು ಕಡೆ ಮನೆತನದ ಆಸ್ತಿ. ಮನೆತನ ತಲೆಯೆತ್ತಿ ಸಮಾಜದಲ್ಲಿ ನಿಲ್ಲಲು ಇರುವ ಸದವಕಾಶ. ಯಾವುದು ಬಿಡುವುದು ? ಯಾವುದು ಹಿಡಿಯುವುದು? . ಲಲಿತೆಯನ್ನು ಬಿಡುವುದೇ? ಆಮೇಲೆ ಬಾಳಿನಲ್ಲಿ ಏನು ಉಳಿಯಿತು? ತನ್ನ ಆಸ್ತಿಯನ್ನು ಬಿಡುವುದೇ? ಅಂತಹ ಆಸ್ತಿಯಿನ್ನೆಲ್ಲಿ ಸಿಕ್ಕೀತು? ತಾನು ಹುಟ್ಟಿ ಬೆಳೆದ ಮನೆ. ಹೆತ್ತು ಸಾಕಿದ ತಾಯಿತಂದೆಗಳು. ಪ್ರೀತಿವಿಶ್ವಾಸದಿಂದ ಕರೆದ ನೆರೆಹೊರೆ. ಎಲ್ಲವನ್ನೂ ಬಿಟ್ಟು ಏಕಾಂಗಿಯಾಗಿ ನಿಲ್ಲಲು ತನಗೆ ಶಕ್ತಿಯುಂಟೇ ?ತನ್ನ ತಂದೆಯ ಇಚ್ಛೆಗೆ ವಿರೋಧವಾಗಿ ಲಲಿತೆಯನ್ನು ಮದುವೆಯಾದರೆ ಅವರು ತನ್ನೊಂದಿಗೆ ಇದ್ದಾರೆ? ಅದರಿಂದ ಯಾರಿಗೆ ಸುಖವಾದೀತು? ಮೊದಲು ಇದ್ದ ಕಿವಿಗಿಂತ ಕೊನೆಗೆ ಮೂಡಿದ ಕೋಡೇ ಜಾಸ್ತಿ ಎಂತಾಗದೇ?

ಮರುದಿವಸ ಅವನು ಶ್ರಿಂಗೇರಿಗೆ ಹೊರಟು ಹೋದ. ತಂದೆಹೇಳಿದರು ಯಾವುದನ್ನೂ ಖಂಡಿತ ಹೇಳಬೇಕು. ಈಗ ಮಾತುಕೊಟ್ಟರೆ ಹೊನ್ನಹಳ್ಳಿ ಯವರು ಇನ್ನೆರಡು ವರ್ಷವಾದರೂ ತಡೆದಾರು. ನಿನಗೆ ಇನ್ನೊಮ್ಮೆ ನಾನು ಖಂಡಿತಾ ಹೇಳುತ್ತೇನೆ. ಶ್ರೀನಿವಾಸಯ್ಯನ ಮಗಳನ್ನು ನನ್ನ ಜೀವವಿರುವ ತನಕ ನನ್ನ ಸೊಸೆಯಾಗಿ ತಂದುಕೊಳ್ಳಲೊಲ್ಲೆ. ಅದಕ್ಕೆ ಕಾರಣಹೇಳಿ ನಿನ್ನ ಮನಸ್ಸನ್ನು ಇನ್ನೂ ನೋಯಿಸುವುದಿಲ್ಲ.

ತಮ್ಮ ಅತುಲೈಶ್ವರ್ಯವನ್ನೂ ಕಳೆದ ನರಸಿಂಹಯ್ಯನವರ ಹಟ್ಟ ಈಗ ಮಗನ ಮದುವೆಯಸಮಯದಲ್ಲಿಯೂ ಮುಂದೆ ಬಂದು ನಿಂತಿದ್ದಿತು.

ಶ್ರೀನಿವಾಸಯ್ಯನವರ ಕೈಲಿ ಈ ಪ್ರಸ್ತಾಪವೆತ್ತುವುದು ಇನ್ನೂ ಕಠಿಣವಾಗಿತ್ತು. ಅವನ ಮನಸ್ಸು ಈ ವಿಷಯದಲ್ಲಿ ಇನ್ನೂ ನಿಲಗಡೆಗೆ ಬಂದಿರಲಿಲ್ಲ. ತಂದೆ ಯಾಡಿದ ಮಾತುಗಳಿಗೆ ತಾನುಕ್ಷಮಾಪಣೆ ಕೇಳಿಕೊಳ್ಳುವುದು ಮೊದಲಕರ್ತವ್ಯ ವಾಗಿದ್ದಿತು. ತನ್ನಿಂದ ತಾನೇ ಶ್ರೀನಿವಾಸಯ್ಯ ಅಪ್ರಿಯವಾದ ಮಾತುಗಳನ್ನು ಕೇಳಬೇಕಾಯಿತು ?

ಶ್ರೀನಿವಾಸಯ್ಯ ಜ್ವರದಿಂದ ಹಾಸಿಗೆ ಹಿಡಿದು ಮಲಗಿದ್ದರು. ರಂಗಣ್ಣ ಹಾಸಿಗೆಯಬಳಿಯೇ ಕುಳಿತ. ಲಲಿತ ಒಂದುಸಾರೆ ಕಾಣಿಸಿಮರೆಯಾದಳು. ಎಂದಿನಂತೆ ಸಲುಗೆಯ ಮಾತುಕತೆಯಿಲ್ಲ. ಅವರಿಬ್ಬರ ನಡುವೆ ಒಂದು ಅಗಾಧವಾದ ಪರ್ವತ ಬೆಳೆದಂತಿತ್ತು. ಮನೆಯೆಲ್ಲಾ ಮಂಕಾಗಿತ್ತು.

ರಂಗಣ್ಣ "ತಮ್ಮೊಂದಿಗೆ ಸ್ವಲ್ಪ ಮಾತಾಡುವುದಿತ್ತು" ಎಂದು ಪ್ರಾರಂಭಿಸಿದ.

" ಹೂಂ "

"ಲಲಿತೆಯನ್ನು ಮದುವೆಯಾಗಬೇಕೆಂದು ನನ್ನ ಆಸೆಯಿದೆ, ಅದನ್ನು ತಾವು ನಡೆಸಿಕೊಡಬೇಕು."

ಇಷ್ಟು ಹೇಳಿದಮೇಲೆ ಅವನಿಗೆ ತಲೆಯ ಮೇಲಿನಿಂದ ದೊಡ್ಡದೊಂದು ಹೊರೆ ಇಳಿಸಿದಂತಾಯಿತು. ಆಗ ಸರಾಗವಾಗಿ ಉಸಿರು ಬಿಟ್ಟು ಶ್ರೀನಿವಾಸಯ್ಯನ ಬಾಯಿನಿಂದ ಏನು ಮಾತು ಬರುತ್ತೆ ಎಂದು ಕಾತುರನಾಗಿ ಕಾದ.

"ನನಗೂ ಅದೇ ಆಸೆಯಿತ್ತು ರಂಗಣ್ಣ. ಆದರೆ ಅದೆಲ್ಲಾ ನಿರ್ನಾಮವಾಗಿ ಹೋಯಿತು."

"ನೀವು ಒಪ್ಪುವುದೊಂದೇ ಇರುವುದು ಇನ್ಯಾವ ಅಡ್ಡಿಯೂ ಇಲ್ಲ."

ಅದು ಹೇಗಾಗುತ್ತೆ ರಂಗಣ್ಣ. ನಿನ್ನ ತಾಯಿತಂದೆಗಳು ಒಪ್ಪಬೇಡವೇ? ನಿನ್ನ ತಂದೆ ಒಪ್ಪುವುದಿಲ್ಲ ಎನ್ನುವುದು ನಿನಗೂ ತಿಳಿದಿರಬೇಕು"

"ಅವರೊಪ್ಪದಿದ್ದರೇನಾಯಿತು? ನಾನು ಒಪ್ಪಿದ್ದೇನೆ."

"ನೀನಿನ್ನೂ ಹುಡುಗ ರಂಗಣ್ಣ ಅದಕ್ಕೇ ಹಾಗೆ ಮಾತಾಡುತ್ತೀ. ಆಮೇಲೆ ನಿನ್ನ ತಂದೆ ನಿನ್ನನ್ನು ಮನೆಗೆ ಸೇರಿಸುತ್ತಾರೆ ಎಂದು ತಿಳಿದುಕೊಂಡೆಯಾ?"

"ಸೇರಿಸಲೇಬೇಡ· ನಾನೇ ಸಂಪಾದನೆಮಾಡಿ ಜೀವಿಸಬಲ್ಲೆನೆಂಬ ನಂಬಿಕೆ ನನಗಿದೆ. ನಿಮ್ಮ ಹುಡುಗಿಗೆ ಅನ್ನ ಹಾಕದಿರುವಷ್ಟು ಕೈಲಾಗದವನು ನಾನಲ್ಲ."

"ಅದಲ್ಲ ರಂಗಣ್ಣ ನಾನು ಹೇಳುವುದು. ನಿನ್ನನ್ನು ನಿನ್ನ ತಂದೆಯಿಂದ ಅಗಲಿಸಿದರೆ ಜನರೇನೆಂದಾರು? ಈಗಲೇ ಇಲ್ಲದ ಅಪಖ್ಯಾತಿ ನನ್ನ ಮೇಲಿದೆ. ಆಮೇಲೆ ಇನ್ನೇನು ಮಾತು ಕೇಳಬೇಕಾದೀತೋ?"

"ಅದನ್ನವರು ಅಂದೇ ಅನ್ನುತ್ತಾರೆ. ನಮ್ಮ ತಲೆಗೆ ನಮ್ಮ ಕೈ."

"ರಂಗಣ್ಣ ಹಾಗೆ ವೇದಾಂತ ಹೇಳುವುದು ಸುಲಭ. ಆದರೆ ಅನ್ನಿಸಿಕೊಳ್ಳುವವರಿಗೆ ಮಾತ್ರ ಕಷ್ಟ. ಏನೋ ನಮ್ಮ ಹುಡುಗಿಯ ಹಣೆಯ ಮೇಲೆಬರೆದಿದ್ದಂತಾಗುತ್ತೆ. ನಾನೇನು ಮಾಡಲಿ?"

"ನೀವು ಮನಸ್ಸುಮಾಡಬೇಕು. ನೀವೂ ತಂದೆಯವರಂತೆ ಹಟಕ್ಕೆ ಕುಳಿತರೆ ಇಬ್ಬರ ಜೀವನ ಹಾಳಾಗುವುದು. ಅದರಿಂದ ನಿಮಗೆ ಮಾತು ಬರುವುದಿಲ್ಲವೆ. ಶ್ರೀನಿವಾಸಯ್ಯನವರು ಹಾಸಿಗೆಯಲ್ಲಿ ಅರ್ಧ ಎದ್ದು ಕುಳಿತು ಹೇಳಿದರು—ಉತ್ತೇಜಿತರಾಗಿ "ರಂಗಣ್ಣ. ನಾನೂ ಬಾಳಿ ಬದುಕಿದವನು. ನಿಮ್ಮ ಮನೆತನಕ್ಕಿಂತ ನಮ್ಮ ಮನೆತನವೇನೂ ಕೀಳಾದುದಲ್ಲ. ಆದರೆ ಈಗ ಸಾಯುವ ಮೊದಲು ನಿಮ್ಮ ತಂದೆಯ ಕಡೆಯಿಂದ ಒದೆಸಿಕೊಳ್ಳಲೇ? ನಿಮ್ಮಂತೆಯೇ ನಮಗೂ ಮಾನ ಮರ್ಯಾದೆಗಳಿವೆ. ಸುಬ್ಬಯ್ಯನ ಕಾಲದಲ್ಲಿ ನಿಮ್ಮದು ಎಂದು ಒಂದು ಮೆಟ್ಟು ನೆಲವಿರಲಿಲ್ಲ.

ನರಸಿಂಹಯ್ಯನವರ ಕಾಲದಲ್ಲಿ ಆಸ್ತಿತಿ ಮತ್ತೆ ಬಂದೀತು. ಐಶ್ವರ್ಯ ಸ್ಥಿರವಲ್ಲ. ನಿಮ್ಮ ಕಾಲಿಗೆ ಬಿದ್ದು ಹೆಣ್ಣುಕೊಡುವ ಅವಶ್ಯಕತೆಯಿಲ್ಲ. ಎಂದಿದ್ದರೂ ನೀವು ತುದೆಮಕ್ಕಳೇ. ನಿಮ್ಮ ಮಧ್ಯೆ ನನ್ನ ಹುಡುಗಿಯನ್ನು ತಂದು ನಿಲ್ಲಿಸಲಾರೆ. ಹಾಗೆ ಮಾಡಿ ಅವಳ ಜೀವನ ಹಾಳುಮಾಡಲಾರೆ. ಈಗ ನೀನೂ ಹುಡುಗಾಟಿಕೆಯ ಹುಚ್ಚಿನಲ್ಲಿ ಹೀಗೆ ಹೇಳುವಿ. ನಾಳೆ ನೀನೂ ನನ್ನ ಮಗುವಿನಲ್ಲಿ ದೋಷಾರೋಪಣೆಮಾಡಿ ಅವಳನ್ನು ಹೊರಗಿಡುವುದಿಲ್ಲ ಎಂದು ಯಾವ ಖಾತ್ರಿ? ರಂಗಣ್ಣ, ನಮ್ಮ ಲಲಿತೆಗೆ ಬೇರೆ ವರ ನಿಶ್ಚಯವಾಗಿದೆ. ಆಮಾತು ಹಿಂದಕ್ಕೆ ತೆಗೆದುಕೊಳ್ಳುವುದೇ? ಸುಖವೋ ದುಃಖವೋ ಅವರವರ ಪೂರ್ವಾರ್ಜಿತ ”

ಅವರೊಂದಿಗೆ ವಾದಿತನಾಡಿ ಪ್ರಯೋಜನವಿರಲಿಲ್ಲ. ಅವರ ಹಟ ನರಸಿಂಹಯ್ಯನವರ ಹಟಕ್ಕೇನೂ ಕಡಿಮೆಯಾಗಿರಲಿಲ್ಲ.

ಲಲಿತೆಯೊಡನೆ ಕೊನೆಯ ಮಾತೊಂದು ಆಡುವುದುಳಿಯಿತು. ಅಲ್ಲಿಗೆ ಮನುಷ್ಯ ಪ್ರಯತ್ನ ಕೊನೆಗಂಡಂತೆಯೇ. ಶೃಂಗೇರಿಯಂತಹ ಪುರಾತನಸಂಪ್ರದಾಯಗಳ ತೌರುಮನೆಯಲ್ಲಿ ಗಂಡು ಕನ್ಯಾರ್ಥಿಯಾಗಿ ಹೋಗುವ, ಹೆಣ್ಣನ್ನು ಪ್ರೇಮ ಭಿಕ್ಷೆಬೇಡುವ ಅತ್ಯಾಧುನಿಕ ಘಟನೆ ನಡೆಯುವುದಿತ್ತು. ಇದನ್ನು ಕಣ್ಣಾರೆಕಂಡ ತುಂಗೆ ನಗುತ್ತ ಮುಂದೆ ಸಾಗಿದ್ದಳು. ಯಾವಳ ಸಮಕ್ಷಮದಲ್ಲಿ ಈ ಪ್ರಣಯ ಜನ್ಮತಾಳಿತೋ ಅವಳ ಸಮಕ್ಷಮದಲ್ಲಿಯೇ ಆ ಪ್ರೇಮಿಗಳ ಆಸೆಯೂ ಭಗ್ನವಾಗುವುದಿತ್ತು.

[೮]

ಸಂಜೆ ಶಾರದಾ ದೇವಸ್ಥಾನದಲ್ಲಿ ಲಲಿತೆ ಸಿಕ್ಕಳು. ಸುತ್ತಿನಲ್ಲಿ ಹೋಗುತ್ತಿರುವಾಗ ಅವಳನ್ನು ರಂಗಣ್ಣ ಮಾತಾಡಿಸಿದ. ಸೌಖ್ಯವಾಗಿದ್ದೀರಾ ಭಾವ? ಎಂದಿಷ್ಟೇ ಕೇಳಿದಳು ಅವಳು– ಕುಗ್ಗಿದ ಧ್ವನಿಯಲ್ಲಿ ರಂಗಣ್ಣ ‘ ಲಲಿತ ನಿನ್ನೊಡನೆ ಸ್ವಲ್ಪ ಮಾತಾಡುವುದಿತ್ತು. ನಾಳೆ ಸಂಜೆಯಹೊತ್ತಿನಲ್ಲಿ ಮಲ್ಲಪ್ಪನ ಹೊಳೆಗೆ ಬರುತ್ತೀಯೇನು ? ’ ‘ ಹೂಂ ’ ಎಂದಳು ಅವಳು.

ಸಂಜೆ ಎಂದಿಗಾದೀತು ಎಂಬ ಕಾತರದಿಂದ ನಿಮಿಷಗಳನ್ನು ಕಳೆದ ಅವನು. ಈಗಲೇ ಲಲಿತ ಅನ್ಯರವಳಾಗಿದ್ದಾಳೆ. ಅವಳೆಂದಾದರೂ ತನ್ನವಳಾದಾಳೇ! ಈ

ಒಂದು ಮುಹೂರ್ತ ಬಹಳ ಮಹತ್ವವುಳ್ಳದ್ದು. ಅವಳೊಪ್ಪಿಗೆಯಿದ್ದರೆ ತನ್ನ ಬಾಳಿನ ಸುಖಕ್ಕೆ ಕಲ್ಲುಹಾಕಲು ಅವನಿಗಿಷ್ಟವಿಲ್ಲ.

ಲಲಿತ ಕೈಯಲ್ಲಿಷ್ಟು ಬಟ್ಟೆ ತೆಗೆದುಕೊಂಡು ನದಿಗೆ ಬಂದಳು. ಇದು ತಮ್ಮಿಬ್ಬರ ಕೊನೆಯ ಭೇಟಿಯೋ ಎಂಬಂತೆ ರಂಗಣ್ಣ, ಅವಳನ್ನು ಕಣ್ಣಿಟ್ಟು ನೋಡಿದ. ಸಂಜೆಯ ಸೂರ್ಯನ ಕಿರಣಗಳು ಅವಳಮುಖದ ಕೆಂಪನ್ನು ಹೆಚ್ಚಿಸಿವೆ. ಅವಳ ನಡೆಯಲ್ಲಿನ ಒಂದು ಸ್ವಾಭಾವಿಕವಾದ ವೈಯ್ಯಾರ ಒಡೆದು ಕಾಣುತ್ತಿದೆ. ಅವಳು ಕಲ್ಲಮೇಲೆ ಬಟ್ಟೆಗಳನ್ನು ನೆನಸಿ ರಾಸಿಹಾಕುತ್ತ ಕುಳಿತಳು.

‘ ಲಲಿತ ’

‘ ಏನುಭಾವ ? ’

‘ ಲಲಿತ, ನನ್ನೊಡನೆ ಮಾತಾಡದಂತಹ ತಪ್ಪು ನಾನೇನುಮಾಡಿದೆ. ನಿನ್ನೆ ನಿಮ್ಮ ಮನೆಗೆ ಬಂದಾಗ ಒಂದುಮಾತೂ ಆಡಲಿಲ್ಲ. ಈ ಸ್ವಲ್ಪವೇ ದಿನಗಳಲ್ಲಿ ನಾನು ಅಷ್ಟುಅನ್ಯನಾಗಿ ಹೋದೆನೇ ? ’

ಲಲಿತ ಅಳಲು ಮೊದಲಿಟ್ಟಳು.

‘ ಲಲಿತ, ನಾನು ನಿನ್ನನ್ನು ದೂರಲಿಲ್ಲ. ನಿನ್ನೊಡನೆ ಮಾತಾಡಬೇಕೆಂದು ಎಷ್ಟು ಆಸೆಯಿಂದ ನಿಮ್ಮಮನೆಗೆ ಬಂದೆ ಗೊತ್ತೆ ? ’

‘ ಈಗ ಬಂದಿದ್ದೇನಲ್ಲಾ? ’

‘ ಲಲಿತ, ಅಪ್ಪ ನನ್ನ ಮದುವೆಯಾಗಲು ಒತ್ತಾಯಪಡಿಸುತ್ತಿದ್ದಾರೆ’

‘ ಹೂಂ.’

‘ ಆದರೆ ನನಗೆ ಇಷ್ಟವಿಲ್ಲ’

ಲಲಿತ ಮೌನ.

‘ ಲಲಿತ, ನನ್ನ ಮದುವೆ ಆಗಲೇ ಆಗಿಹೋಗಿದೆ. ನನ್ನ ಮನಸ್ಸಿನಲ್ಲಿ ಅವಳೊಬ್ಬಳಿಗಲ್ಲದೆ ಬೇರೆಯವರಿಗೆ ಜಾಗವಿಲ್ಲ ’

‘ ................ ’

‘ ಆದರೆ ನನ್ನ ಮನಸ್ಸೊಪ್ಪಿದವಳು ತನ್ನ ಮನಸ್ಸನ್ನು ಇನ್ನೂ ಬಿಚ್ಚಿ ತೋರಿಸಿಲ್ಲ’

‘...............’

‘ ಲಲಿತ, ನಿನ್ನ ಹೊರತು ನಾನು ಯಾರನ್ನೂ ಮದುವೆಯಾಗಲಾರೆ. ನೀನೂ ಒಪ್ಪಿದೆ ಎನ್ನು. ನಾನು ಅಪ್ಪನಿಗೆ ಖಂಡಿತ ಹೇಳಿಬಿಡುತ್ತೇನೆ ’

‘....... ........’

‘ ಲಲಿತ, ನಿನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳು.

‘ ನಿಮ್ಮ ತಂದೆಯವರು ಒಪ್ಪುವುದಿಲ್ಲ.’

‘ ಅವರೊಪ್ಪದಿದ್ದರೆ ಬೇಡ. ನಾಳೆ ಅವರು ನನ್ನ ಸುಖ ದುಃಖಗಳಿಗೆ ಹೊಣೆಯಾಗುವುದಿಲ್ಲ ’

‘ ತಾತನೂ ಒಪ್ಪುವುದಿಲ್ಲ ’

‘ ಅವರಿಗೆ ಮನಸ್ಸಿಗೆ ನೋವಾಗಿದೆ. ಅದಕ್ಕೇ ಹಾಗೆ ಹೇಳುತ್ತಾರೆ. ಅಷ್ಟೆ.’

‘ ಯಾರೂ ಒಪ್ಪದಮೇಲೆ........’

‘ ಲಲಿತ, ನೀನೂ ಒಪ್ಪಿದೆ ಎನ್ನು. ನನಗೆ ಹೇಗೂ ಪರೀಕ್ಷೆಯಾಗಿ, ಕೆಲಸ ಸಿಕ್ಕುತ್ತದೆ. ನಿನ್ನ ಕಣ್ಣೊಳಗೆ ಹಾಕಿ ಮುಚ್ಚಿಟ್ಟು ಕಾಪಾಡುತ್ತೇನೆ.’

‘ ಇಲ್ಲ. ಆಗುವುದಿಲ್ಲ ಭಾವ ’

‘ ಲಲಿತ, ಹಾಗಿದ್ದರೆ ನಾನು ನಿನಗೇನಾಗುವುದೂ ಬೇಡವೆ? ನನ್ನ ಮೇಲೆ ನಿನಗೆ ಸ್ವಲ್ಪವೂ ವಿಶ್ವಾಸವಿಲ್ಲವೆ? ತಾತ ನಿಶ್ಚಯಿಸಿರುವ ಸಂಬಂಧವೇ ನಿನಗೆ ಹಿತ ಅನ್ನು’

‘ ಭಾವ. ನನ್ನ ಮನಸ್ಸು ನಿಮಗೆ ಹೇಗೆ ಗೊತ್ತಾದೀತು ; ಆದರೆ, ನಿಮ್ಮ ಮುಂದಿನ ಏಳಿಗೆಗೆ ನಾನು ಅಡ್ಡಿಬರಲಾರೆ. ಹೊನ್ನಹಳ್ಳಿಯವರು ನಿಮಗೆ ಸಾವಿರಾರು ರೂಪಾಯಿ ಕೊಡುತ್ತಾರೆ. ನಿಮ್ಮ ಮುಂದಿನ ಸುಖದ ದಾರಿ ತೆರೆಯು

ತ್ತದೆ. ನಾನು ಬಂದು ಎಲ್ಲರಿಂದಲೂ ' ಇವಳು ಶನಿಯಂತೆ ಬಂದಳು ' ಎಂದೆನ್ನಿಸಿಕೊಂಡು ನಿಮ್ಮ ಸುಖಕ್ಕೆ ಎಳ್ಳು ನೀರು ಬಿಡಿಸಲೆ ? '

' ಲಲಿತ, ಇದರಿಂದ ಮುಂದೆ ಜೀವವಿರುವವರೆಗೂ ದುಃಖಪಡಬೇಕಾದೀತು ನಾನು. ನಿನ್ನ ಬೇಡಿಕೋತೇನೆ. ಹೂಂ ಎನ್ನು ಲಲಿತ.'

'ಇಲ್ಲ ಭಾವ, ನಾನು ಸತದೃಷ್ಟಿ. ವಿಘ್ನಗಳಿಗೆಯಲ್ಲಿ ಹುಟ್ಟಿದ್ದೇನೆ. ನಾನು ಕೈ ಹಿಡಿದವನು ಬದುಕುವುದಿಲ್ಲ. ಸೇರಿದ ಮನೆ ಉದ್ಧಾರವಾಗುವುದಿಲ್ಲ.'

' ಏನುಮಾತು ಆಡುತ್ತೀ ಲಲಿತ. ಹಾಗೆಂದು ಯಾರು ಹೇಳಿದವರು ? ಸುಮ್ಮನೇ ಹುಚ್ಚು ಹುಚ್ಚು ಮಾತಾಡಬೇಡ. ಯಾರು, ಅಪ್ಪ ಹಾಗೆಂದು ಹೇಳಿದರಂತೇನು ?

' ಯಾರೂ ಹೇಳಿದ್ದಲ್ಲ ಭಾವ. ನನ್ನ ಜಾತಕದಲ್ಲಿ ಬರೆದಿದೆ.'

' ಅದನ್ನಾದರೂ ಯಾರು ಹೇಳಿದವರು. ಅದೆಲ್ಲಾ ಸುಳ್ಳು. ಹಾಗೆಲ್ಲಾ ಹೇಳಲು ಬರುವಂತಿದ್ದರೆ ಇಷ್ಟೆಲ್ಲಾ ರಂಪ ಆಗಬೇಕಾಗುತ್ತಿತ್ತೆ, ಪ್ರಪಂಚದಲ್ಲಿ ?'

' ಅದೇನೊ ಭಾವ. ಯಾರನ್ನಾದರೂ ಭಾಗ್ಯವತಿಯನ್ನು ಕೈಹಿಡಿದು ನೀವು ಸುಖವಾಗಿರಿ. ನನಗೆ ಬಹಳ ಸಂತೋಷವಾಗುತ್ತೆ ಅದರಿಂದ. ಕನಸಿನಲ್ಲಿಯೂ ನಿಮಗೆ ಕೇಡು ಬಗೆಯುವುದು ನನ್ನಿಂದಾಗದು.'

' ಛೀ, ಹುಚ್ಚಿ. ಯಾವುದೋ ಸುಳ್ಳು ಸುಳ್ಳು ನಂಬಿಕೆಯನ್ನು ನಿನ್ನ ತಲೆಯಲ್ಲಿ ತುಂಬಿಬಿಟ್ಟಿದ್ದಾರೆ. ಈಗ ಗೊತ್ತಾಯಿತು ಬಿಡು. ನಾನು ಏನೋ ಅಂತಿದ್ದೆ. ನನ್ನ ಯೋಗಕ್ಷೇಮದಲ್ಲಿ ಎಷ್ಟು ಆಸಕ್ತಿ ನಿನಗೆ ! ಇಂತಹವಳನ್ನು ಹೇಗೆತಾನೇ ಬಿಟ್ಟಿರಲಿ?

'ಅದಲ್ಲ ಭಾವ. ಸುಮ್ಮನೆ ಹೇಳಿದೆ ಅಷ್ಟೆ. ಒಟ್ಟಿನಲ್ಲಿ ಈಗ ನೀವು ಕೇಳುತ್ತಿರುವ ವಿಷಯದಲ್ಲಿ ಕೆಡುಕೇ ಜಾಸ್ತಿಯಿದೆ. ಆದ್ದರಿಂದ ನನ್ನ ಪಾಡು ನನಗೆ.'

' ಸುಮ್ಮನೇ ಈರೀತಿ ಹಟದಮಾತಾಡಬೇಡ ಲಲಿತ. ಇದಂತಹ ವಿಷಯವಲ್ಲ. ಇನ್ನೂ ಯೋಚಿಸಿನೋಡು.

'ಇಲ್ಲ ಭಾವ ನೀವು ನಿನ್ನೆ ನಮ್ಮ ಮನೆಗೆ ಬಂದಾಗಿನಿಂದ ಯೋಚಿಸಿದ್ದೇನೆ. ರಾತ್ರಿಯೆಲ್ಲಾ ಯೋಚಿಸಿದ್ದೇನೆ. ನೀವು ಇಂತಹದಕ್ಕೇ ನನ್ನೊಡನೆ ಮಾತಾಡಲು ಬಯಸಿದಿರಿ ಎಂದು ನನಗೆ ತಿಳಿದು ಅದರ ವಿಷಯವಾಗಿ ಇಲ್ಲಿಗೆ ಬರುವ ಮೊದಲೇ ನಿರ್ಧಾರಕ್ಕೆ ಬಂದಿದ್ದೆ. ನಾನು ಪಡೆದದ್ದು ನಾನೇ ಅನುಭವಿಸುತ್ತೇನೆ. ನನ್ನಿಂದ ಇನ್ನೊಬ್ಬರಿಗೆ ತೊಂದರೆ ಬೇಡ.'

ರಂಗಣ್ಣನ ಯೋಚನೆ ಅಭ್ಯರ್ಥನೆಗಳೆಲ್ಲಾ ಅವಳಮುಂದೆ ವ್ಯರ್ಥವಾದುವು. ಅವನು ತಲೆಯಮೇಲೆ ಕೈ ಹೊತ್ತುಕೊಂಡು ಕುಳಿತುಬಿಟ್ಟ. ಈ ಹಳ್ಳಿಯ ಹುಡುಗಿ ಇಂತಹ ವಿಚಾರದಲ್ಲಿ ಖಂಡಿತವಾದ ಉತ್ತರ ಕೊಡುವಷ್ಟು ಬಲವನ್ನು ಎಲ್ಲಿಂದ. ಪಡೆದಿದ್ದಳೋ ? ಅದಕ್ಕೆ ತಕ್ಕ ಶಿಕ್ಷಣವನ್ನು ಕೊಟ್ಟವನು ತಾನೇ, ಈ ನಾಲ್ಕು ವರ್ಷಗಳಲ್ಲಿ. ಲಲಿತ ಮನೆಗೆ ಹೊರಡಲಣಿಯಾಗಿ ಒಂದು ಬಲಾತ್ಕಾರದ ನಗುವನ್ನು ತಂದುಕೊಂಡು ಹೇಳಿದಳು.

'ಭಾವ ನಿಮ್ಮ ಮನಸ್ಸು ದೊಡ್ಡದು. ಆದರೆ ಈ ಪಾಪಿಗೋಸ್ಕರ ಯೋಚಿಸಬೇಡಿ. ನೀವು ದೊಡ್ಡವರಾಗಲು ತಕ್ಕವರು. ನಿಮ್ಮ ಕಾಲಿಗೆ ಒಂದು ಬೀಸುವ ಕಲ್ಲುಕಟ್ಟಿದಂತೆ ನಾನು ಆಗಲಾರೆ. ಹಿಂದಿನ ಜನ್ಮದ ಪಾಪದಿಂದ ಇಂದಿನ ಜನ್ಮದಲ್ಲಿ ನನಗೀ ದುರ್ಗತಿ ಬಂದಿತು. ಆದರೆ ಅದೇ ಮುಂದಿನ ಜನ್ಮದಲ್ಲಿಯೂ ಬಾರದಿರಲಿ.'

ಅವಳು ಹೊರಟುಹೋದಳು. ರಂಗಣ್ಣ ಉದ್ವಿಗ್ನನಾಗಿ ಕುಳಿತುಬಿಟ್ಟ. ಕತ್ತಲಾಯಿತು. ದೇವಸ್ಥಾನದಲ್ಲಿ ಮಂಗಳಾರತಿಯ ವಾದ್ಯ ಕೇಳಿಸಿತು. ಚಂದ್ರ ಮಂದ ಪ್ರಕಾಶವನ್ನು ನದಿಯಮೇಲೆ ಚಲ್ಲಿದ, ನಕ್ಷತ್ರಗಳು ಮೂಡಿದುವು. ಆದರೂ ಅವನು ಸ್ಥಳಬಿಟ್ಟು ಕದಲಲಿಲ್ಲ. ಅಲ್ಲಿಯ ಎತ್ತರದ ಕಲ್ಲಿನಿಂದ ಕೆಳಗೆ ಹಾರಿ ಯಾವ ಪ್ರಯತ್ನವನ್ನೂ ಮಾಡದೆ ಜೀವನವನ್ನು ಕೊನೆಗಾಣಿಸಬೇಕೆಂಬ ಯೋಚನೆ ಅವನ ಮನಸ್ಸಿನಲ್ಲಿ ಪದೇ ಪದೇ ಸುಳಿದು, ಯಾವುದರಿಂದಲೋ ಕಾರ್ಯರೂಪಕ್ಕಿಳಿಯದೆ ನಿಂತು ಹೋಯಿತು.

ಮುಂದೆ ಈದಿನ ಕುರಿತು ಇಬ್ಬರೂ ವ್ಯಸನಪಟ್ಟಾರು. ಇಂದಿನ ಇಬ್ಬರ ಮಾತುಕತೆಗಳ ಹಿಂದೆ ಅಧೈರ್ಯವಿದ್ದಿತು. ಕಂಡು ಕೇಳದಂತಹ ದಾರಿಯಲ್ಲಿ ಕಾಲಿಡಲು ಆ ಹಳ್ಳಿಯ ಮುಗ್ಧೆಯಾದ ಹದಿನಾಲ್ಕುವರ್ಷದ ಬಾಲೆ ಹೆದರಿದಳು. ಅವಳಿಗಿನ್ನೆಷ್ಟು ಕಾಲಾವಕಾಶಕೊಟ್ಟಿದ್ದರೆ! ಈ ವಿಷಯವನ್ನು ಇಷ್ಟು ಆಕಸ್ಮಾತ್ ಮುಂದೆ

ತರದೆ ಕ್ರಮಕ್ರಮವಾಗಿ ಅವಳ ಮನಸ್ಸನ್ನು ಹದಗೊಳಿಸಿದ್ದರೆ, ಪರಿಣಾಮ ಬೇರೆಯಾಗುತ್ತಿದ್ದಿತೋ ಏನೋ? ಆದರೆ ವಸ್ತುಸ್ಥಿತಿಯಲ್ಲಿ ಈ ಸಲಹೆ ಅತ್ಯಂತ ನೂತನವಾಗಿ ಅವಳು ಲಜ್ಜೆಯನ್ನು ತೊರೆದು ಈ ವಿಷಯಚರ್ಚಿಸಬೇಕಾಗಿ ಬಂದಿತ್ತು. ಕಾಲಾವಕಾಶವೂ ಕಡಿಮೆಯಾಗಿ ಮನಸ್ಸಿನ ಆಂದೋಳನದಲ್ಲಿ ಈರೀತಿ ನಿರ್ಧಾರಕ್ಕೆ ಬಂದಿರಬಹುದು. ರಂಗಣ್ಣನಿಗೂ ಧೈರ್ಯವಿದ್ದಿತೆಂದೂ ಹೇಳಲು ಬರುವಂತಿಲ್ಲ. ಒಂದು ಧ್ವನಿ ಧೈರ್ಯ ಕೊಡುತ್ತಿದ್ದರೂ ಇನ್ನೊಂದು ಧ್ವನಿ ಎದೆಗುಂದಿಸುತ್ತಿತ್ತು.

ಅದೇ ಜ್ಯೇಷ್ಠದಲ್ಲಿ ಲಲಿತ ಮಕ್ಕಿಮನೆಯ ಶಾನುಭೋಗರು ಕೃಷ್ಣಪ್ಪನವರ ಅರ್ಧಾಂಗಿಯಾದಳು.

ಒಂದುಗೂಡಿದ್ದರೆ ಸೊಗಸಾಗುತ್ತಿದ್ದ ಎರಡು ಜೀವಗಳು ಬೇರೆ ಬೇರೆ ಹಾದಿಯಲ್ಲಿ ಹೊರಟು ಹೋದುವು. ಒಂದಕ್ಕೊಂದಕ್ಕೆ ಇನ್ನು ಏನು ಸಂಬಂಧ? ರಂಗಣ್ಣನಿಗೆ ಲಲಿತೆ ಯಾರು? ಯಾರು ಏನಾದರೆ ಇನ್ನೊಬ್ಬರಿಗೇನಂತೆ? ಜೀವನ ಇಷ್ಟೇನೇ!

[೮]

ಈಗ ರಂಗಣ್ಣನ ಮೇಲೆ ನಿರಾಶೆಯ ಮಬ್ಬು ಕವಿಯಿತು. ಜೀವನದಲ್ಲಿಯೇ ಅವನಿಗೆ ಜಿಗುಪ್ಸೆಹುಟ್ಟಿತ್ತು. ಈ ಪರಿಸ್ಥಿತಿಯಲ್ಲಿಯೇ ಪರೀಕ್ಷೆಯೂ ಕಳೆದು ಈಗ ಊರಿಗೆ ಹೋಗುವುದು ಅವನಿಗೆ ಯಾತನೆಯಾಗಿತ್ತು. ಲಲಿತೆಯನ್ನು ಮರೆಯುವುದಾಗಲಿಲ್ಲ. ಆದರೂ ಇನ್ನೂ ಲಲಿತೆ ಬೇರೆಯವರವಳಾದಳು ಎನ್ನುವ ವಿಷಯ ನಿಖರವಾಗಿ ತಿಳಿದುಬಂದಿರಲಿಲ್ಲ. ಆಸೆಯ ಕುಡಿಯುನ್ನೂ ಜೀವದಿಂದಿತ್ತು. ಯಾವುದೋ ಅಘಟಿತಘಟನಾಶಕ್ತಿಯಿಂದ ತನ್ನ ಆಸೆ ಫಲಿಸೀತು ಎಂದು ಕಲ್ಪಿಸಿಕೊಂಡ. ಆದ್ದರಿಂದ ಪರೀಕ್ಷೆಯಾದಕೂಡಲೇ ಊರಿಗೆ ಹೊರಟ.

ಹೊಸಹಳ್ಳಿಯಲ್ಲಿ ಅಡಿಕೆ ಕೊಯಲು ಮುಗಿದಿದೆ. ಈಗ ಹಳ್ಳಿಗೆ ಸ್ವಲ್ಪ ವಿರಾಮಕಾಲ. ಜನರು ಸತ್ಯನಾರಾಯಣನ ಪೂಜೆ, ಯಕ್ಷಗಾನಕೂಟ ಮೊದಲಾದ

ಸೇವಗಳಿಂದ ಸಂತೋಷದಿಂದ ಕಾಲತಳ್ಳುತ್ತಿದ್ದಾರೆ. ಆದರೆ ರಂಗಣ್ಣ ಅದೊಂದರಲ್ಲಿ ಯೂ ಭಾಗಿಯಾಗುತ್ತಿಲ್ಲ. ತನ್ನ ಮನಸ್ಸನ್ನು ಲಲಿತೆಯ ಯೋಚನೆಯಿಂದ ವಿಮು ಖವಾಗಿಸುವ ಒಂದೇ ಒಂದು ಸಾಧನ, ತೋಟದ ಕೆಲಸ.

ಬೆಳಗಾಗ ಎದ್ದು ಅವನು ತೋಟಕ್ಕೆ ಹೋಗುತ್ತಾನೆ. ಅಲ್ಲಿ ನೀರುಹಾಯಿ ಸುವುದು, ಬಿದ್ದ ಸೋಗೆಗಳನ್ನು ಒಟ್ಟೈಸುವುದು, ಬೇಲಿ ಒಡ್ಡುಗಳನ್ನು ಸರಿಮಾಡಿ ಸುವುದು ಇದರಲ್ಲಿ ಬಿಸಿಲೇರುತ್ತದೆ. ಸಾಲಾಗಿರುವ ಅಡಿಕೆಮರಗಳು, ಹೆಡಲನ್ನು ಬೀಸಿ ನಿಂತಿರುವ ಬಾಳೆಯ ಗಿಡಗಳು, ಅಡಿಕೆಯ ಮರವನ್ನು ತಬ್ಬಿ ಹಬ್ಬಿರುವ ಮೆಣಸು ವೀಳೆಯದೆಲೆ ಬಳ್ಳಿಗಳು, ಪ್ರತಿ ಮರದಲ್ಲಿಯೂ ಬೀಸಿರುವ ಸಿಂಗಾರ, ಸಾರಿಸಿದಂತಿ ರುವ ನೆಲ-ತೋಟದಲ್ಲಿಯೇ ಇರುವ ಒಂದು ಅಂದ, ಗಾಂಭೀರ್ಯ ಅವನ ಮನಸ್ಸ ನ್ನು ಸ್ವಲ್ಪ ಹರ್ಷಗೊಳಿಸುವುದು. ಆ ಸೊಗಸಾದ ಪ್ರಭಾತದಲ್ಲಿ ಅವನಿಗೂ ತೋಟಕ್ಕೂ ಗೆಳೆತನ ಬೆಳೆದುಬರುತ್ತಿದೆ.

ಮನೆಯಲ್ಲಿ ತಿಂಡಿಕಾಫಿ ಮುಗಿಸಿ ಪುನಹ ಹೊರಟುಬಿಡುವನು. ಮಧ್ಯಾ ಹ್ನದವರೆವಿಗೂ ಹೂ ತರಕಾರಿಗಿಡಗಳಿಗೆ ನೀರು, ಗೊಬ್ಬರ, ಅಡರು ಚಪ್ಪರದಲ್ಲಿ ಕಾಲ ಕಳೆದು ಹೋಗುವುದು. ಬಂದು ಸ್ನಾನಮಾಡಿ ಊಟಮಾಡಿ ಪುನಹ ಹೋ ದರೆ ಕಾಫೀತೋಟದ ಕಸಿ, ಅಗತೆಗಳ ಉಸ್ತುವಾರಿ. ಸಂಜೆಯಹೊತ್ತಿಗೆ ಗುಡ್ಡದ ಮೇಲೆ ಸ್ವಲ್ಪ ತಿರುಗಾಡಿಕೊಂಡು ಬರಲು ಹೋಗುವನು. ಸುತ್ತಮುತ್ತಲಿನ ಕಾಡು ಮೇಡುಗಳ ಸೊಬಗು ಅವನನ್ನು ಪರವಶನನ್ನಾಗಿಮಾಡುವುವು. ಸಂಜೆ ಬಂದು ಊಟಮಾಡಿ ಮಲಗಿದರೆ ದಣಿದ ದೇಹಕ್ಕೆ ನಿದ್ದೆ ಬಂದು ಬಿಡುವುದು.

ಇದೇ ಅವನ ದಿನಚರಿ. ಅವನ ಭಗ್ನವಾದ ಪ್ರೀತಿ ಈಗ ಪ್ರಕೃತಿಯಲ್ಲಿ ಬೆಳೆದುಬರುತ್ತಿದೆ. ಈ ದುಡಿತದಲ್ಲಿಯೇ ಶಾಂತಿಯನ್ನು ಕಾಣಬಲ್ಲೆ, ಹೀಗೇ ದುಡಿ ಯುತ್ತ ದುಡಿಯುತ್ತ ಜೀವನದ ಗುರಿಯನ್ನು ಮುಟ್ಟಬಲ್ಲೆ ಎಂಬ ವಿಶ್ವಾಸ ಅವ ನಲ್ಲಿ ಮೂಡಿಬರುತ್ತಿದೆ.

ಆದರೆ ಬಿರುಗಾಳಿಗೆ ಸಿಕ್ಕ ಅವನ ಜೀವನನೌಕೆ ಸ್ಥಿಮಿತಕ್ಕೆ ಬರುವ ಮೊದಲೇ, ಶಾಂತವಾದ ನೀರನ್ನು ತಲಪುವ ಮೊದಲೇ ಇನ್ನೊಂದು ಬಿರು ಗಾಳಿ ಮಲೆನಾಡಿನ ಜನ ಜೀವನವನ್ನೆಲ್ಲಾ ಕಲಕಿಬಿಟ್ಟಿತು.

ಮಲೆನಾಡ ಮಳೆ ಹೆಸರುವಾಸಿಯಾದುದು. ಜ್ಯೇಷ್ಠದಲ್ಲಿ ಪ್ರಾರಂಭವಾದ ಮಳೆ ಎಡೆಬಿಡದೆ ಕಾರ್ತಿಕದವರೆವಿಗೆ ಸುರಿಯುವುದು. ಹಳ್ಳಕೊಳ್ಳಗಳೆಲ್ಲಾ ತುಂಬಿ ಸರೋವರಗಳಾಗುವುವು. ಹಪ್ಪಳವನ್ನೋ, ಸಂಡಿಗೆಯನ್ನೋ ಮೆಲ್ಲುತ್ತ ಬೆಚ್ಚಗೆ ಕಂಬಳಿಹೊದ್ದು ಜನ ಮನೆಯಲ್ಲೇ ಮುದ್ದುರಿಬಿಡುವರು. ಆದರೆ ಈವರ್ಷ ಅಸಾಧ್ಯ ವಾಗಿ ಮಳೆಯಾಯಿತು. ಆಕಾಶದಲ್ಲಿ ತೂತುಬಿದ್ದಿದೆಯೊ ಎನ್ನುವಂತೆ ಧಾರಾಕಾರ ವಾಗಿ ಕುಂಭದ್ರೋಣ ಮಳೆಯಾಯಿತು. ಗದ್ದೆಯಲ್ಲಿ ಬಿತ್ತಿದ್ದ ಬೀಜವೆಲ್ಲಾ ಕೊಚ್ಚಿ ಹೋಯಿತು. ನೆಟ್ಟ ಭತ್ತದ ಸಸಿಯೆಲ್ಲಾ ಆ ಮಳೆಗೆ ಕೊಳೆತುಹೋಯಿತು. ಹಳ್ಳ ಗಳು ತುಂಬಿ ಗದ್ದೆಯಮೇಲೆ ಹರಿದು ಅಂಚನ್ನು ಕೊರೆದು ಮರಳನ್ನು ಗದ್ದೆತುಂಬಾ ತುಂಬಿಸಿದುವು.

ತೋಟಗಳಲ್ಲಿ ಇಂದು ಒಂದೆರಡು ಅಡಿಕೆಕಾಯಿಗಳು ಉದುರಿದುದು ಕಾಣಬಂದಿತು. ಬಹುಶಃ ಮಂಗಗಳು ಕೆಡಪಿದ್ದಿರಬೇಕೆಂದು ಜನ ಭಾವಿಸಿದರು. ಆದರೆ ದಿನೇ ದಿನೇ ಕಾಯಿ ಉದುರುವುದು ಜಾಸ್ತಿಯಾಯಿತು. ಮರದ ಮೇಲಿನ ಕಾಯಿಯೆಲ್ಲಾ ತಳದಲ್ಲಿ ಕೊಳೆತು ಬಿದ್ದಿತು. ತೋಟಕ್ಕೆ ಕಾಲಿಡಲು ಬರುವಂತಿಲ್ಲ. ಜೀವ ತಿನ್ನುವ ನುಸಿಗಳು, ಮೂಗೊಡೆಯುವ ಕಾಯಿ ಕೊಳೆತನಾತ. ಏನಿದು ಅನಾ ಹುತ! ಕೋಳೆರೋಗ ಎಂಬ ವದಂತಿ ಕಾಳ್ಕಿಚ್ಚಿನಂತೆ ಹಬ್ಬಿತು. ಕೊಳೇ ರೋಗ ! ಜನ ನಡುಗಿದರು. ಕೋಳೇರೋಗ ಕಬ್ಬಿನ ಹಿತ್ತಲಿಗೆ ಆನೆಹಿಂಡು ನುಗ್ಗಿದಂತೆ. ಮಾರಿ ! ಅದು ಅವರಿಗೆ ಹೊಸದು. ನಿವಾರಣೋಪಾಯ ತಿಳಿಯದು. ತಿಳಿದರೂ ಅವರಲ್ಲಿ ತಕ್ಕ ಸಲಕರಣೆಗಳಿಲ್ಲ. ಆ ಮಳೆಯಲ್ಲಿ ಏನು ಮಾಡಲೂ ಬರು ವಂತಿಲ್ಲ. ಮರಗಳು ಹರಳೆಣ್ಣೆ ಹಚ್ಚಿದಂತೆ ಜಾರುತ್ತಿದೆ. ಗಾಳಿಗೆ ಮರದ ಕೊಂಬೆ ಗಳು ನೆಲದವರೆಗೂ ಬಾಗುತ್ತಿವೆ. ಆ ಆರ್ಭಟದಲ್ಲಿ ಮರವನ್ನೇರುವ ಕಲಿಯಾ ದರೂ ಯಾರು ?

ಸುಡಲು ಶೇಖರಿಸಿದ್ದ ಹಾಳೆಗಳಿಂದ ಕೊಟ್ಟೆಯನ್ನು ನೆಟ್ಟರು. ಅದನ್ನು ಕಟ್ಟಲು ಅಭ್ಯಾಸವಿದ್ದವರಿಲ್ಲ. ಸಾಲಮಾಡಿ ಔಷಧಿತಂದರು ಎರಚಲು ಜನರಲ್ಲಿ ಮಿಷನ್ನಿಲ್ಲ. ಎಲ್ಲವನ್ನೂ ಹೊಂದಿಸಿದರೂ 'ಮಳೆಗೇನುಮಾಡುವುದು? ಮಲೆನಾಡನ್ನು ತೊಳೆದುಬಿಡುವುದೊ" ಎಂಬಂತ ಮಳೆ ಸುರಿಯಿತು. ಅದರ ಜೊತೆಗೆ ಜನರ ಕಣ್ಣೀರು ಬಿಡದೆ ಸುರಿಯಿತು.

ಮಳೆ ನಿಂತಿತು. ಸ್ವಲ್ಪ ಬಿಸಿಲು ಮುಖ ನೋಡುವಷ್ಟರಲ್ಲಿ ಅಡಿಕೆಯುಮರಗಳೆಲ್ಲಾ ಬರಿದು, ಗದ್ದೆಗಳೆಲ್ಲಾ ಬರಿದು, ಎಲ್ಲರ ಮನಸ್ಸೂ ಬರಿದು. ಸತ್ತಮನೆಯ ವಾತಾವರಣವೇ ಎಲ್ಲೆಲ್ಲೂ, ಎಲ್ಲರ ಮುಖದಮೇಲೂ ಪ್ರೇತಕಳೆ ಕುಣಿಯುತ್ತಿದೆ. ಆವೇಶೋ ಏನೋ ಪ್ರಕೃತಿಯೂ ತನ್ನ ಮಕ್ಕಳಮೇಲೆ ಸಿಡಿದೆರಗಿದಳು. ಬಿಡದೆ ಮಳೆ ಬಂದಿತು. ಬೇಕಾದ್ದಕ್ಕಿಂತ ಹೆಚ್ಚು ಬಂದಿತು. ಗುಡ್ಡಗಳು ಹಸಿರಾದವು ಕಾಡುಗಳು ಸೊಂಪು ಬೀರಿದವು. ಮನೆಗಳು ಮಾತ್ರ ಸುಧಾಮನ ಅರಮನೆಗಳಾದುವು.

ಈ ಕೋಲಾಹಲದಲ್ಲಿ ರಂಗಣ್ಣ ಲೀನನಾಗಿಹೋದ. ಈಮಧ್ಯೆ ಲಲಿತೆಯ ಮದುವೆಯ ಸುದ್ದಿ ಬಂದುಮುಟ್ಟಿತು. ಆಹೊತ್ತಿಗೆ ಅವನ ಮನಸ್ಸು ಅದಕ್ಕೆ ಸಿದ್ಧವಾಗಿತ್ತು. ಅಲ್ಲದೆ ಈ ಕೆಲಸದ ಗಡಿಬಿಡಿಯು ಸುದ್ದಿಯ ಘಾತವನ್ನು ಕಡಿಮೆಮಾಡಿತು.

ರಂಗಣ್ಣನ ಪ್ರಯತ್ನವೇನೂ ಫಲಿಸಲಿಲ್ಲ. ಕಾರ್ತಿಕ ಬಂದಿತು. ಕೂಡಿಟ್ಟ ಧಾನ್ಯವೆಲ್ಲಾ ಮುಗಿದುಹೋಯಿತು. ಯಾರಮನೆಯ ಮುಂದೆಯೂ ಚಪ್ಪರವಿಲ್ಲ. ಒಣಹಾಕಲು ಅಡಿಕೆ ಇದ್ದರಲ್ಲವೆ ಚಪ್ಪರ. ಅಡಿಕೆ ಬೇಯಿಸುವ ಒಲೆಯ ಹೊಗೆಯಿಲ್ಲ. ಅಡಕೆಕೊಯಿಲಿನ ಸಂಭ್ರಮವಿಲ್ಲ. ರಾತ್ರಿ ಬೆಂಕಿಯಮುಂದೆ ಕುಳಿತು ಹಾಡುಹೇಳುತ್ತಾ, ಕತೆ ಹೇಳುತ್ತಾ, ಯಕ್ಷಗಾನಪದದ ಅರ್ಥ ವಿವರಿಸುತ್ತಾ ಬೆಳಗಿನವರೆಗೂ ಉಲ್ಲಾಸದಿಂದ ಅಡಿಕೆ ಸುಲಿಯುವ ಕಂಬಳವಿಲ್ಲ. ಮದುವಣಿಗನಿದ್ದರಲ್ಲವೆ ಮದುವೆ? ಹಸಿವಿನಕೂಗು ಗಗನವನ್ನು ಮುಟ್ಟಿತು. ಅನ್ನವಿಲ್ಲದೆ ಜನರು ಗೆಡ್ಡೆಗೆಣಸುಗಳನ್ನು ತಿಂದರು, ಸೊಪ್ಪುಸದೆಗಳನ್ನು ತಿಂದರು.

ಕೆಳಮನೆಯ ಶೀನಪ್ಪನಿಗೆ ಆರುಮಕ್ಕಳು. ಒಳ್ಳೆಯ ಕಟ್ಟಾಳು ಅವನು. ಊರು ಸಮೃದ್ಧಿಯಾಗಿದ್ದಾಗ ಗುತ್ತಿಗೆಯ ಜಮೀನಿನಿಂದ ಸುಖವಾಗಿ ಜೀವನ ಕಳೆಯುತ್ತಿದ್ದ. ಈ ವರ್ಷ ತೋಟದಿಂದ ಏನೂ ಹುಟ್ಟಲಿಲ್ಲ. ಮಾರಲು ಮನೆಯಲ್ಲಿ ಏನೂ ಇಲ್ಲ. ಶೀನಪ್ಪ ಸಣ್ಣಗಾದ. ಮಕ್ಕಳ ರೋದನಧ್ವನಿ ಅಡಗಿದ ಹೊತ್ತೇ ಇಲ್ಲ ಆ ಮನೆಯಲ್ಲಿ. ತಾಯಿ ಬಿಸಿನೀರಿನ ಶಾಖಕೊಟ್ಟಳು ಆ ಹಸುಮಕ್ಕಳ ಹಸಿದಹೊಟ್ಟೆಗೆ. ಆದರೆ ಅದರಿಂದ ತತ್ಕಾಲಕ್ಕೆ ಹಾಯೆನಿಸಿತೇ ಹೊರತು ಹಸಿವು ಅಡಗಲಿಲ್ಲ. ಶೀನಪ್ಪ ಉಪವಾಸದಿಂದ ಕ್ಷಯಿಸಿ ದಾರಿಹಿಡಿದ. ಅಂತಹ ಕಟ್ಟಾಳೇ ಹೊರದ ಭಾರವನ್ನು ಆ ಅಬಲೆತಾಯಿಯೇನು ಹೊತ್ತಾಳು? ತಾನೂ ಇಲ್ಲದಿದ್ದರೆ ಆ

ಪರದೇಶಿಮಕ್ಕಳನ್ನು ಕರುಣೆಯಿಂದ ಯಾರಾದರೂ ಸಾಕಿಯಾರು ಎಂಬ ಆಲೋಚನೆ ಅವಳ ತಲೆಯನ್ನು ಹೊಕ್ಕಿತು. ಅವಳು ನೆಲ್ಲಗುಂಡಿಯ ಹಳ್ಳದಲ್ಲಿ ಜಲಸಮಾಧಿ ಹೊಂದಿದಳು. ಜನರಲ್ಲಿ ಕರುಣೆಯು ಸರಿ ಬತ್ತಿಹೋಗಿತ್ತು. ಅದಕ್ಕೆ ತಕ್ಕ ಧಾರಾಳವಿರ ಬೇಕಲ್ಲವೆ? ಮಕ್ಕಳು ಅರಕ್ಷಣೀಯರಾಗಿಯೇ ಉಳಿದು ತಾಯಿತಂದೆಯರನ್ನು ಹಿಂಬಾಲಿಸಿದರು.

ಇಷ್ಟೆಲ್ಲಾ ಆದರೂ ಆ ಅಘುಕ್ತಮೂಲೆಯಲ್ಲಿದ್ದ ಜನರ ಹಾಹಾಕಾರ ಆರ್ತಧ್ವನಿ ಯಾರ ಗಮನವನ್ನೂ ಆಕಡೆ ಸೆಳೆಯಲಿಲ್ಲ.

ಈ ದುರಂತ ಚಿತ್ರವನ್ನು ರಂಗಣ್ಣ ಕಣ್ಣಾರೆ ಕಂಡು ವ್ಯಥೆಪಟ್ಟ. ದೇಶದ ಈ ದುಃಖದ ಮುಂದೆ ತನ್ನೊಂದು ವ್ಯಕ್ತಿಯ ದುಃಖವು ಸಾಸಿವೆಯಂತಿದ್ದಿತು. ಈಗ ತಾನೇನುಮಾಡಬೇಕು? ಮನೆಯ ಪರಿಸ್ಥಿತಿ ವಿಷಮಿಸುತ್ತಿತ್ತು. ಆ ಕುಟುಂಬಕ್ಕೆ ತಾನೂ ಭಾರವಾಗಿ ಉಳಿಯುವುದು ಸರಿಯಾಗಿರಲಿಲ್ಲ ತಾನೆಲ್ಲಿಯಾದರೂ ನಾಲ್ಕುಕಾಸು ಸಂಪಾದಿಸುವುದೇ ವಿಹಿತವಾಗಿತ್ತು. ಅದೇ ಉದ್ದೇಶದಿಂದ ಬೆಂಗಳೂರು ಸೇರಿದ.

ಬೆಂಗಳೂರಿನಲ್ಲಿ ಎಲ್ಲ ಆಫೀಸಿನ ಬಾಗಿಲುಗಳಿಗೂ ಅವನ ನಿತ್ಯಯಾತ್ರೆ ಪ್ರಾರಂಭವಾಯಿತು. ಎಲ್ಲೆಲ್ಲಿಯೂ ಒಂದೇ ಪ್ರಶ್ನೆ ಅವನಿಗೆ.

'ನೀನಾವ ಜಾತಿ?'

(ಬ್ರಾಹ್ಮಣನೆಂದರೆ ಸಾಕು, ಬಂದ ದಾರಿಗೆ ಸುಂಕವಿಲ್ಲ. ಮೊದಮೊದಲು ದೊಡ್ಡ ದೊಡ್ಡ ಕೆಲಸಗಳಿಗಾಗಿ ಪ್ರಯತ್ನಿಸಿ ನಿರಾಶೆಗಳ ಪರಂಪರೆ ಎದುರಾದಂತೆ ಕೆಲಸದ ದರ್ಜೆಯನ್ನೂ ಕೆಳಗಿಳಿಸಿದ. ಆದರೆ ಎಲ್ಲೆಲ್ಲಿಯೂ ನಕಾರವೇ. ಸಾಹೇಬರನ್ನು ಗಂಟೆಗಟ್ಟಲೆ ಕಾದು ಅವರಿಂದ ಇಲ್ಲ ಎನ್ನಿಸಿಕೊಂಡು, ತನ್ನ ಕುಲಗೋತ್ರದ ವಿಷಯವಾಗಿ ಎರಡು ಕೆಟ್ಟಮಾತು ಕೇಳಿಕೊಂಡು ರೂಮಿಗೆ ಪೆಚ್ಚು ಮುಖ ಹಾಕಿಕೊಂಡು ಹಿಂತಿರುಗುವುದೇ ಅವನ ನಿತ್ಯದ ಹಣೇಬರಹವಾಯಿತು. ಈಗಿನವ್ಯವಸ್ಥೆಯ ತರ್ಕ ಅವನಿಗೆ ಅರ್ಥವಾಗುತ್ತಿರಲಿಲ್ಲ. ಅವನ ವಂಶದಲ್ಲಿ ಯಾರೂ ನೌಕರಿಗೆ ಸೇರಿರಲಿಲ್ಲ. ಯಾರೋ ಮುದಲಾಸಿಸವರು ಬಂದು, ನುಗ್ಗಿ ಎಲ್ಲಾ ನೌಕರಿಗಳನ್ನೂ 'ಲಪಟಾಯಿಸಿದ' ಪಾಪಕ್ಕೆ, ಈ ದೇಶದಲ್ಲಿ ಹುಟ್ಟಿಬೆಳೆದ ಶತಮಾನಗಳಿಂದ ಈ ದೇಶ

ಕ್ಕಾಗಿ ದುಡಿದವರ ವಂಶದವನಾದ ಅವನೇಕೆ ದಂಡ ತೆರಬೇಕೋ ಶಿಕ್ಷೆ ಅನುಭವಿಸ ಬೇಕೋ ಗೊತ್ತಾಗಲಿಲ್ಲ. ತನ್ನ ಜೊತೆಯಲ್ಲಿ ತನಗಿಂತ ಬುದ್ಧಿಶಕ್ತಿಯಲ್ಲಿ ಕೀಳೆನಿಸಿ ಕೊಂಡವರು, ಕ್ಲಾಸಿನಲ್ಲಿ ಹತ್ತೆಂಟು ವರ್ಷ ಸರ್ವೀಸುಹಾಕಿದವರು ಒಳ್ಳೆಯ ಕೆಲಸ ದಲ್ಲಿ ಮೆರೆಯುತ್ತಿದ್ದರೂ. ಉಚ್ಚತರಗತಿಯಲ್ಲಿ ಉತ್ತೀರ್ಣನಾದ ಅವನಿಗೆ ಗುಮಾಸ್ತೆ ಗಿರಿಯೂ ಸಿಗದೆ ಅವನ ಮನಸ್ಸು ರೋಸಿಹೋಯಿತು, ಈ ಅನ್ಯಾಯವನ್ನು ಕಂಡು.

ಒಂದುದಿನ ಯಾರೋ ಬಂದು ಕಾರ್ಖಾನೆಯಲ್ಲಿ ಕೆಲಸಸಿಗಬಹುದೆಂದು ಹೇಳಿದರು. ಅಲ್ಲಿನ ಕೆಲಸದ ಕಷ್ಟವನ್ನು ನೋಡಿ ಅಲ್ಲಿಗೆ ಹೋಗಲು ಜನ ಹಿಂಜರಿ ಯುತ್ತಿದ್ದರು. ಅವನಿಗೆ ಅಲ್ಲಿ ಕೆಲಸ ಸಿಕ್ಕಿತು.

ಈಗ ಅವನು ಕಾರ್ಖಾನೆಯ ಕೆಲಸದಲ್ಲಿ ಲೀನನಾಗಿಬಿಟ್ಟಿದ್ದಾನೆ. ಆ ಯಂತ್ರಗಳ ಗಾಳಿಯಲ್ಲಿ ತನ್ನ ಆಸೆ ಆಕಾಂಕ್ಷೆಗಳನ್ನು ತೂರಿಬಿಟ್ಟಿದ್ದಾನೆ. ಸದ್ಯಕ್ಕೆ ಅವನಿಗೆ ಬೇರಾವ ಯೋಚನೆಯೂ ಇಲ್ಲ. ಇದೇ ತನ್ನ ಜೀವನದ ಗುರಿಯೋ ಏನೋ ಎಂದು ಅವನು ಯೋಚಿಸುವುದಿಲ್ಲ. ಇದು ಪ್ರಕೃತದಲ್ಲಿ ನಿಲ್ಲಲು ಸ್ಥಳ. ಮುಂದಿನದು ಮುಂದೆ.

## [೧೦]

'ಅಲ್ಲಿಯಂತೆ ಬೀದೀನ ಸೀರೆ ನಿರಿಯಿಂದ ಗುಡಿಸಿಕೊಂಡು ನಡೆಯು ವಂತೆ ಇಲ್ಲಿ ನಡೆದರೆ ಸಾಗುವುದಿಲ್ಲ. ಸ್ವಲ್ಪ ವೈಜಗ್ಗಿ ಕೆಲಸಮಾಡಬೇಕು. ತಿಳಿಯಿ ತೇನು ?'

ಇದು ಮಕ್ಕಿಮನೆಗೆ ಲಲಿತೆ ಕಾಲಿಟ್ಟದಿನ ಅತ್ತೆಯ ಸ್ವಾಗತ. ಆಗಲೇ ಅವಳು ಬೆಚ್ಚಿದಳು. ಅತ್ತೆಯ ದಿವ್ಯಮೂರ್ತಿಯಂತೂ ಅವಳೆದೆಯನ್ನು ನಡುಗಿಸಿತು. ಐವತ್ತು ವರ್ಷದ ಕಾಡಿಗೆಯಂತಹ ಶರೀರ. ಸಿಡುಬಿನ ಕಲೆ ತುಂಬಿದ ಮುಖ. ಗರುಡನ ಮೂಗಿನಂತಹ ಮೂಗು. ವಿಧವೆಯಾದರೂ ಹೊಗೇಸೊಪ್ಪಿನ ವೀಳ್ಯ ವುಂಟು. ತಾಂಬೂಲದಿಂದ ಕೆಂಪಾದ ಹಲ್ಲುಗಳು, ದೇಹವನ್ನು ಆವರಿಸಿರುವ ರಕ್ತ ವಸ್ತ್ರ. ಗೊಗ್ಗರಧ್ವನಿ. ನೆಲನಡುಗುವಂತಹ ನಡಿಗೆ. ಲಲಿತೆಗೆ 'ದೇವಶಿಖಾಮಣಿ'

ರಾಮಾಯಣದಲ್ಲಿನ ರಾಕ್ಷಸಿಯರ ಚಿತ್ರದ ನೆನಪಾಯಿತು. ಬಾಲೆ ತರಗೆಲೆಯಂತೆ ನಡುಗಿದಳು.

ಲಲಿತೆಯ ಬಳುವಳಿಯ ಸಾಮಾನಿನ ಜೊತೆಗೆ ವೀಣೆಯೂ ಇದ್ದಿತು. ಅತ್ತೆ ಇದೇನು ಎಂದು ಕೇಳಿದರು. 'ವೀಣೆ' ಎಂದಳು ಸುಮ್ಮನೆ.

'ಅದೇತಕ್ಕೆ ಬರುತ್ತದೆ?'

'ಅದರಲ್ಲಿ ಸಂಗೀತ ನುಡಿಸಲು ಬರುತ್ತದೆ.'

'ಇಲ್ಲಿಗೆ ಕರೆತಂದಿದ್ದು ನಿನ್ನ ಗೆಜ್ಜೆಕಟ್ಟಿ ಕುಣಿಸುವುದಕ್ಕಲ್ಲ ಲಕ್ಷಣವಾಗಿ ಸಂಸಾರಮಾಡಿಕೊಂಡು ಬದುಕುವುದಕ್ಕೆ. ಪರವಾಯಿಲ್ಲ. ಬಹಳ ಇದೆ ಸರಕು ನಿನ್ನಲ್ಲಿ! ಖಂಡಿತಹೇಳಿಬಿಡುತ್ತೇನೆ. ಅವನ್ನೆಲ್ಲಾ ಇಲ್ಲಿಬಿಚ್ಚಿದರೆ ಕೈಕಾಲು ಮುರಿದು ಕೂರಿಸಿಬಿಟ್ಟೇನು'

ಯಾವೊಂದು ವಿದ್ಯೆಯಿಂದ ಅವಳಿಗೆ ಸಮಾಧಾನವಾಗುತ್ತಿತ್ತೋ ಅದನ್ನಲ್ಲಿ ಕಟ್ಟಿಡಬೇಕು.

ಲಲಿತೆ ಈಗ ಲಲಿತೆಯಲ್ಲ. ಅವಳ ಹೆಸರೂ ಬದಲಾಯಿಸಿ ಹೋಗಿದೆ. ಅಂತಹ ಸುಂದರವಾದಹೆಸರು ಅತ್ತೆಗೆ ಹಿಡಿಸದು. ಅವಳ ಗಂಡನಮನೆಯ ಹೆಸರು 'ಸುಬ್ಬಮ್ಮ' ಅತ್ತೆಗೆ ಅವಳು 'ಸುಬ್ಬಿ'. ಗಂಡನಿಗೆ 'ಏ'

ಅವಳ ಹೆಸರೇ ಬದಲಾಯಿಸಿದ ಮೇಲೆ ಇನ್ನೆಲ್ಲವೂ ಬದಲಾಯಿಸಿದಂತೆಯೇ. ಅವಳೀಗ ಹೆಜ್ಜೆಮಟ್ಟ.ನಿರಿಗೆ ಬರುವಂತೆ ಸೀರೆ ಉಡುವಂತಿಲ್ಲ. ಮೊಣಕಾಲು ಸಹ ಕಾಣುತ್ತದೆ. ಬೈತಲೆ ಸ್ವಲ್ಪ ಓರೆಯಾದರೆ ಅವಳ ಮುಖವನ್ನೇ ಸೊಟ್ಟೆಮಾಡಿಯಾರು ಅತ್ತೆ. ಅರ್ಧಹಣೆ ಮುಚ್ಚುವಂತೆ ಕುಂಕುಮವನ್ನು ಅಡ್ಡಡ್ಡಲಾಗಿ ಇಡಬೇಕು. ಕೆನ್ನೆ ಕೈ ಕಾಲು ತುಂಬ ಅರಿಸಿನ ಬಳಿದುಕೊಳ್ಳಬೇಕು. ಜಡೆಸ್ವಲ್ಪವೂ ಸಡಿಲವಾಗಬಾರದು. ತನ್ನನ್ನು ನೋಡಿಕೊಂಡರೆ ತನಗೇ ಭಯವಾಗುತ್ತದೆ. ಅಷ್ಟು ವಿಲಕ್ಷಣವಾಗಿದೆ ಅವಳ ಮೂರ್ತಿ. ಶೃಂಗೇರಿಯಲ್ಲಿ ಯಾವುದನ್ನು ಒಂದು ಸೌಂದರ್ಯಸಾಧನ ಎಂದವಳುತಿಳಿದಿದ್ದಳೋ ಅದನ್ನೆಲ್ಲಾ ಇಲ್ಲಿ ಅತ್ತೆ

ಸೂಳೆಯರಶೃಂಗಾರವೆನ್ನುತ್ತಾರೆ. ಅವಳ ಉಡಿಗೆ, ತೊಡಿಗೆ, ನಡಿಗೆ, ಮಾತು ಎಲ್ಲದರಲ್ಲಿಯೂ ಅತ್ತೆ ತನ್ನ ದರ್ಪವನ್ನೇ ಮುಂದುಮಾಡುತ್ತಾರೆ. ಇವಕ್ಕೆಲ್ಲಾ ಅವಳು ಸುಲಭವಾಗಿ ಹೊಂದಿಕೊಂಡಳೆಂತಲ್ಲ. ಕಲಿತ ಒಂದು ಅಭ್ಯಾಸ ಹೇಗೆತಾನೇ ಇದ್ದಕ್ಕಿದ್ದಂತೆ ಬದಲಾಗಿಬಿಡುತ್ತದೆ? ಪ್ರತಿಯೊಂದಕ್ಕೂ ಅವಳು ಕೇಳಲಾರದ ಮಾತುಗಳನ್ನು ಕೇಳಿದ್ದಾಳೆ. ತನ್ನ ಕುಲಕೋಟಿಯನ್ನೆಲ್ಲಾ ಎಳೆಸಿ ಮರ್ಯಾದೆ ಮಾಡಿಸಿದ್ದಾಳೆ.- ಅತ್ತೆಯಕ್ಕೇನುಪ್ಲ. ಅವಳು ಎಂತಹ ಯಮಯಾತನೆಯನ್ನು ಅನುಭವಿಸಿದ್ದಾಳೋ ಆ ಅಂತರ್ಯಾಮಿಯೊಬ್ಬನಿಗೇಗೊತ್ತು. ಆದರೂ ಅದೇನು ಸಹನೆಯೊ ಆ ಹುಡುಗಿಯದು, ಸಾವಿರಸಾರೆ ಸತ್ತು ಬದುಕಿದ್ದಾಳೆ.

ಅವಳ ಮಕ್ಕಿಮನೆಯ ಜೀವನ ಕಠಿಣವೂ ನೀರಸವೂ ಆಗಿದ್ದಿತು. ಮುಂಜಾನೆ ಎದ್ದು ಮನೆಯನ್ನೆಲ್ಲಾ ಗುಡಿಸುವುದು, ಒಲೆಯಮೇಲೆ ಕಾಫಿಗೆ ನೀರಿಟ್ಟು ಕೊಟ್ಟಿಗೆಗೆ ಹೋಗಿ ಹಸುಗಳಿಗೆ ಮುರುವಿಟ್ಟು, ಹಾಲು ಕರೆದುಕೊಂಡು ಬರುವುದು. ಆಮೇಲೆ ಗಂಡನಿಗೆ, ಅತ್ತೆಗೆ ಕಾಫಿ-ತಿಂಡಿ. ಅವಳಿಗೆ ಮಾತ್ರ ಒಂದು ಹಿಡಿ ಅಕ್ಕಿಹಾಕಿ ಮಾಡಿದ ಗಂಜಿಯೂಟ. ಅವಳಿಗೆ ಅದು ಅಭ್ಯಾಸವಿಲ್ಲ. ತಿನ್ನಬೇಕಾದರೆ ವಾಂತಿಯೇ ಬರುತ್ತದೆ. ತಿನ್ನದಿದ್ದರೆ ಹಲ್ಲು ಮುರಿದು ಬಿಟ್ಟಾರು ಅತ್ತೆ. ಆಮೇಲೆ ದನಗಳನ್ನೆಲ್ಲಾ ಮೇವಿಗೆ ಬಿಟ್ಟು ಕಾಡಿಗೆಹೋಗಿ ಜಲ್ಲೆಯಲ್ಲಿ ತರಗೆಲೆ ತಂದು ಕೊಟ್ಟಿಗೆಗೆ ಎರಚುವುದು, ತೋಟಕ್ಕೋ ಗದ್ದೆಯಂಚಿಗೋ ಹೋಗಿ ಮುರುವಿಗೆ ಹಸಿಹುಲ್ಲು ಚಿಮ್ಮಿ ಮೊದಲಾದುವನ್ನು ತರುವುದು. ಕಟ್ಟಿಗೆ ಇಲ್ಲದಿದ್ದರೆ ಗುಡ್ಡದಿಂದ ಕಟ್ಟಿಗೆಯನ್ನೋ ಪುಳ್ಳೆಯನ್ನೋ ಆರಿಸಿಕೊಂಡು ಬರುವುದು, ಪಾತ್ರೆ ಉಜ್ಜಿ, ಮನೆಯನ್ನೆಲ್ಲಾ ಬಳಿದು, ಸೀರೆ ಬಟ್ಟೆಗಳನ್ನೊಗೆದು, ಮೈ ತೊಳೆಯುವುದು ಅತ್ತೆಗೆ. ಅಡಿಗೆಗೆ ಸಹಾಯಮಾಡುವುದು, ಗಂಡನ ಎಂಜಲೆಲೆಯಲ್ಲಿ ಉಂಡು, ಎಲೆ ಎತ್ತಿಹಾಕಿ ಸಾರಿಸಿ, ಪಾತ್ರೆಗಳನ್ನು ಬೆಳಗಿ, ಮುರುಗನ ಹರಳು ಸುಲಿಯುವುದೋ, ಹಪ್ಪಳವನ್ನು ಲಟ್ಟಿಸುವುದೋ, ಸಂಜೆಯವರೆಗೆ. ಸಂಜೆ ಊಟ, ಸಾರಿಸುವುದು, ತೊಳೆಯುವುದು ಮಲಗುವುದು ಇದವಳದಿನಚರಿ. ಇದು ತಪ್ಪಿದ್ದಲ್ಲ.

ಇದರ ಜೊತೆಗೆ ಇನ್ನೂ ಕೆಲಸಗಳು ಸೇರುವುವು. ಅಡಿಕೆ ಕೊಯಿಲಿನಲ್ಲಿ ಅಡಿಕೆಸುಲಿಯುವುದು, ಅಡಿಕೆ ಆರಿಸುವುದು, ಅಡಿಕೆ ಬಿಸಿಲಿಗೆ ಹರವುವುದು, ಮೊಗೆಯುವುದು. ಎಲ್ಲಾ ಕೆಲಸಗಳೂ ಅವಳ ಪಾಲಿಗೇ ಅಲ್ಲಿಗೆ. ಬಂದಮೇಲೆ ಅವನ್ನೆಲ್ಲಾ

ಕಲಿತುಕೊಂಡಳು. ತಾತನ ಮನೆಯಲ್ಲಿ ಯಾವ ಕೆಲಸವನ್ನೂ ಮಾಡಿದವಳಲ್ಲ. ಆದುದರಿಂದ ಇವನ್ನೆಲ್ಲಾ ಮಾಡಬೇಕಾದರೆ ಅವಳಿಗೆ ಮೇಲುಸಿರುಬರುವುದು. ಪಟ್ಟಣದಲ್ಲಿ ಇದ್ದಹುಡುಗಿ. ಒಬ್ಬೊಂಟಿಗಳಾಗಿ ಆ ಕಾಡುಗುಡ್ಡಗಳಲ್ಲಿ ಹೋಗ ಬೇಕಾದರೆ ಪ್ರಾಣಭೀತಿಯುಂಟಾಗುವುದು. ಆದರೆ ಅವಳನ್ನು ಸಹಾನುಭೂತಿ ಯಿಂದ ನೋಡುವವರಾದರೂಯಾರು, ಈ ಅತ್ತೆಯ ಮನೆಯಲ್ಲಿ ?

ಶಾನುಭೋಗ ಕೃಷ್ಣಪ್ಪನವರು ಮನೆಯಜಗುಲಿಯ ಮೇಲೆ ಕುಳಿತು ಖಾತೆಖಿರ್ದಿಗಳ ಲೆಕ್ಕವನ್ನು ನೋಡುತ್ತಿದ್ದರು. ಅವರಿಗೆ ಸುಮಾರು ಮೂವತ್ತೈದು ವಯಸ್ಸಿರಬಹುದು. ನಾಲ್ಕುವರುಷದ ಗಂಡುಮಗುವೊಂದು ಅಂಗಳದಲ್ಲಿ ಧೂಳಿ ನಲ್ಲಿ ಹೊರಳಾಡುತ್ತಿತ್ತು. ಅವರುಟ್ಟಿದ್ದು ಒಂದು ಬಾರಾಪುರದ ಪಂಚೆ.— ಕಾಲುಗಂಟಿನ ಮೇಲೆ. ಹೊದ್ದಿದ್ದು ಒಂದು ಮಗ್ಗುಲುಹಾಸಿಗೆ. ಎರಡೂ ಸಾಬೂನುಕಾಣದೆ,—ನೀರಿನಲ್ಲಿ ನೆನೆಯದು, ಬೆಂಕಿಯಲ್ಲಿ ಬೇಯದು ಎಂಬಂ ತಾಗಿದ್ದುವು.

ತಾಯಿ ಒಳಗಿನಿಂದ ಬಂದು ಜಗುಲಿಯ ಕಂಬಕ್ಕೊರಗಿ ನಿಂತರು. 'ಕಿಟ್ಟೂ, ಸ್ವಲ್ಪ ಸೂರನನ್ನೂ, ಶೀನಪ್ಪನನ್ನೂ ಬರಹೇಳಿ ಬಾ' ಎಂದರು. ಶಾನು ಭೋಗರು ಪುಸ್ತಕದ ಮೇಲಿನ ದೃಷ್ಟಿ ತಾಯಿಯ ಮುಖದ ಕಡೆ ಹರಿಸಿ, 'ಏತಕ್ಕೆ? ಎಂದು ದೃಷ್ಟಿಯಲ್ಲೇ ಪ್ರಶ್ನಿಸಿದರು. ತಾಯಿ 'ಶೃಂಗೇರಿಗೆ ಒಸಗೆ ಕಳಿಸಬೇಕಾಗಿದೆ ಎಂದರು ಆ ವರ್ತಮಾನ ಶಾನುಭೋಗರ ಮೇಲೆ ಯಾವ ಪರಿಣಾಮವನ್ನೂ ಉಂಟು ಮಾಡಲಿಲ್ಲ. 'ಹೂಂ' ಎಂದು ಹೇಳಿ ಪುಸ್ತಕವನ್ನು ದಪ್ತರಕ್ಕೆ ಹಾಕಿ ಕಟ್ಟಿ ಅವರು ಎದ್ದರು. ತಾಯಿ 'ನಾಲ್ಕನೆಯದಿವಸವೇ ಆಗಿಬಿಡಲಿ. ಹೋದವರು ಕರೆಯುವ ಶಾಸ್ತ್ರವನ್ನೂ ಮಾಡಿ ಬಂದುಬಿಡಲಿ' ಎಂದರು. ಅದಕ್ಕೂ ಶಾನು ಭೋಗರು 'ಹೂಂ' ಎಂದರು. ತಾಯಿ ಎಲ್ಲಾ ವ್ಯವಸ್ಥೆಯನ್ನೂ ಮಾಡುವರೆಂದು ಅವರಿಗೆ ಗೊತ್ತಿತ್ತು.

ಲಲಿತೆಗೆ ಆರತಿಯಾಯಿತು. ಮೈತೊಳೆಯುವ ಪ್ರಸ್ತವೂ ಆಯಿತು. ಮರುದಿವಸವೇ ಪ್ರಸ್ತವೆಂದುಕೇಳಿ ಅವಳು ಅದೇಕೋ ನಡುಗಿದಳು.

ಅಂದು ನೆರೆದ ಹೆಂಗಸರು ಕುಚೋದ್ಯ ಮಾಡಿದರು. ಸಂಜೆ ಮಂಚದ ಮೇಲೆ ಗಂಡ ಹೆಂಡಿರನ್ನು ಕುಳ್ಳಿರಿಸಿ ಮುತ್ತೈದೆಯರು ಆರತಿಮಾಡಿ ಬಾಗಿಲು ಮುಚ್ಚಿ

ಚಿಲಕ ಹಾಕಿದರು. ಅವಳು ಗಂಡನನ್ನು ದಿಟ್ಟಿಸಿ ನೋಡಿದಳು. ಯಾವನಿಗೆ ತನ್ನ ಶರೀರವನ್ನು ಅರ್ಪಿಸಬೇಕಾಗಿದೆಯೋ ಅವನನ್ನೊಮ್ಮೆ ನೋಡಿದಳು. ಹಿಂದೆ ನೋಡಿರಲಿಲ್ಲವೆಂತಲ್ಲ. ಮದುವೆಯಲ್ಲಿ ಅರಿಸಿನೆಣ್ಣೆ ಆಗುವಾಗ ನೋಡಿದ್ದಳು. ಅಲ್ಲಿ ಅವಳಿಗೆ ಗಂಡನನ್ನು ನೋಡವುದರಲ್ಲಿ ಆಸಕ್ತಿಯಿರಲಿಲ್ಲ. ಆಗ ಅವನನ್ನು ಕಂಡರೆ ಸ್ವಲ್ಪ ದ್ವೇಷ ; ಜಿಗುಪ್ಸೆಯಿಂದಲೇ ನೋಡಿದ್ದಳು. ತನ್ನ ಹೊಂಗನಸು ಮಾಯವಾಗುವುದಕ್ಕೆ ಆವನೇನೂ ಕಾರಣನಾಗಿರಲಿಲ್ಲ, ಆದರೆ ಅದೊಂದು ಆದರ್ಶ ಮತ್ತು ವಾಸ್ತವಿಕತೆಯ ಮಧ್ಯದ ತಿಕ್ಕಾಟದ ಸಮಯವಾಗಿತ್ತು. ಆಗ ತನ್ನನ್ನು ಕಂಡರೆ ತನಗೇ ದ್ವೇಷವಿತ್ತು. ಪ್ರಪಂಚದಲ್ಲಿ ಎಲ್ಲರನ್ನು ಕಂಡರೂ ದ್ವೇಷವಿತ್ತು.

ಆದರೆ ಇಂದಿನ ದೃಷ್ಟಿಬೇರೆ. 'ಇವನು ನನ್ನ ಗಂಡ. ಇವನೇ ಇನ್ನು ಮುಂದೆ ನನ್ನ ಸರ್ವಸ್ವ.' ಎನ್ನುವ ದೃಷ್ಟಿ ಇಂದು. ಆದರೆ ಗಂಡನನ್ನು ನೋಡಿದ್ದು ಒಂದೇ ನಿಮಿಷ 'ನೋಡಿದಷ್ಟು ಸಾಲದು' ಎನ್ನುವ ದೃಷ್ಟಿ ಅದಲ್ಲ. 'ಯಾಕೆ ನೋಡಿದೆನೋ' ಎನ್ನುವ ನೋಟ ಅದು.

ಕೃಷ್ಣಪ್ಪನವರು ಉಟ್ಟಿರುವುದು ಎಂದಿನಂತೆ ಕೊಳೆಯ ಪಂಚೆ. ಹೊದೆದಿರುವುದೂ ಅಂತಹದೇ ಒಂದು. ಈಗಿನ್ನೂ ತಂಬಾಕುವೀಳ್ಯ ಉಗಿದು ಬಂದಿದ್ದಾರೆ. ಆ ತಂಬಾಕಿನ ವಾಸನೆ ಬರುತ್ತಿದೆ. ಅವರಮುಖದಲ್ಲಿ ಯಾವ ಭಾವದ ಗುರುತೂ ಇಲ್ಲ. ಕತ್ತಲೆಯದೊಂದು ಕೋಣೆ. ಬೆಳಕುಗಾಳಿಗಳ ಸಂಪರ್ಕವಿಲ್ಲ. ಪುರಾತನಕಾಲದ ಮಂಚ. ಮಂಚದ ಮೇಲೆ ಜಿಡ್ಡುಹಿಡಿದ ಒಂದು ಹಾಸಿಗೆ. ಒಂದು ಹೊಗೆಯುಗುಳುತ್ತಿರುವ ಚಿಮಣಿ ದೀಪ. ಲಲಿತೆಗೆ ತಡೆಯಲಾಗಲಿಲ್ಲ. ಬಿಕ್ಕಿಬಿಕ್ಕಿ ಅತ್ತು ಬಿಟ್ಟಳು. ಕೃಷ್ಣಪ್ಪನವರಿಗೆ ವಿಪರೀತ ಸಿಟ್ಟುಬಂದಿತು. ಅವಳ್ಯಾತಕ್ಕೆ ಅಳುತ್ತಾಳೊ ಅವರಿಗೆ ಗೊತ್ತಿಲ್ಲ. ತಿಳಿದುಕೊಳ್ಳುವ ಕುತೂಹಲವೂ ಇಲ್ಲ. ಬೇಸರಗೊಂಡು ಅವರು ಮಲಗಿ ಬಿಟ್ಟರು.

ಪ್ರಸ್ತದ ಮೂರನೆಯದಿವಸ ತಾತನೊಡನೆ ಅವಳು ಶೃಂಗೇರಿಗೆ ಹೋಗಿ ನಾಲ್ಕುದಿನ ಇದ್ದು ಮಕ್ಕಿ ಮನೆಗೆ ಹಿಂತಿರುಗಿದಳು. ಇನ್ನು ಅವಳು ತವರಿಗೆ ಹೋಗುವುದೂ ಅಪರೂಪವೇ. ಅವಳ ಜೀವನ ಪೂರ್ತಿ ಗಂಡನಮನೆಯಲ್ಲಿಯೇ ಕಳೆಯಬೇಕು. ಈಗ ಅವಳ ಜೀವನ ಒಂದು ನಿಲುಗಡೆಗೆ ಬಂದಿತು. ಅವಳ

ಹೊಂಗನಸುಗಳಿಗೆ ಹೃದಯದಲ್ಲೇ ಸಮಾಧಿಯಾಯಿತು. ಆಸೆ ಹುಟ್ಟಿದಲ್ಲಿಯೇ ಸತ್ತಿತು. ಅವಳ ಜೀವನ ಪಥ ಸುಂದರವಾದ ವನ, ಗಿರಿ, ತೊರೆಗಳನ್ನು ದಾಟಿ ಮರುಭೂಮಿಯೊಳಗೆ ನುಸುಳಿಹೋಯಿತು. ಈಗ ಕಣ್ಣೆದುರಿಗೆ ಎಲ್ಲೆಲ್ಲಿಯೂ ಬೆಂಗಾಡು, ಬರಿಶೂನ್ಯ. ಆದರೂ ದೇವರು ಮನುಷ್ಯನಿಗೆ ಎಷ್ಟು ಸಹನಶಕ್ತಿ ಕೊಟ್ಟಿದ್ದಾನೋ ಏನೋ ; ಅವಳಿನ್ನೂ ಬದುಕಿಯೇ ಇದ್ದಾಳೆ. ಇಲ್ಲಿ ಸಾಯಬೇಕು ಎನ್ನುವ ಯೋಚನೆಯೇ ಅವಳ ತಲೆಯಲ್ಲಿ ಹೋಗದೋ ಏನೋ ; ಹಾಗೆ ಹೊಕ್ಕಿದ್ದರೆ ಅವಳನ್ನು ಆ ನಿರ್ಧಾರದಿಂದ ಹಿಂದೆ ಜಗ್ಗುವ ಆಸೆಯು ಹಗ್ಗವಾದರೂ ಯಾವುದು, ಅವಳ ನಿರರ್ಥಕ ಜೀವನದಲ್ಲಿ? ಬಹುಶಃ ಇದೇಯೇನೋ ಜೀವನ. ಬಯಸಿದ್ದು ದೊರಕದೇನೋ. ಅದು ನಿರಾಶೆಗಳ ಬುತ್ತಿಯೇನೋ. ಸಂತೃಪ್ತಿಯು ದೊರೆಯಲೇ ಬಾರದೆಂಬುದು ಜಗನ್ನಿಯಾಮಕವೋ ಏನೋ. ಯಾವುದೂ ಅವಳಿಗೆ ತಿಳಿಯದು. ಅವಳ ಮನಸ್ಸು ಯಾವ ಜಿಜ್ಞಾಸೆಯಲ್ಲೂ ತೊಡಗುವಷ್ಟು ಪರಿಪಕ್ವಹೊಂದಿಲ್ಲ. ಮನಸ್ಸಿನಲ್ಲೇನೋ ನೋವಿದೆ. ಆದರೆ ಎಂತು, ಹೇಗೆ, ಏಕೆ, ಯಾವುದರ ಚರ್ಚೆಗೂ ಅವಳು ತೊಡಗಳು.

[೧೧]

ಚಿಕ್ಕಪೇಟೆಯ ಸಂದಿನಲ್ಲೊಂದು ಹಳೆಯಮನೆ. ಅದರ ಮಹಡಿಯ ಮೇಲಿನ ನಾಲ್ಕು ರೂಮುಗಳನ್ನು ಬಾಡಿಗೆಗೆ ಕೊಟ್ಟಿದ್ದಾರೆ. ಕೆಳಗೆ ಎರಡು ಸಂಸಾರಗಳು. ಮೇಲಿನ ರೂಮುಗಳಲ್ಲಿ ಎಲ್ಲಾ ಬಟ್ಟೆಬಸವಗಳು. ವಿದ್ಯಾರ್ಥಿಗಳ ಭಾಷೆಯಲ್ಲಿ ಆ ರೂಮು ಗಡಮರಲಾಯ. ಆ ಗಡಮರ ಮಧ್ಯೆ ರಂಗಣ್ಣ ಹೋಗಿ ಸೇರಿಕೊಂಡ.

ರಂಗಣ್ಣನೊಬ್ಬನನ್ನುಳಿದು ಉಳಿದವರೆಲ್ಲಾ ವಿದ್ಯಾರ್ಥಿಗಳು. ಹಗಲಲ್ಲಿ ಕನಸುಕಾಣುವವರು ಮುಗಿಲಲ್ಲಿ ಅರಮನೆ ಕಟ್ಟುವವರು. ಲಂಗಿಲ್ಲ ಲಗಾಮಿಲ್ಲ. ರಂಗಣ್ಣನೊಬ್ಬನೇ ನಿರಾಶೆಯ ಕಹಿಯೂಟ ಉಂಡವನು. ಅವನಿಗೆ ತಾನವರಂತೆ ಇದ್ದ ದಿನದ ನೆನಪಾಗುವುದು. ಪಾಪ ಮುಂದೆ ಇವರಲ್ಲೆಷ್ಟು ಜನರಿಗೆ ತನ್ನ ಪಾಡಾಗುವುದೋ ಎಂದು ಕನಿಕರ ಉಂಟಾಗುವುದು. ಆದರೆ ಅವರು ತನ್ನಂತೇಕಾಗಬೇಕು ? ಪ್ರಪಂಚದಲ್ಲಿ ಎಲ್ಲರೂ ದುರದೃಷ್ಟಶಾಲಿಗಳೇ ?

ಅವನ ಕೆಲಸ ಪ್ರಾರಂಭದ ಉತ್ಸಾಹದಲ್ಲಿ ಕಷ್ಟತರವಾಗಿ ಕಾಣಿಸುತ್ತಿರಲಿಲ್ಲ, ಬರಬರುತ್ತ ಅದು ಬೇಸರವಾಗಿ ಜೀವ ಹಿಂಡಲು ತೋಡಗಿತ್ತು. ದಿನಕ್ಕೆಂಟು ಗಂಟೆ ಹಗಲಾದರೆ ಹಗಲು. ರಾತ್ರಿಯಾದರೆ ರಾತ್ರಿ. ದಿನವೂ ರೈಲಿನಲ್ಲಿ ಹೋಗಬೇಕು. ಬರಬೇಕು ರೈಲಿಗೆ ಹೊತ್ತಿಲ್ಲ. ಗೊತ್ತಿಲ್ಲ. ಎಲ್ಲೋ ಹೋಟೆಲಿನಲ್ಲಿ ಊಟ. ಈ ಬೇವಾರ್ಸಿಯ ಜೀವನ ಅವನ ಮೇಲೆ ತೀವ್ರವಾದ ಪರಿಣಾಮ ಉಂಟುಮಾಡ ತೊಡಗಿತ್ತು. ತನ್ನ ಸಂಬಳದಲ್ಲಿ ಆದಷ್ಟು ಮಿಗಿಸಿ ಮನೆಗೆ ಕಳಿಸಬೇಕೆಂದು ಖರ್ಚಿನಲ್ಲಿ ಬಹಳ ಹಿಡಿತ ಮಾಡಲಾರಂಭಿಸಿದ. ಮೊದಮೊದಲು ಆವಶ್ಯಕತೆಗೋಸ್ಕರ ಮನೋರಂಜನೆಯನ್ನು ಕಡಿಮೆ ಮಾಡುತ್ತ ಬಂದಿದ್ದು, ಕ್ರಮಶಃ ಅವನ ಸ್ವಭಾವವೇ ಆರೀತಿ ಮಾರ್ಪಡುತ್ತ ಬಂದಿತು. ತನ್ನವರ ಕಷ್ಟಜೀವನ ತನ್ನೂರಿನವರ ದುಃಸ್ಥಿತಿ ಇವುಗಳ ಮಧ್ಯೆ ತಾನು ಸಂತೋಷಪಡುವುದು ಪಾಪಕರವೆಂದು ಮೊದಲು ಆರಂಭಿಸಿದ ವಿಚಾರ ಸರಣಿ ಬರಬರುತ್ತ ಕಷ್ಟದಲ್ಲಿಯೇ ಸುಖ ಪಡೆಯುವಂತೆ ಅವನ ಮನಸ್ಸನ್ನು ವಿಚಿತ್ರವಾಗಿ ಬದಲಾಯಿಸಿತು. ಅವನಿಗೀಗ ಯಾವ ಸುಖವೂ ಸಹನೆಯಿಲ್ಲ. ಒಂದು ಸೊಗಸಾದ ಊಟ ಉಂಡರೆ ಸುಂದರವಾದ ದೃಶ್ಯ ನೋಡಿದರೆ ವೇದನೆಯುಂಟಾಗುತ್ತದೆ ದಿನವಿಡಿಮಡಿದು ಆಯಾಸಗೊಂಡು ರೂಮಿಗೆ ಬಂದು ಹೇಳುವವರು ಕೇಳುವವರು ಇಲ್ಲದೆ ಮಲಗಿದರೆ ಏನೋ ತ್ಯಾಗಿಯಂತೆ ಸಮಾಧಾನ ಹೊಂದುತ್ತಾನೆ.

[೧೨]

ಮಕ್ಕಿ ಮನೆಯಲ್ಲಿ ಲಲಿತ ತನ್ನ ಆಯುಷ್ಯವನ್ನು ಕಳೆಯುತ್ತಿದ್ದಾಳೆ. ಗಂಡ ಅವಳ ವಿಷಯದಲ್ಲಿ ತೀರಾ ಉದಾಸೀನರಾಗಿದ್ದಾರೆ ಅವರು ತಮ್ಮ ಇಳಿವಯಸ್ಸಿನಲ್ಲಿ ಇನ್ನೂ ಎಳೆಹರೆಯದ ಲಲಿತೆಯ ಆಸೆ ಆಕಾಂಕ್ಷೆಗಳೊಂದನ್ನೂ ಅರ್ಥಮಾಡಿಕೊಳ್ಳಲಾರರು. ಅವರಾ ರೀತಿ ಅರ್ಥ ಮಾಡಿಕೊಂಡಿದ್ದರೆ ಲಲಿತೆಯಬಲವು ಆಕಡೆ ತಿರುಗುತ್ತಿತ್ತೇನೋ ! ಏಕೆಂದರೆ ಆದರ್ಶ ಪ್ರೇಮ ಎನ್ನುವುದು ಸಹಜವಾದುದಲ್ಲ. ಆದರೆ ಶ್ವಾಸುಭೋಗರು ಅವಳ ಯಾವ ಅಭಿಲಾಷೆಯನ್ನೂ ಪೂರ್ತಿಗೊಳಿಸಲಾರರು. ಆ ಅಪರಿಚಿತ ಪ್ರದೇಶದಲ್ಲಿ ಲಲಿತೆಗೆ ಗೆಳತಿಯರಾರೂ ಇಲ್ಲ. ಇದ್ದರೂ ಅವರೊಂದಿಗೆ ಬೆರೆಯಲು ಅವಳ ದಿನಚರಿಯಲ್ಲಿ ಅವಕಾಶವಿಲ್ಲ. ಅವಳು ಕ್ಷಣಕಾಲವೂ ಸೋಮಾರಿ

ಯಾಗಿರುವುದನ್ನು ಅತ್ತೆ ಸಹಿಸರು. ಓಡುವಲ್ಲಿ ಮುಳ್ಳು, ಹಾರುವಲ್ಲಿ ಗಾಜು ಅವರಾಗಿದ್ದಾರೆ. ದಿನವೂ ಹೊತ್ತಿಗೆ ಮುಂಚಿತವಾಗಿ ಹಾಸಿಗೆ ಬಿಟ್ಟಿದ್ದರೆ ನಡುರಾತ್ರಿಯವರೆಗೂ ಗಾಣದೆತ್ತಿನಂತೆ ದುಡಿಯುತ್ತಾಳೆ. ಮೂಗು ತುರಿಸಿಕೊಳ್ಳುವುದಕ್ಕೂ ಪುರಸೊತ್ತಿಲ್ಲ ಅವಳಿಗೆ. ಅವಳೇಕೆ ಹಾಗೆ ದುಡಿಯುತ್ತಾಳೋ ದೇವರೇ ಬಲ್ಲ. ಆದರೆ ಒಂದು ಮಾತ್ರ ನಿಶ್ಚಯ. ಅವಳಾರೀತಿ ದುಡಿಯದಿದ್ದರೆ ಜೀವ ಹಿಡಿದು ನಿಲ್ಲುತ್ತಿರಲಿಲ್ಲವೆಂದು ತೋರುತ್ತದೆ. ಅವಳ ಆತ್ಮ ಅಂತಹ ಅಲ್ಪತೃಪ್ತವಲ್ಲ.

ಅಲ್ಲಿ ಅವಳಿಗೆ ಸ್ವಲ್ಪ ಆಪ್ತರೆಂದರೆ ಕೆಳಬೈಲಿನ ಸೂರನ ಹೆಂಡತಿ ಹೂವಿ. ಮನಸ್ಸು ತಡೆಯಲಾರದಾಗ ' ತನ್ನ ಅಳಲನ್ನು ಅವಳ ಮುಂದೆ ಸುರಿಯುತ್ತಾಳೆ. ಹೂವಿಗೆ ತಕ್ಕ ಸಮಾಧಾನ ಹೇಳಲು ಬಾಯಿಬಾರದು. ' ಅಯ್ಯೋಪಾಪ' ಎಂದಿಷ್ಟೇ ಹೇಳುತ್ತಾಳೆ. ಮನದಲ್ಲಿ ಬಹಳ ನೊಂದುಕೊಂಡು ಮರುಗುತ್ತಾಳೆ. ತನಗೆ ಅವಕಾಶವಿದ್ದಾಗ ಅವಳ ಕೆಲಸದಲ್ಲಿ ನೆರವಾಗುತ್ತಾಳೆ. ಕಾಡಿಗೋ, ಇಲ್ಲ ದೂರ ಪ್ರದೇಶಕ್ಕೋ ಹೋಗಲು ಲಲಿತೆ ಅಂಜಿದಾಗ ಹೂವಿಯೂ ಜೊತೆಗೆ ಹೋಗುತ್ತಾಳೆ.

ಒಂದುದಿನ ಅತ್ತೆಯ ಆಜ್ಞೆಯಂತೆ ಬಿದಿರುಕಳಲೆ ತರಲು ಹೋಗುವಾಗ ಲಲಿತೆ ಹೂವಿಯನ್ನೂ ಜೊತೆಗೆ ಕರೆದೊಯ್ದಳು. ಹೋಗುವದಾರಿಯಲ್ಲಿ ತುಂಗಮ್ಮ ಸಿಕ್ಕಳು. ತುಂಗಮ್ಮ ಶಾನುಭೋಗರ ಮನೆಗೆ ಅನೇಕ ಸಾರೆ ಬಂದಿದ್ದಳು, ಅವಳು ಮಾಲೇರವಳು, ವೃತ್ತಿಯಲ್ಲಿ ಸೂಳೆ ಎಂಬುದು ಲಲಿತೆಗೆ ಗೊತ್ತು. ಅವಳಿಗೆ ಶಾನುಭೋಗರ ಮನೆಯಲ್ಲಿ ಬಹಳ ಸಲುಗೆ. ಅದೇನೋ ಲಲಿತೆಗೆ ತಿಳಿಯದು. ತುಂಗಮ್ಮ ತಾನಾಗಿ ಮಾತನಾಡಿಸಿಕೊಂಡು ಬಂದಾಗ ಮಾತ್ರ ಲಲಿತೆ ಮಾತಾಡುತ್ತಿದ್ದಳು. .

'ಎಲ್ಲಿಗೆಹೊರಟಿರಿ, ಕೈಯಲ್ಲಿ ಕುಡುಗೋಲು ಹಿಡಿದು?' ತುಟಿಯಮೇಲಿನ ಬುಲಾಕುಹಾರಿಸುತ್ತ ವೈಯ್ಯಾರದಿಂದ ಕೇಳಿದಳು ತುಂಗಮ್ಮ.

' ಬಿದಿರುಕಳಲೆ ತರುವುದಕ್ಕೆ' ಉತ್ತರಕೊಟ್ಟವಳು ಹೂವಿ ಬಾಯಲ್ಲಿನ ತಂಬಾಕು ವೀಳಯದ ರಸವನ್ನು ಉಗುಳಿ ತುಂಗ ಮುಂದೆ ಹೊರಟಳು. ಹೂವಿ ಹೇಳಿದಳು ' ಹಾಳುರಂಡೆ. ಎಷ್ಟು ಜನರಮನೆ ಹಾಳುಮಾಡಿದ್ದಾಳೋ ! ಬೇಗ ಸತ್ತರೆ ಊರಿಗೆ ಕ್ಷೇಮ '

'ಅವಳೇನು ಮಾಡುತ್ತಾಳೆ? ಹೋಗುವವರಿಗೆ ಬುದ್ಧಿ ಬೇಡವೆ?

ಅದೇನೋ ಹೌದೂಅನ್ನಿ. ಆದರೆ ಈ ಮುಂಡೆಯರು ಏನೋ ಯಕ್ಷಿಣಿ ಮಾಡುತ್ತಾರೆ. ಇಲ್ಲದಿದ್ದರೆ ಇವಳಲ್ಲೇನು ರೂಪವಿದೆ ಅಂತ ಇವಳ ಹತ್ತಿರ ಹೋಗುತ್ತಾರೋ ಜನಗಳು?'

ಲಲಿತ ಮಾತಾಡಲಿಲ್ಲ. ಮುಂದೆ ಹೋಗುತ್ತಾ ಹೂವಿ ತನ್ನಷ್ಟಕ್ಕೆ ತಾನೇ ಮೆಲ್ಲನೆ ಹೇಳಿಕೊಂಡಳು 'ಅವರಿವರು ಹೋದರೆ ಹೋಗಲಿ. ಹಳ್ಳೀಮನೆ ಈ ಠಾಕುಠೀಕು ಜನರಿಗೆ ತಳುಕಾಗುತ್ತೆ. ಆದರೆ ಮನೆಯಲ್ಲಿನ ಲಕ್ಷ್ಮೀನ ಬಿಟ್ಟು ಶಾನುಭೋಗರೂ ಈ ಮೂಳೀ ಹತ್ತರ ಹೋಗುತ್ತಾರಲ್ಲ?'

ಲಲಿತೆಗೆ ಇದುಕೇಳಿಸಿತು. ಸರ್ರನೆತಿರುಗಿ ನಿಂತು.

'ಏನು ಹೇಳಿದೆ ಹೂವಿ! ಯಾವ ಶಾನುಭೋಗರು?' ಎಂದು ಕೇಳಿದಳು. ಹೂವಿ ಸ್ವಲ್ಪ ಗಾಬರಿಯಿಂದ.

'ನಿಮಗೆ ಗೊತ್ತಿದೆ ಅಂತಿದ್ದೆ' ಎಂದುರಾಗ ಎಳೆದಳು. ಲಲಿತೆ ಹೇಳಿದಳು 'ಹೂವಿ ನನ್ನ ಭಾಗ್ಯಕ್ಕೆ ಇದೊಂದು ಕೊರತೆಯಿತ್ತು' ಅವಳಿಗೇಕೆ ಇಷ್ಟು ಕಳಕಳಿಯೋ? ತನಗಿಲ್ಲದ ಕಣ್ಣು ಹೊಟ್ಟೆದರೇನು? ಇಂಗಿದರೇನು? ತಾನು ಜೀವಿಸಲು ಬಂದ ಜಾಗದಲ್ಲಿ ನೀತಿ ಮರ್ಯಾದೆಗಳಿಗೆ ಬೆಲೆ ಕಡಿಮೆ ಎನ್ನುವುದು ಈಚಿಗೆ ಲಲಿತೆಗೆ ಮನದಟ್ಟಾಗುತ್ತಿತ್ತು. ಹೂವಿ ಎಲ್ಲರ ವಿಷಯವನ್ನೂ ಹೇಳುತ್ತಿದ್ದಳು. ತನ್ನ ಅತ್ತೆಯ ಪೂರ್ವೋತ್ತರವನ್ನೆಲ್ಲಾ ಕೇಳಿ ಲಲಿತೆಗೆ ಅಸಹ್ಯವಾಯಿತು. ಮಾನಮರ್ಯಾದೆಯೆಂಬುದನ್ನು ಅರಿಯದೆ ಯೌವನದಲ್ಲಿ ಮೆರೆದ ಆ ಮಹಾತಾಯಿ, ಈಗ ಮಾತು ಮಾತಿಗೆ ತನ್ನ ಹೆಸರಿಟ್ಟು ಚುಚ್ಚುವುದು ಅವಳಿಗೆ ಅರ್ಥವಾಯಿತು. ಯಾವಾಕೆಯ ಶೀಲ ಕಳಂಕ ಪೂರಿತವಾಗಿದೆಯೋ ಆಕೆ ಇನ್ನೊಬ್ಬರ ಶೀಲವನ್ನು ಹಳಿದು ತನ್ನ ಚರಿತ್ರೆಯನ್ನು ಮುಚ್ಚಲೆತ್ನಿಸುವುದು ನೈಚ್ಯಮನೋವೃತ್ತಿಯ ವಿಕಾರ ಎಂದು ಅವಳು ಭಾವಿಸಿದಳು. ಆ ಅತ್ತೆ! ಅವಳಿಗೆಸರಿಯಾದ ಮಗ! ಇವರ ಮಧ್ಯೆತಾನು ಬಾಳಬೇಕಲ್ಲಾ ಎಂದು ನಡುಕವುಂಟಾಗುವುದು.'

[೧೩]

ಶಾನುಭೋಗ ಕೃಷ್ಣಪ್ಪನವರಿಗೆ ಶಾನುಭೋಗಿಕೆ ಇದ್ದದ್ದು ಸುಮಾರು ಎಳೆಂಟು ಮೈಲಿದೂರದ ಹಳ್ಳಿಯಲ್ಲಿ. ಅದೂ ಅವರ ಜ್ಞಾತಿಗಳದು. ದಿಕ್ಕೆಟ್ಟುಹೋದ

ಆ ಮನೆತನದ ಶಾನುಭೋಗಿಕೆಯನ್ನು ಇವರೇ ನೋಡುತ್ತಿದ್ದರು. ವರ್ಷಕ್ಕೆ ಸುಮಾರು ನಾನೂರು ರೂಪಾಯಿಗಳ ವರಮಾನವಿತ್ತು. ವರ್ಷಕ್ಕೆ ನಾಲ್ಕುತಿಂಗಳು ಮಾತ್ರ ಸ್ವಲ್ಪ ಕೆಲಸ. ಜೊತೆಗೆ ಒಂದು ಮುಜರಾಯಿ ದೇವಸ್ಥಾನಕ್ಕೂ ಇವರೇ ವ್ಯವಸ್ಥಾಪಕರು. ಆದರಿಂದ ಬೇರೆ ಸ್ವಲ್ಪ ವರಮಾನವಿತ್ತು. ಅಲ್ಲಿನ ಕೆಲಸದವರಿಗೆ ಇವರೇ ಕಛೇರಿಯಿಂದ ಪ್ರತಿತಿಂಗಳೂ ಸಂಬಳ, ಪೂಜೆಯ ಖರ್ಚು ಇವುಗಳನ್ನು ತಂದು ಕೊಡುತ್ತಿದ್ದರು. ಅದರಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ತಕರಾರು ಬರುತ್ತಿರಲಿಲ್ಲ. ಇಂಗ್ಲಿಷು ತಿಂಗಳುಗಳನ್ನು ತಿಳಿಯದ ಜನರಿಗೆ ಒಂದೆರಡು ತಿಂಗಳು ಸಂಬಳ ಸಲ್ಲಿಸದಿದ್ದರೂ ತೊಂದರೆಯಿರುತ್ತಿರಲಿಲ್ಲ. ಹೆಸರಿಗೆ ಸ್ವಲ್ಪ ತೋಟ ಗದ್ದೆಗಳೂ ಇದ್ದುವು. ಇವೆಲ್ಲದರಿಂದ ತಮ್ಮ ಸಂಸಾರ ಸುಸೂತ್ರವಾಗಿ ಕಳೆದು ತುಂಗೆಯ ಸಂಸಾರವೂ ವೈಭವದಿಂದಲೇ ನಡೆಯುತ್ತಿತ್ತು.

ಈ ನಡುವೆ ಜಯಪುರಕ್ಕೆ ಒಬ್ಬ ಪೋಸ್ಟುಮಾಸ್ಟರು ಬಂದ. ಅದುವರೆಗೂ ಬ್ರಹ್ಮಚಾರಿಯಾಗಿ ಸಂಸಾರದಲ್ಲಿ ವಿರಕ್ತನಾಗಿದ್ದವನಿಗೆ ಅದೇನೋ ಕೃಷ್ಣಪ್ಪನವರ ದುರದೃಷ್ಟಕ್ಕೆ ಸರಿಯಾಗಿ ಜಯಪುರಕ್ಕೆ ಬಂದೊಡನೆಯೇ ಮನಸ್ಸು ಬದಲಾಯಿಸಿತು. ತುಂಗೆಯಕೀರ್ತಿ ಅವನ ಕಿವಿಯನ್ನು ಮುಟ್ಟಿತು. ಕಾಳಶೆಟ್ಟಿಯ ಮಧ್ಯಸ್ಥಿಕೆಯಿಂದ ತುಂಗೆ ಒಂದೆರಡು ಬಾರಿ ಜಯಪುರಕ್ಕೆ ಹೋಗಿಬಂದಳು. ತನ್ನೊಂದಿಗೆ ಬಂದಿರಬೇಕೆಂಬ ಪೋಸ್ಟು ಮಾಸ್ಟರನ ಆಹ್ವಾನಕ್ಕೆ ಅವಳೂ ಸಮ್ಮತಿಸಿದಳು. ಇದುವರೆವಿಗೂ ತಾನುಕೊಟ್ಟು ನಡೆಸಿದ ಅವಳು ಸ್ತ್ರೀಸ್ವಭಾವಕ್ಕನುಗುಣವಾಗಿ, ಚಂಚಲ ಚಿತ್ತೆಯಾಗಿ ಕೈಬಿಟ್ಟು ಹೋಗುವವಳೆಂಬ ಸುದ್ದಿ ಕೃಷ್ಣಪ್ಪನವರಿಗೆ ಮುಟ್ಟಿತು. ಅದರಿಂದಾಗಿ ಅವರು ಕಂಗಾಲಾದರು. ಲಲಿತ ಹೋಗಿಬಿಡುತ್ತಾಳೆ ಎಂದರೆ ಅವರಿಗೆ ಅಷ್ಟು ವ್ಯಸನವಾಗುತ್ತಿರಲಿಲ್ಲ. ಅವಳಿಂದ ಅವರು ಯಾವಸುಖವನ್ನೂ ಅಪೇಕ್ಷಿಸಿರಲಿಲ್ಲ. ತಾಯಿಯ ಒತ್ತಾಯಕ್ಕೆ ಮದುವೆಯಾದದ್ದು. ಆದರೆ ತುಂಗೆಯನ್ನು ಬಿಟ್ಟಿರುವುದು ಸಾಧ್ಯವಿರಲಿಲ್ಲ. ಅವಳು ಅವರ ಸರ್ವಸ್ವವಾಗಿದ್ದಳು.

ತುಂಗೆಯನ್ನುಳಿಸಿಕೊಳ್ಳಲು ಅವರು ಸರ್ವಸಾಹಸಮಾಡಿದರು. ಕಾಳಶೆಟ್ಟಿಯ ಜೇಬು ತುಂಬಿಸಿ ಅವನನ್ನು ತಮ್ಮಕಡೆಗೆ ಒಲಿಸಿಕೊಂಡರು. ಪುನಃ ಪೋಸ್ಟುಮಾಸ್ಟರರು ತುಂಗೆಯ ಹವ್ಯಾಸ ಬಿಟ್ಟುಬಿಡಲು ಮಧ್ಯಸ್ಥಿಕೆಯಾಯಿತು. ಅವರಿಗೆ ಆ ಕಾರಣದಿಂದಾದ ಖರ್ಚನ್ನೆಲ್ಲಾ ಕೃಷ್ಣಪ್ಪನವರೇ ತುಂಬಿಕೊಡಬೇಕೆಂಬುದಾಗಿ ಒಪ್ಪಂದವಾಯಿತು. ಪೋಸ್ಟುಮಾಸ್ಟರರಿಗೆ ವರ್ಗವಾಯಿತು. ಇದು

ಕೃಷ್ಣಪ್ಪನವರ ಪ್ರಯತ್ನದ ಫಲವೋ ಇಲ್ಲ ಪೋಸ್ಟುಮಾಸ್ಟರರ ಕಾಹಿಲೆಯ ಪರಿಣಾಮವೋ ತಿಳಿಯದು. ತುಂಗೆ ಸದ್ಯಕ್ಕೆ ಕೃಷ್ಣಪ್ಪನವರಿಗೆದಕ್ಕಿದಳು. ಆದರೆ ಅವಳ ಮನಸ್ಸನ್ನು ಪಟ್ಟಣದ ವೈಭವ ಇನ್ನು ಮುಂದೆ ಸೆಳೆಯದಂತೆ ಅವಳ ಜೀವನದ ವೈಭವವನ್ನೂ ಉತ್ತಮಗೊಳಿಸಬೇಕಾಯಿತು. ಅವಳೆಷ್ಟಾದರೂ ಸೂಳೆ. ಹೆಂಡತಿಯಂತೆ ಅವರನ್ನೇ ನಂಬಿರಲಾರಳು. ಅವಳ ಮನೆ ಶೃಂಗಾರವಾಯಿತು. ಗ್ರಾಮೋಫೋನ್ ಬಂದಿತು ಸೆಂಟುಗಳು, ಸೀರೆಗಳು, ಚೈನುಗಳು, ಲೋಲಕ್ಕುಗಳು ಬಂದುವು. ತುಂಗೆ ತನ್ನ ಕೃತಘ್ನತೆಗೆ ಪಶ್ಚಾತ್ತಾಪಪಟ್ಟು, 'ಇನ್ನು ನೀವೇ ನನ್ನ ಕೈ ಹಿಡಿದ ಗಂಡ. ನಾವಿನ್ನಗಲುವುದು ಸಾವಿನಿಂದಲೇ' ಎಂದಳು. ಕೃಷ್ಣಪ್ಪನವರು ಸಂತೋಷಪಟ್ಟರು.

ಆದರೆ ಈ ಗಲಾಟೆಯಲ್ಲಿ ಅವರಿಗೆ ತುಂಬಾ ಖರ್ಚಾಯಿತು. ಈ ಆಪತ್ತಿನಲ್ಲಿ ದೇವಸ್ಥಾನದ ಹಣವನ್ನು ಧಾರಾಳವಾಗಿ ಉಪಯೋಗಿಸಿಕೊಂಡರು. ಅದನ್ನು ಕೂಡಲೇ ತುಂಬಿಕೊಡಲಾಗಲಿಲ್ಲ. ಕಲ್ಲಿನ ದೇವರ ಸೇವೆಗಿಂತ ಜೀವಂತ ದೇವಿಯ ಸೇವೆಯೇ ಮೇಲೆಂದು, ಕಲ್ಲಿನ ದೇವರ ಅರ್ಚನೆಯನ್ನು ಖೋತಾಮಾಡಿದರು. ಅದಕ್ಕೆ ಕಾರಣವನ್ನು ಕಟ್ಟಿಹೇಳಿ ಜನರ ಕಣ್ಣಿಗೆ ಮಣ್ಣೆರಚಲು ಬಗೆದರು.

ಜನರು ಮೋಸಹೋಗಲಿಲ್ಲ. ತುಂಗೆಯ ಹಸ್ತಕ್ಕೆ ಉಮೇದುವಾರರು ಬಹಳ ಜನರಿದ್ದರು. ಜನರು ತಮ್ಮ ಹಕ್ಕುಬಾಧ್ಯತೆಗಳಿಗೆ ಹೊಡೆದಾಡಲು ಹೊರಟಿದ್ದರು. ಕೃಷ್ಣಪ್ಪನವರ ಈ 'ಫಳಾರ'ದ ವಿಷಯ ಮೇಲಧಿಕಾರಿಗಳಿಗೆ ದೂರು ಹೋಯಿತು.

ನರಸಿಂಗರಾಯರು ತಾಲ್ಲೂಕು ಅಮಲ್ದಾರರು. ಈಸಾರೆ ಅವರು ಸರ್ಕೀಟು ಬಂದಾಗ ಕೃಷ್ಣಪ್ಪನವರ ಮೇಲಿನ ದೂರು ವಿಚಾರವಾಗುವುದಿತ್ತು.

ಅಮಲ್ದಾರರ ಕ್ಯಾಂಪೆಂದರೆ ಒಂದು ಮದುವೆಯಮನೆಯಷ್ಟು ಸಡಗರ. ಸಾಮಾನ್ಯವಾಗಿ ಅವರು ಶಾನುಭೋಗರ ಮನೆಯಲ್ಲಿಯೇ 'ಝಾಂಡಾ' ಊರುವ ಪದ್ಧತಿ. ಅವರ ಜೊತೆಗೆ ಪರಿವಾರದೇವತೆಗಳು, ಜಮಾಬಂದಿಗೆ ಬಂದ ಇತರ ಪಟೇಲರು, ರೈತರು. ಅವರಿಗೆ ತಕ್ಕಂತೆ ಊಟ, ಕಾಫಿತಿಂಡಿಗಳು. ಎಲ್ಲದರ ಹೊರೆಯೂ ಶಾನುಭೋಗರ ಮೇಲೆ. ಊರಿನಮಕ್ಕಳಿಗೆ ಹಾಲಿಲ್ಲದಿದ್ದರೂ ಪರವಾಯಿಲ್ಲ, ಎಲ್ಲರ ಮನೆಯ ಹಾಲೂ ಅಮಲ್ದಾರರ ಔತಣಕ್ಕೆ ಸರಬರಾಜು ಆಗಬೇಕು, ಇಲ್ಲದಿದ್ದರೆ

ಅವನಿಗೆ ಅಲ್ಲಿಂದ 'ಟಿಕೇಟ್.' ಅವರ ನಿತ್ಯದ ಊಟ ಏನೇ ಇರಲಿ ಜಮಾಬಂದಿಯ ದಿವಸಗಳಲ್ಲಿ, ದಿನಕ್ಕೊಂದು ಬಗೆ ಭಕ್ಷ್ಯ, ಖೀರು, ವಿಧವಿಧವಾದ ಮೇಲೋಗರಗಳು ಆಗಲೇಬೇಕು.

ನರಸಿಂಗರಾಯರ ಕ್ಯಾಂಪೆಂದರೆ ಅಂತಹ ಆಡಂಬರವೇನೂ ಇಲ್ಲ. ಜೊತೆಗೆ ಮಿತವಾದ ಪರಿವಾರ. ಕುದುರೆಯಿಲ್ಲದೆ ನಡೆದೇ ಬರುವರು. ಅವ ರಿವರು ಎಂತಿಲ್ಲ, ಯಾರೊಡನೆ ಬೇಕಾದರೂ ಮಾತಾಡುವರು. ಎಲ್ಲರೊಡನೆಯೂ ಸಲುಗೆಯಿಂದಿರುವರು. ಬೇಕೆಂದರೆ ಮನೆಯ ಹೆಂಗಸರನ್ನೂ ಮಾತಾಡಿಸುವರು, ಊಟ ಉಪಚಾರಗಳಲ್ಲಿ ಚೌಕಾಸಿಯೇನೂ ಇಲ್ಲ. ಬಹಳ ಸರಳಜೀವಿ ಎಂದು ಜನರಲ್ಲಿ ಮಾತು, ಅವರ ವಿಷಯವಾಗಿ.

ಇವರ ವಿಷಯವಾಗಿ ಕೆಟ್ಟಮಾತಾಡುವವರೂ ಬಹಳಿದ್ದರು. ರಾಯರಿಗೆ ಹೆಣ್ಣಿನ ಖಯಾಲಿ ಬಹಳ ಎಂದವರ ಪ್ರಚಾರ. ಅದಕ್ಕಾಗಿಯೇ ತಿಂಗಳಲ್ಲಿ ಇಪ್ಪ ತ್ತೈದುದಿನ ಊರಮೇಲೆಯೇ ಇರುತ್ತಾರೆಂದೂ, ಅವರ ಪ್ರತಿಯೊಂದು ಕ್ಯಾಂಪಿ ನಲ್ಲಿಯೂ ಅವರಿಗೆ ಆ ಸರಬರಾಜು ನಡೆಯಬೇಕೆಂದೂ ಹೇಳುತ್ತಿದ್ದರು. ಅವರ ಹಿಂದಿನ ಊರುಗಳ ಇತಿಹಾಸವೂ ಹರಡಿತ್ತು.

ಮಕ್ಕಿಮನೆಯಲ್ಲಿ ರಾಯರು ಕ್ಯಾಂಪುಮಾಡಿ, ಹಳ್ಳಿಯ ಹತ್ತು ಮಹಾ ಜನಗಳನ್ನು ಕರೆಸಿ ಹೇಳಿಕೆ ತೆಗೆದುಕೊಂಡರು. ಹೇಳಿಕೆಗಳ್ಯಾವುವೂ ಕೃಷ್ಣಪ್ಪನವರಿಗೆ ಅನುಕೂಲವಾಗಿರಲಿಲ್ಲ ಕೃಷ್ಣಪ್ಪನವರ ಆದರಾತಿಥ್ಯಗಳನ್ನೇ ಸ್ವೀಕರಿಸಿಯೂ ರಾಯರು ಕರ್ತವ್ಯಬಾಹಿರರಾಗುವ ಸೂಚನೆಯನ್ನೇನೂ ತೋರಿಸಲಿಲ್ಲ. ಕೃಷ್ಣಪ್ಪ ನವರನ್ನು ಕರೆದು ಸ್ವಲ್ಪಬಿರುಸಾಗಿಯೇ ಹೇಳಿದರು.

'ಕೃಷ್ಣಪ್ಪ, ರುಜುವಾತು ಎಲ್ಲಾ ನಿಮಗೆ ವಿರುದ್ಧ ಆಗಿ ಇದೆ. ನಿಮ್ಮ ಮೇಲೆ ಕೇಸು ಮಾಡಬೇಕಾಗುತ್ತೆ. ನಿಮ್ಮ ಶಾನುಭೋಗಿಕೆಯೂ ಹೋಗು ವುದಲ್ಲದೆ, ಜೈಲಿಗೂ ಹೋಗಬೇಕಾದೀತು.'

ಕೃಷ್ಣಪ್ಪನವರು ಎಷ್ಟು ಪರಿಯಿಂದ ಅಂಗಲಾಚಿದರೂ ರಾಯರ ಎದೆ ಮೃದುವಾಗಲಿಲ್ಲ.

[೧೪]

ವಿಪತ್ತು ಕಠಿಣವಾಗಿಯೇ ಇತ್ತು. ಇದರಿಂದ ತಪ್ಪಿಸಿಕೊಂಡು ಪಾರಾಗುವ ಬಗೆ ತೋರಲಿಲ್ಲ. ತಮ್ಮ ಶಾನುಭೋಗಿಕೆ ಹೋದರೆ ವಂಶಪಾರಂಪರ್ಯವಾದ ಆಸ್ತಿ ಹೋದಂತೆಯೇ? ತಾಯಿ ಮಗ ಇದರ ಪರಿಹಾರೋಪಾಯವನ್ನು ಬಹಳ ಯೋಚಿಸಿದರು. ಅವರ ಮಂತ್ರಾಲೋಚನೆಯಲ್ಲಿ ಅಮಲ್ದಾರರ ಆಳು ನಿಂಗನೂ ಸೇರಿಕೊಂಡ. ದೊಡ್ಡವರ ಅಂತರಂಗವನ್ನು ತಿಳಿದಿರುವವನು ಆಳು. ಅವನು ಅಮಲ್ದಾರರಿಗೆ ಪರ್ಸನಲ್ ಅಸಿಸ್ಟೆಂಟ್. ಕೊನೆಗೆ ಅಲ್ಲಿ ಆದ ತೀರ್ಮಾನವನ್ನು ಕಂಡು ಕೃಷ್ಣಪ್ಪನವರು ಸ್ವಲ್ಪ ಹೆದರಿದರು. ಮನಸ್ಸು ಎಷ್ಟೇ ಅಳುಕಿದರೂ ನೈತಿಕ ತಳಹದಿಯೇ ಇಲ್ಲದಿದ್ದ ಅವರಿಗೆ ಅದು ಅಷ್ಟೇನೂ ಹೇಯವಾಗಿ ಕಾಣಲಿಲ್ಲ.

ಲಲಿತೆಯನ್ನು ಅಂದು ಮೊದಲಬಾರಿ ಅತ್ತೆ ಆದರದಿಂದ ಕಂಡರು. ಅವರ ಈ ಅಪರೂಪವಾದ ಆದರವನ್ನು ಕಂಡು 'ಇಂದೇನು ವಿಶೇಷವಿದೆ,' ಎಂದು ಅವಳು ಬೆದರಿದಳು. ಬಹುಮೃದುವಾದ ಮಾತಿನಲ್ಲಿ ಅಗಿದುನುಂಗಿ, ಅವರು ಹೇಳಿದ ಆಶಯವನ್ನು ಕೇಳಿ ಅವಳು ಗಡಗಡನೆ ನಡುಗಿದಳು. ತನ್ನೀ ದಾರುಣವಾದ ಜೀವನದಲ್ಲಿ ಇಂತಹದೊಂದು ಆಪತ್ತು ಒದಗುವುದೆಂದು ಅವಳು ಕನಸಿನಲ್ಲಿಯೂ ಯೋಚಿಸಿರಲಿಲ್ಲ ಈಗ ಅವಳಿಗೆ ದಿಗ್ಭ್ರಮೆಯಾಯಿತು. ಕಣ್ಣಿಗೆ ಕತ್ತಲು ಕವಿದಂತಾಯಿತು. ತಲೆಯಲ್ಲಿ ಒಂದು ಯೋಚನೆಯೂ ಬಾರದಂತಾಯಿತು. ಆದರೂ ಬಹುಪ್ರಯಾಸದಿಂದ

'ಏನಿದು ಮಾತು? ನನ್ನಿಂದಾಗದು' ಎಂದಳು.

ಈ ವಿಷಯದಲ್ಲಿ ಉತ್ತರಕೊಡುವುದೂ ಆ ಸೂಚನೆಗೆ ಪುರಸ್ಕಾರಕೊಟ್ಟಂತೆ ಎನ್ನಿಸಿತು. ಆದರೆ ಅತ್ತೆ ಕಿಡಿಕಿಡಿಯಾಗಿ 'ನಿನ್ನ ಗರತಿತನ ಕಂಡಿದ್ದಾರೆ. ನಾನು ಹೇಳಿದೆ ಅಂತ ನನ್ನ ಮಾತು ಎದುರಿಸಬೇಕು, ಎಂದು ನಿನ್ನ ಆಸೆ. ನಾನುಹೇಳಿದಂತೆ ಕೇಳದಿದ್ದರೆ ನಿನ್ನ ಸಿಗಿಸಿ ಹೂಳಿಸಿಬಿಡುತ್ತೇನೆ' ಎಂದು ಗುಡುಗಿದರು. ಅಂತಹ ಕೃತ್ಯಕ್ಕೂ ಅವರು ಹೇಸುವವರಾಗಿರಲಿಲ್ಲ. ಅದು ಲಲಿತೆಗೆಗೊತ್ತು.

ಅಂದಿನದಿನ ಅವಳು ಏನುಕೆಲಸ ಮಾಡಿದಳೋ ಅವಳಿಗೇಗೊತ್ತಿಲ್ಲ. ಅಂದು ಆಕೆ ಗಂಡನನ್ನು ಕಾಣಬೇಕೆಂದು ವಿಶ್ವಪ್ರಯತ್ನಮಾಡಿದರೂ ಸಾಗಲಿಲ್ಲ. ಗಂಡ ಉದ್ದೇಶ ಪೂರ್ವಕವಾಗಿ ತಲೆತಪ್ಪಿಸಿಕೊಳ್ಳುತ್ತಿದ್ದರು. ಆದ್ದರಿಂದ ಗಂಡನೂ

ಆಕೆಲಸದಲ್ಲಿ ಸಮಭಾಗಿ ಎಂದು, ಖಚಿತವಾಯಿತು. ಈನಾಯಿಗಳ ಮಧ್ಯೆ ಸಿಕ್ಕಿದ ಹುಲ್ಲೆಯಂತಾಗಿದ್ದಳು ಅವಳು. ಕೊಂದುತಿನ್ನುವ ಜಾತಿಯಲ್ಲ ಅದು. ಜೀವವಿದ್ದಂತೆ ದೇಹದ ಖಂಡಖಂಡಗಳನ್ನು ಕಿತ್ತೆಳೆಯುವ ಕ್ರೂರಜೀವಿಗಳ ಜಾತಿ ಈ ಮಾನವ ಪಶುಗಳು. ಆದರೆ ಇವುಗಳಿರುವ ತಾವಿನಿಂದ ಅವಳೇಕೆ ಅಂದು ಓಡಿ ಹೋಗಲಿಲ್ಲವೋ ಅದು ಅವಳಿಗೆ ಎಂದೆಂದೂ ಸಮಸ್ಯೆಯಾಗಿಯೇ ಉಳಿದಿದೆ. ಪ್ರಾಯಶಃ ಅಂತಹ ಅತ್ಯಾಚಾರದ ಸೂಚನೆ ಅವಳ ಯೋಚನಾಶಕ್ತಿಯನ್ನು ಪೂರ್ಣವಾಗಿ ಕುಂಠಿಸಿಬಿಟ್ಟಿತೋ ಏನೋ ! ಅಥವಾ ಅಂದು ಅವಳ ಬುದ್ಧಿಶಕ್ತಿ ಶೂನ್ಯವಾಗಿ ಆದಿನವಮಾತ್ರ ಅವಳು ಹುಚ್ಚಿಯಾಗಿದ್ದಳೋ ಏನೋ. ಅಂತಹ ಮಿತಿಮೀರಿದ ಪಾಪ ತನ್ನಂತಹ ನಿರುಪದ್ರ ಜೀವಿಯ ವಿಷಯದಲ್ಲಿ ನಡೆಯದು ಎಂದವಳ ಆತ್ಮವಿಶ್ವಾಸವೇನೋ. ನರಸಿಂಗರಾಯರ ಮನುಷ್ಯತ್ವದಲ್ಲಿ ಅವಳಿಗೆ ವಿಶ್ವಾಸವುಂಟಾಗಿ ಆಸೆಕೊನರಿತೋ ಏನೋ. ಏನೂ ಅರಿಯದ ಆ ಮುಗುದೆ ಅಸಹಾಯಳಾದ ದ್ರೌಪದಿಯ ಮಾನಸಂರಕ್ಷಣೆಗೈದ ಪರಮಾತ್ಮನಲ್ಲಿ ಅಮಿತ ವಿಶ್ವಾಸವಿಟ್ಟು ಮೋಸಹೋದಳೋ ಏನೋ. ಅವಳ ಜೀವನದಲ್ಲಿ. ಈರೀತಿ ಅನಿರೀಕ್ಷಿತವಾದುವು, ತರ್ಕಕ್ಕೆ ನಿಲುಕದವು, ಅಸಂಬದ್ಧವಾದ ಘಟನೆಗಳು, ಸುತರಾಂ ನಡೆಯಲಾಗದ-ನಡೆಯಲಾರದ ಅವಿವೇಕಗಳು ಬೇಕಷ್ಟು ನಡೆದಿವೆ. ಏಕೋ ಏನೋ. ಮನುಷ್ಯನ ಕಾರ್ಯಗಳಿಗೆ ಸಮರ್ಪಕವಾದ ಕಾರಣಗಳನ್ನು ಹುಡುಕುವ ಕೆಲಸದಲ್ಲಿ ಜಯ ಅನೇಕವೇಳೆ ದೊರೆಯುವುದಿಲ್ಲ.

ಲಲಿತೆಯನ್ನು ಒಳಗೆನೂಕಿ ಬಾಗಿಲುಹಾಕುವಾಗ ಅತ್ತೆ 'ನೋಡು ಏನಾದರೂ ಕೂಗಿ ಗಲಾಟೆಮಾಡಿದೆಯೋ. ಇಂದುರಾತ್ರಿಯೇ ನೀನು ಹುಟ್ಟಲಿಲ್ಲ ಎಂದೆನ್ನಿಸಿಬಿಡುತ್ತೇನೆ' ಎಂದು ಎಚ್ಚರಿಕೆ ಕೊಟ್ಟರು, ರುದ್ರಕಾಳಿಯ ಅವತಾರವಾಗಿ. ಬಾಗಿಲಶಬ್ದಕೇಳಿ ನರಸಿಂಗರಾಯರು ದೀಪವನ್ನು ಸ್ವಲ್ಪದೊಡ್ಡದು ಮಾಡಿದರು. ಆಸಮಯದಲ್ಲಿ ಲಲಿತೆಯನ್ನು ಅಲ್ಲಿನೋಡಿ ಅವರಿಗೆ ಆಶ್ಚರ್ಯವೇನೂ ಆಗಲಿಲ್ಲ. ಕೃಷ್ಣಪ್ಪನವರಿಗೆ ಬೆದರಿಕೆ ಹಾಕುವಾಗ ಅವರಿಂದ ಏನಾದರೂ ಲಾಭಗಳಿಸಬೇಕೆಂಬ ದೂರದಾಸೆಯೂ ಅವರ ಮನಸ್ಸಿನಲ್ಲಿತ್ತು. ಅವರಿಗೆ ಬಡಿಸಲು ಲಲಿತೆಯೇ ಬಂದಿದ್ದಳು. ರಾಯರು ಆಕೆಯನ್ನೇ ದಿಟ್ಟಿಸಿನೋಡಿ 'ಎಲ್ಲಿಗೆ ಕೊಟ್ಟಿದ್ದೀರಿ ಈಕೆಯನ್ನು ?' ಎಂದು ಕೇಳಿದ್ದರು. ಕೃಷ್ಣಪ್ಪನವರು ಸ್ವಲ್ಪನಾಚಿ 'ನನ್ನ ಕುಟುಂಬ' ಎಂದು ಹೇಳಿದ್ದರು. 'ಓಹೋ' ಎಂದರು ರಾಯರು. ರಾಯರ ದೃಷ್ಟಿ ಎಲೆಯಮೇಲಿ

ರುವ ಬದಲು ಬಡಿಸುವವರ ಮುಖದಮೇಲೆ ನೆಡುವುದನ್ನು ಅತ್ತಿ ಗಮನಿಸಿದ್ದರು. ಅತ್ತೆಯೆಂತಹವರು ಎಂಬುದನ್ನು ತಿಳಿಯಲು ಇಂತಹ ವಿಷಯಗಳಲ್ಲಿ ಪಳಗಿದವರಾದ ರಾಯರಿಗೆ ಕಷ್ಟವಾಗಿರಲಿಲ್ಲ. ಆದರೆ ಆರೀತಿ ನೆಟ್ಟನೋಟದಿಂದ ನೋಡುವ ರಾಯರನ್ನು ಕಂಡು ಬೆದರಿ ನೆಲದಮೇಲೆ ಹುಳಿ ಬಡಿಸಿದ ಲಲಿತೆಯನ್ನು ನೋಡಿ ಮಾತ್ರ ಅವರಿಗೆ ಇದು ಸುಲಭವಾಗಿ ದಕ್ಕುವ ವಸ್ತುವಲ್ಲ, ಎಂದು ಅನ್ನಿಸಿತು. ಆದರೆ ಅವರು ವಿಹರಿಸಿದ ಪ್ರಪಂಚದಲ್ಲಿ ಸರಿದ ಸೆರಗು, ಸಡಲಿದ ನೆರಿಗೆಯವರೇಹೆಚ್ಚಾಗಿದ್ದರು. ಶಾನುಭೋಗರಿಗೆ ಬಂದಿರುವ ವಿಪತ್ತು, ಅವರ ಮತ್ತು ಹೆಂಡತಿಯ ವಯಸ್ಸಿನಲ್ಲಿದ್ದ ತಾರತಮ್ಯ, ಅತ್ತೆಯ ಶೀಲ, ತರಪೇತಾದ ತನ್ನ ಆಳಿನ ಅಭಿಸಂಧಿ ಇವೆಲ್ಲಾ ಅವರಿಗೆ ಅನುಕೂಲವಾಗಿದ್ದುವು. ಇಷ್ಟು ಅನುಕೂಲಸಂಪತ್ತಿರುವಾಗ ಇದೇ ಮುಕ್ತಾಯವನ್ನೇ ಅವರು ನಿರ್ಣಯಿಸಿದ್ದರು.

ಬಾಗಿಲ ಬಳಿಯಿಂದ ಲಲಿತೆ ಕದಲಲಿಲ್ಲ. ರಾಯರು ಎದ್ದು ಕುಳಿತರು. ಇಂತಹ ಸಮಯದಲ್ಲಿ ಗಂಡೇ ಮುಂದುವರಿದು ಹೋಗಬೇಕೆಂದು, ಮುಖದಮೇಲೆ ನಗೆಯನ್ನು ನಲಿಸಿ ಸಂಜ್ಞೆಯಿಂದ ಆಕೆಯನ್ನು ಹತ್ತಿರ ಕರೆದರು. ಅವಳೂ ಮುಂದೆ ಬಂದಳು. ಆದರೆ ಮಿಂಚಿನಂತೆ ಬಂದು ಅವರ ಕಾಲನ್ನು ಹಿಡಿದುಬಿಟ್ಟಳು. ಕಾಲು ಅವಳ ಕಣ್ಣೀರಿನ ಧಾರೆಯಿಂದ ನೆನೆದು ಹೋಯಿತು.

ರಾಯರು ಮೊದಲು ಸ್ವಲ್ಪ ಗಾಬರಿಯಾದರು. ಜೊತೆಗೆ ಸ್ವಲ್ಪ ಅಸಮಾಧಾನವೂ ಆಯಿತು. ಅವರಿಗೆ ತೊಂದರೆ ತೆಗೆದುಕೊಳ್ಳುವುದಿಷ್ಟವಿರಲಿಲ್ಲ. ಹಿಂದೆ ಅವರು ಯಾವ ಸಮಯದಲ್ಲಿಯೂ ತೊಂದರೆ ತೆಗೆದುಕೊಂಡು ಅಭ್ಯಾಸವಿರಲಿಲ್ಲ. ಆದರೆ ಈ ಬೇಟೆಯ ವಿಷಯವಾಗಿ ಸ್ವಲ್ಪ ಶ್ರಮವಹಿಸುವುದು ಅನಿವಾರ್ಯವಾಗಿತ್ತು. ಈಕೆಯಲ್ಲಿ ಧರ್ಮ ಕರ್ಮದ ವಿಷಯ ಸ್ವಲ್ಪ ನಂಬಿಕೆ ಇನ್ನೂ ಉಳಿದಿತ್ತು. ತಮಗೆ ಅನುಕೂಲವಾಗಬೇಕಾದರೆ ಆ ತೆರೆಯನ್ನು ಛಿಂದಿಮಾಡಬೇಕು. ಅವರು ಮುಂದುವರಿಯುವ ಮುನ್ನ ಲಲಿತೆ ಬಿಕ್ಕಳಿಸಿದಳು.

'ನಿಮಗೆ ಅಕ್ಕತಂಗಿ, ಹೆಣ್ಣುಮಕ್ಕಳು ಯಾರೂ ಇಲ್ಲವೇ? ಅವರನ್ನು ನೆನೆದಾದರೂ ನನ್ನ ಮಾನ ಉಳಿಸಿರಿ. ನನಗ್ಯಾರೂ ದಿಕ್ಕಿಲ್ಲ.'

ಈ ಕಾತರದ ಬೇಡಿಕೆ ಹೆಣ್ಣುತನದ ಹೆಸರಿನಲ್ಲಿ ಮಾಡಿದ ಪ್ರಾರ್ಥನೆ

ರಾಯರಹೃದಯವನ್ನು ನೇರವಾಗಿ ಮುಟ್ಟಿರಬೇಕು. ಅವರ ಮನಸ್ಸು ಆಕಾರ್ಯಕ್ಕೆ ಓಂದೇಟು ಹಾಕಿತು. ಆಗ ರಾಯರು,

'ಏಳಮ್ಮಾ, ಭಯಪಡಬೇಡ' ಎಂದು ಅಭಯವಿತ್ತರು. ಲಲಿತೆಗೆ ಹೋದ ಜೀವ ಬಂದಿತು. ಅವಳ ನಂಬಿಕೆ ಸುಳ್ಳಾಗಲಿಲ್ಲ. ರಾಯರಂತಹ ಸುಶಿಕ್ಷಿತ ಮನುಷ್ಯ ತನ್ನ ದುಃಸ್ಥಿತಿಗೆ ಮರುಗಿ ಕಾಮವನ್ನು ಜಯಿಸಿಯಾನು, ಎಂಬ ಭರವಸೆ ಕೆಡಲಿಲ್ಲ. ಬಾಗಿಲು ಹೊರಗಿನಿಂದ ಚಿಲುಕ ಹಾಕಿರುವಾಗ ಅಲ್ಲಿಂದ ತಪ್ಪಿಸಿಕೊಳ್ಳು ವಂತಿಲ್ಲ. ಈಗ ಹೊರಗೆ ಹೋದರೆ ಅತ್ತೆ ಜೀವಸಹಿತ ಉಳಿಸಿಯಾರು ಎಂಬ ನಂಬಿಕೆಯೂ ಇಲ್ಲ. ರಾಯರಿಂದ ಎರಡು ಮಗ್ಗುಲುಹಾಸಿಗೆ ಬೇಡಿ ಅಲ್ಲೇ ಮೂಲೆಯಲ್ಲಿ ಮುದುರಿಕೊಂಡಳು. ರಾಯರಾದರೂ ಆಕ್ಷೇಪಣೆಯೆತ್ತಲಿಲ್ಲ. ಯಾವಅಪವಾದಕ್ಕೂ ಹೆದರುವ ಜೀವವಲ್ಲ ಅದು. ಅವರೂ ದೀಪವನ್ನು ಸಣ್ಣದುಮಾಡಿ ಮಲಗಿಕೊಂಡರು.

ಅಂದೆಲ್ಲಾ ಪರಿತಾಪಗೊಂಡು ಪ್ರಕ್ಷುಬ್ಧವಾಗಿದ್ದ ಲಲಿತೆಯ ಮನಸ್ಸು ಈಗ ಸ್ವಲ್ಪ ಶಾಂತಿಹೊಂದಿ ಅವಳಿಗೆ ಸ್ವಲ್ಪ ನಿದ್ದೆ ಹತ್ತಿತು. ಆದರೆ ರಾಯರಿಗೆ ನಿದ್ದೆ ಹತ್ತಲಿಲ್ಲ. ಅವರು ಅಭಯಕೊಟ್ಟ ಮರುಕ್ಷಣವೇ ಅವರ ಮನಸ್ಸಿನಲ್ಲಿದ್ದ ಇನ್ನೊಂದು ಧ್ವನಿಯು 'ಏನು ಕೆಲಸಮಾಡಿಬಿಟ್ಟೆ? ನಿನ್ನ ಧರ್ಮಬುದ್ಧಿಗೆ ಬೆಂಕಿಹಾಕಿತು. ತುಟಿಗೆ ಬಂದ ಅಮೃತವನ್ನು ಹೀರದೆ ಬಿಟ್ಟೆಯಲ್ಲಾ!' ಎಂದು ಹಂಗಿಸಿತು. ಸ್ವಲ್ಪಹೊತ್ತು ವಿವೇಕ ಕಾಮನೊಂದಿಗೆ ಹೋರಾಡಿತು. ಕಾಮನಿಗೆ ಸೋಲದವರಾರು? ರಾಯರಲ್ಲಿದ್ದ ಪಶು ಮನುಷ್ಯನನ್ನು ತಿವಿದು ಓಡಿಸಿತು. 'ಅಂತಹ ಅಪೂರ್ವ ಲಾವಣ್ಯ ರಾಶಿ ಅದೇ ಕೋಣೆಯಲ್ಲಿರಲು ಅವರ ಮನಸ್ಸು ಹೇಗೆತಾನೇ ಶಾಂತಿ ಹೊಂದೀತು?' ಅವಳ ವಿಷಯದಲ್ಲಿ ರಾಯರ ಹೃದಯದಲ್ಲಿ ಮೂಡಿದ್ದ ಕರುಣೆ, ವಿಷಯೇಚ್ಛೆಯ ಹುಚ್ಚುಹೊಳೆಯಲ್ಲಿ ಕೊಚ್ಚಿಹೋಯಿತು. ಅವರು ಈರೀತಿ ಕರುಣೆಯ ಸೋಗು ಹಾಕಿ ಲಲಿತೆಯನ್ನು ಮೋಸಗೊಳಿಸದಿದ್ದರೆ, ಆ ಅಬಲೆ ಸ್ವಲ್ಪವಾದರೂ ತನ್ನ ಮಾನಸಂರಕ್ಷಣೆಗೆ ಹೊಡೆದಾಡುತ್ತಿದ್ದಳೋ ಏನೋ? ಎಂತಹರ ಭೀಷ್ಮಪ್ರತಿಜ್ಞೆಯನ್ನೂ ಕೆಡಿಸುವಂತಹ ಆಕರ್ಷಣೆ ಅವಳಲ್ಲಿದೆಯೆಂದು ಅವಳಿಗೆ ಅರಿವಿಲ್ಲ. ಈಗ ರಾಯರ ಸದ್ಬುದ್ಧಿಯು ಸೋಗಿಗೆ ಮರುಳಾಗಿ ಹಸುಗೂಸಿನಂತೆ ನಿದ್ರಿಸುತ್ತಿದ್ದ ಆ ಅಬಲೆಯು ಯಾವೊಂದು ಪ್ರತಿಭಟನೆಯೂ ಇಲ್ಲದೆ ತನ್ನ ವೈತಿಳಿಯುವ ಹೊತ್ತಿಗೆ ರಾಯರ ಕಾಮದ ಕೈಗೊಂಬೆಯಾಗಿ ತನ್ನ ಸರ್ವನಾಶ ಮಾಡಿಕೊಂಡಿದ್ದಳು.

ಪ್ರಣಯ ಭೋಗ ಬಾಹಿರಳಾದ ಅವಳ ಇಂದ್ರಿಯ ಆ ಸರ್ವನಾಶದ ಹೊತ್ತಿನಲ್ಲಿ, ಆ ಅತೀವ ದುರ್ದೆಶೆಯಲ್ಲಿ ಒಂದು ಕ್ಷಣ ಸಂತೃಪ್ತಿಗೊಂಡು, ಆ ಕ್ಷಣಿಕ ಸುಖದಲ್ಲಿಯೇ ಅವಳ ಮುಂದಿನ ಅಧೋಗತಿಯ ಬೀಜ ಬಿತ್ತಿತು, ಆ ವಿಷವೃಕ್ಷದ ಅಂಕುರ ಅವಳ ಇಚ್ಛೆಯಿಲ್ಲದೆ ಅವಳ ಮನಸ್ಸಿನಲ್ಲಿ, ವಿಶ್ವವಿರೋಧಿಯಾಗಿ, ಜನತೆಯ ರುಜಿನವಾಗಿ, ಬೆಳೆಯುತ್ತಾ ಬಂದಿತು.

ದೇವರೇ? ಆಕ್ಷಣದಲ್ಲಿ ಆ ಮನೆಯಮೇಲೆ ಸಿಡಿಲೊಂದು ಎರಗಿ, ನೊಂದವಳೂ, ನೋಯಿಸಿದವನೂ, ಕೆಟ್ಟವಳೂ, ಕೇಡಿಯೂ ನಿರ್ನಾಮವಾಗಿ ಹೋಗಬಾರದೇ !

ಸ್ವಲ್ಪದಿನಕ್ಕೇ ಲಲಿತೆಯ ತಾತನಿಗೆ ತೀವ್ರವಾದ ಕಾಹಿಲೆಯೆಂದು ಶೃಂಗೇರಿಯಿಂದ ಲಲಿತೆಗೆ ಕರೆಬಂದಿತು. ಏನುಮಾಡಿದರೂ ಚಿಂತೆಯಿಲ್ಲ, ಇಲ್ಲಿಯ ಜೀವನ ಮಾತ್ರ ಬೇಡ ಎಂದು ಅವಳ ಮನವು ಹೇಳುತ್ತಿತ್ತು. 'ನರಕದ ತಳವನ್ನು ಮುಟ್ಟಿಯಾಯಿತು. ಇನ್ನು ಇಳಿಹೋದವರಿಗೆ ಛಳಿಯೇನು ಮಳೆಯೇನು?' ಎಂದು ಮನಸ್ಸು ಯಾವ ರೀತಿಯ ಜೀವನಕ್ಕಾದರೂ ನಿಶ್ಚಯಿಸಿತ್ತು. ಗಂಡ, ಅತ್ತೆ ಎಂದರೆ ದ್ವೇಷ ಉಕ್ಕಿಬರುತ್ತಿತು. ಅಲ್ಲಿಂದ ಅವಳು ಹೊರಟವಳು ಮತ್ತೆ ಮಕ್ಕಿಮನೆಯ ಮುಖ ನೋಡಲಿಲ್ಲ.

ನರಸಿಂಗರಾಯರಿಗೆ ಕೃಷ್ಣಪ್ಪನವರ ಋಣ ತೀರಿಸಬೇಕೆಂಬ ಉದ್ದೇಶವಿತ್ತೋ ಏನೋ. ಅವರು ಯಾವುದನ್ನೂ ಮಾಡುವ ಮೊದಲು ಅವರಿಗೆ ವರ್ಗವಾಗಿ ಹೋಯಿತು. ಮುಂದೆಬಂದ ಅಮಲ್ದಾರರು ಸ್ವಲ್ಪ ಕಟ್ಟುನಿಟ್ಟಿನವರಾದ್ದರಿಂದ ಶಾನುಭೋಗರು ತಿಂದಿದ್ದನ್ನು ದಕ್ಕಿಸಿಕೊಳ್ಳಲಾರದೇ ಹೋದರು. ಅವರ ಶಾನುಭೋಗಿಕೆ ಹೋಯಿತು. ಜೀವನಕ್ಕೂ ಗತಿಯಿಲ್ಲದೆ ಹೋಯಿತು. ಬಿದ್ದ ಆಳಿಗೆ ಊರವರು ತಲೆಗೊಂದು ಕಲ್ಲು ಎಸೆದರು. ಈ ಮುಖದಲ್ಲಿ ಪುನಃ ಲಲಿತೆಯನ್ನು ನೋಡಲಾಗಲಿಲ್ಲ. ಅವರು ಲಲಿತೆಯನ್ನು ಪುನಃ ಕರೆಯಿಸಿಕೊಳ್ಳಲಿಲ್ಲ.

[೧೫]

ಗೋವಿಂದರಾಯರನ್ನು ಎಲ್ಲರೂ 'ಹುಚ್ಚುನಾಯಿ' ಎಂದು ಕರೆಯುತ್ತಾರೆ. ಸ್ವಭಾವಕ್ಕೆ ತಕ್ಕ ಹೆಸರು ಅದು. ಅವರು ಯಾವ ಸಮಯದಲ್ಲಿ ಯಾರ ಮೇಲೆ

ಕೇಗುವರೋ ಹೇಳಲು ಬರುವುದಿಲ್ಲ. ಜನ್ಮತಃ ಕೆಟ್ಟವರು. ಆ ಕೆಟ್ಟತನ ಅವರ ನರನಾಡಿಗಳಲ್ಲಿ ಮಿಳಿತವಾಗಿಬಿಟ್ಟಿದೆ. ಅಕಸ್ಮಾತ್ ಹುಚ್ಚೇಳುವುದಕ್ಕೆ ಕಾರಣ ಅವರ ಪಿತ್ಥಕೋಶದ ಅವ್ಯವಸ್ಥೆ ಎಂದು ಜನರು ರೋಗನಿಧಾನ ಊಹಿಸಿದ್ದಾರೆ ಅವರ ಊತಿ ( Eczema ) ಕೆರಳಿದಾಗ ಅವರ ಮನಸ್ಸು ಅವರ ಸ್ವಾಧೀನದಲ್ಲಿ ರುವುದಿಲ್ಲವೆಂದು ಕೈಕೆಳಗಿನವರು ಹೇಳುತ್ತಾರೆ. ಆದರೆ ಅವರಿಗೆ ಎಂದು ಪಿತ್ತಪ್ರ ಕೋಪವಾದೀತು, ಎಂದು ಊತಿ ಕೆರಳೀತು ಎನ್ನುವುದರ ಸುಳಿವು ಯಾರಿಗೂ ಹತ್ತು ತ್ತಿಲ್ಲ. ಆದ್ದರಿಂದಲೇ ಆ ಬಡಪಾಯಿಗಳು ಅವರ ಅಗ್ರಹಕ್ಕೆ ತುತ್ತಾಗುತ್ತಾರೆ. ತಮ್ಮ ಕುಲಕೋಟಿಯನ್ನೆಲ್ಲಾ ಅವರ ನಾಲಿಗೆಯ ಮೇಲೆ ತಂದು ಅವರಿಗೆ ಸದ್ಗತಿ ಕಾಣಿಸುತ್ತಾರೆ. ಗೋವಿಂದರಾಯರ ಎಲುಬಿಲ್ಲದ ನಾಲಿಗೆಗೆ ಹಿಡಿತವೇಇಲ್ಲ. ಆ ಬೊಗಳುವಿಕೆಯೇ ಆ ನಾಯಿಯ ಏಕಮಾತ್ರ ಯೋಗ್ಯತೆ ಎಂದು ಎಲ್ಲರೂ ನಂಬಿದ್ದಾರೆ.

ಅವರು ಆ ಸ್ಥಾನಕ್ಕೆ ಹೇಗೆಬಂದರೋ ಅದೊಂದು ಸಮಸ್ಯೆಯಾಗಿದೆ. ಅವರಿಗೆ ಯಾವ ಯೋಗ್ಯತೆಯೂ ಇಲ್ಲ. ಅವರು ಇದುವರೆವಿಗೆ ಉಗುರಿಗೆ ಮಣ್ಣು ಹಚ್ಚಿದವರಲ್ಲ, ಯಾವುದೋ ಇನ್ಸ್ಟಿಟ್ಯೂಟಿನಲ್ಲಿ ನಾಲ್ಕುವರುಷ ಆಯಸ್ಸು ಕಳೆದರಂತೆ. ಅಲ್ಲೂ ಅವರೇನು ಕಡಿದರು ಎನ್ನುವುದು ಅವರೊಬ್ಬರಿಗೇಗೊತ್ತು. ಯಾವನೋ ಧರ್ಮಾತ್ಮ ಕೊಟ್ಟನಾಲ್ಕು ಕಾಸನ್ನು ತಿಂದು 'ಭೂಮಿಗೆ ಭಾರವಾಗಿ' ಸಮಾಜದ ರುಜಿನವಾಗಿ ಕಾಲಕಳೆದವರು ಅವರು. ಅವರೀಗ ರಂಗಣ್ಣನ ಅಧಿಕಾರಿ. ರಂಗಣ್ಣ ಬರಿಯ ಕಾಲೇಜು ಪದವೀಧರ ಇನ್ಸ್ಟಿಟ್ಯೂಟನ್ನು ಹಾಳುಮಾಡಿದವನಲ್ಲ, ಎನ್ನುವ ಕಾರಣದಿಂದ ಅವನನ್ನು ಕೀಳಾಗಿ ಕಾಣುತ್ತಾರೆ. ದೊಡ್ಡ ವಿಜ್ಞಾನಿಗಳೊಂದಿಗೆ ತಮ್ಮನ್ನು ಹೋಲಿಸಿಕೊಳ್ಳುತ್ತಾರೆ.

ರಾಜಕೀಯದಲ್ಲಿಯೂ ಅವರ ಅಭಿಪ್ರಾಯಗಳು ಪ್ರತ್ಯೇಕವುಂಟು. ಅವರ ಅಭಿಪ್ರಾಯದಂತೆ 'ಗಾಂಧಿ ಒಬ್ಬ ಹಲಾಲುಕೋರ, ಕಪಟಿ, ವ್ಯಭಿ ಚಾರಿ.' ಅವರ ನಿಘಂಟುವಿನಲ್ಲಿನ ಅವಾಚ್ಯಶಬ್ದಗಳೆಲ್ಲಾ ಗಾಂಧಿಗೇ ಮೀಸಲು. ಹಿಂದೂದೇಶಕ್ಕೆ ಇಂಗ್ಲಿಷರಿಂದಲೇ ಮೋಕ್ಷ. ಈ ರಾಜಕೀಯಗಲಭೆಯನ್ನು ನಿರ್ನಾಮಮಾಡಬೇಕು. ಪ್ರತಿಯೊಬ್ಬ ಕಾಂಗ್ರೆಸಿಗನನ್ನೂ ಗಲ್ಲಿಗೇರಿಸಬೇಕು.

ನಡೆನುಡಿಗಳಲ್ಲಿ ಅವರು ಇಂಗ್ಲಿಷರನ್ನೇ ಅನುಕರಿಸುತ್ತಾರೆ. ಅನುಕರಣ ವೊಂದೇ ಅಲ್ಲ ಅವರಿಗೂ ಮುಂದೆಹೋಗುತ್ತಾರೆ. ಚಪ್ಪಲಿಹಾಕುವುದು ಅಸಭ್ಯಾ

ಚಾರ. ರಂಗಣ್ಣನಿಗೆ ಬೂಟ್ಸು ಹಾಕುವುದು ಅಸಹ್ಯ. ಬಿಸಿಲು ಶಿಖೆಗೆ, ಕಾಲು ಬೆವತು, ಅಸಹ್ಯವಾಗಿಬಿಡುತ್ತದೆ ನಾತಬರುತ್ತದೆ. ಕಾಲಿಗೆ ಒಂದು ಸೀಸದ ಗುಂಡು ಕಟ್ಟಿದಂತಿರುತ್ತದೆ. ಆದರೆ ಅದರಲ್ಲಿಯೂ ಮೇಲಧಿಕಾರಿಗಳ ಸೂಚನೆ ಯಂತೆಯೇ ನಡೆಯಬೇಕು. ಗೋವಿಂದರಾಯರ ಬಾಯಲ್ಲಿ ಸದಾ ಇಂಗ್ಲೀಷು, ಸಿಗರೇಟು. ತಮ್ಮ ರಾಜಭಕ್ತಿಯನ್ನು ಸೂಚಿಸಲು ವಾರಕ್ಕೊಂದುಸಲ ದಂಡಿನ ಒಂದು ಕೆಫೆಗೆ ಸವಾರಿಚಿತ್ತೈಸಿ ಟಾಮಿಗಳು ಕುಡಿದುಬಿಟ್ಟ ಎಂಜಲು 'ಬೀರನ್ನು' ಕುಡಿದು ಕೃತಕೃತ್ಯರಾಗುತ್ತಾರೆ.

ಇಂತಹ ಸಾಮ್ರಾಟರ ನಮ್ರಸೇವಕರಾದ ಗೋವಿಂದರಾಯರ ತಾಳ. ಅದಕ್ಕೆ ತಕ್ಕ ಮೇಳ ಅವರಿಗೆ ತಕ್ಕ ವ್ಯಕ್ತಿಪೂಜಕರು. ಅವರಮಧ್ಯೆ ರಂಗಣ್ಣನ ಇರವು ನಗುಪಾಟಲು. ಅವನ ಖಾದಿಯ ಉಡುಪು ಬಹುಕೀಳು. ಅವನ ರಾಷ್ಟ್ರೀಯ ಅಭಿಪ್ರಾಯಗಳು, ದ್ರೋಹವರ್ತನೆ.

ಇವರ ಕೈಕೆಳಗೆ ರಂಗಣ್ಣ ದಿನಕ್ಕೆಂಟು ಗಂಟೆ ದುಡಿಯಬೇಕು. ಅವರು ಜೊತೆಯವರ, ಮೇಲಧಿಕಾರಿಗಳಿಗೆ ಆಗದವರ ಮೇಲೆ ಚಾಡಿಹೇಳಿದ ಮಹತ್ಕಾರ್ಯದ ಆತ್ಮಪ್ರಶಂಸೆಯನ್ನು ಕೇಳಿ ಜಿಗುಪ್ಸೆಪಡದೆ ತಲೆಯಾಡಿಸಬೇಕು. ಅವರ ಸಹೋದ್ಯೋಗಿಗಳನ್ನು ಅವರಿಟ್ಟ, ಕುಂಬಾರ, ಕುರಿ, ಅಡಿಗೆಯವ, ಹೊಟ್ಟೆಗ, ಪೆಂಗ, ಇತ್ಯಾದಿ ಸುಂದರ ನಾಮಗಳಿಂದ ಕರೆಯಬೇಕು. ಇದಕ್ಕೆಲ್ಲಾ ಒಪ್ಪಿಕೊಳ್ಳ ಯದಿದ್ದರೆ ಅವನಿಗೆ ಹೆಜ್ಜೆಹೆಜ್ಜೆಗೂ ತೊಂದರೆಸಿದ್ಧ. ಅವನಿಗೆ ಕಾರ್ಖಾನೆ ನರಕ ವಾಗುವುದು.

ಈ ಹೊಲಸು ವಾತಾವರಣದಲ್ಲಿ ರಂಗಣ್ಣ ಸಿಕ್ಕಿಹೋಗಿದ್ದಾನೆ.

ಆದರೆ ರಂಗಣ್ಣನಿಗೆ ತನ್ನಸ್ಥಿತಿಯೇ ಎಷ್ಟೋ ಉತ್ತಮವೆಂದೆನ್ನಿಸುತ್ತಿದೆ. ಅಲ್ಲಿ ಕೆಲಸಮಾಡುವ ಕೂಲಿಕಾರರ ಪರಿಸ್ಥಿತಿ ಇನ್ನೂ ಶೋಚನೀಯವಾಗಿದೆ. ಅವರ ಸಂಬಳ ತೀರಾಕಡಿಮೆ. ದಿನಕ್ಕೆ ಆರಾಣೆ. ಎಂಟು ಗಂಟೆ ಬೆವರು ಹರಿಯುವಂತಹ ಕೆಲಸ. ಆಸಂಬಳದಲ್ಲಿ ಅವರು ಯಾವ ಪಟ್ಟಣದಲ್ಲಿಯೂ ಬದುಕಲಾರರು. ಅದಕ್ಕೋಸ್ಕರ ಕಾರ್ಖಾನೆಯ ಹತ್ತಿರವೇ ಗುಡಿಸಲುಕಟ್ಟಿದ್ದಾರೆ. ಗುಡಿಸಲುಕಟ್ಟಿದ ಸ್ಥಳ ಕಾರ್ಖಾನೆಯದೇ. ಆದಕ್ಕೂ ಬಾಡಿಗೆ ಕೊಡಬೇಕು. ಗುಡಿಸಲುಗಳೋ ಹೆಗ್ಗಣದ

ಬಿಲಗಳು. ಸುತ್ತಲೂ ಕೊಳಚೆ ನೀರು ನಿಂತು ನಾತ ಬಡಿಯುತ್ತದೆ. ನೀರು ಬೆಳಕು ಗಳ ಸೌಕರ್ಯವಂತೂ ಇಲ್ಲವೇ ಇಲ್ಲ. ಸ್ನಾನವಿಲ್ಲದೇ ಅವರ ಮೈ ದುರ್ನಾತ ಬಡಿಯುತ್ತದೆ. ಬದಲಾಯಿಸಲು ಬಟ್ಟೆಗಳಿಲ್ಲದೇ ಅವರು ಬಟ್ಟೆ ಒಗೆಯುವುದೇಇಲ್ಲ. ಇದ್ದ ಬಟ್ಟೆಗಳೂ ಕಾರ್ಖಾನೆಯ ರಾಸಾಯನಿಕ ದ್ರವ್ಯಗಳಿಗೆ ಆಹುತಿಯಾಗಿ ಚಿಂದಿ ಚಿಂದಿಯಾಗಿವೆ. ಅವರೇನು ಮನುಷ್ಯರೋ! ಪಶುಗಳೋ! ಹೇಳಲು ಬರುವಂತಿಲ್ಲ. ಒಂದುಕಡೆ ಅತ್ಯಂತ ನೂತನವಾದ ಯಂತ್ರಗಳು. ಅತ್ಯಾಧುನಿಕರೀತಿಯಲ್ಲಿ ಜೀವನ ಜರುಗಿಸುತ್ತಿರುವ ಅದೃಷ್ಟವಂತರು. ಇನ್ನೊಂದೆಡೆ, ಕಾಡುಮನುಷ್ಯರಿಗೂ ಕೀಳಾದ ಅಭಾಗಿಗಳು. ಈ ತಾರತಮ್ಯವನ್ನು ಕಂಡು ರಂಗಣ್ಣನಿಗೆ ಕರುಳು ಕಿವಿಚುವುದು. ಇದಕ್ಕೇನು ಪರಿಹಾರ? ಇದೊಂದು ನಾಗರೀಕತೆಯ ಕಾಲಕೂಟವೇ?

ಈ ವಾತಾವರಣದಿಂದ ಪಾರಾದೇನೇ ಎನ್ನಿಸುವುದು. ಆದರೆ ಅವನನ್ನು ಹಿಂದಕ್ಕೆ ಕರೆತರಲು ರೈಲು ಬರಬೇಕಲ್ಲ? ರೈಲಿಗೆ ಯಾವ ದಾಸ್ಯವೂ ಇಲ್ಲ. ಅದು ತನ್ನಿಷ್ಟ ಬಂದಾಗ ಬರುವುದು. ರೈಲಿಗೆ ಕಾದಿರುವವರು ದಣಿದಿರುವಷ್ಟೂ ತಡವಾಗಿ ಬರುವುದು. ಹೇಗೋಮಾಡಿ ಚಿಕ್ಕಪೇಟೆಯ ಸಂದಿಯಲ್ಲಿನ ತನ್ನ ರೂಮಿಗೆ ಬಂದು ಬಿದ್ದುಕೊಂಡನೆಂದರೆ ರಂಗಣ್ಣನಿಗೆ ಊಟವೂಬೇಡ, ಯಾವುದೂಬೇಡ.

ದಿನಗಳು ಕಳೆಯುತ್ತಿವೆ. ಅತ್ಯಮೌಲ್ಯವಾದ ಜೀವನದ ದಿನಗಳು ಜಾರಿ ಹೋಗುತ್ತಿವೆ. ಯಾವ ಪುರುಷಾರ್ಥವೂ ಇಲ್ಲದೆ ವ್ಯಯವಾಗಿ ಹೋಗುತ್ತಿವೆ. ತಿಂಗಳಿಗೆ ನಾಲ್ಕು ಕಾಸು ಮನೆಗೇನೋ ಕಳಿಸುತ್ತಿದ್ದಾನೆ. ಆದರೆ ತನ್ನ ಈ ಸಹಾಯ ಎಷ್ಟರಮಟ್ಟಿಗೆ ಫಲಕಾರಿಯಾಗುವುದೋ ಅವನಿಗೇ ತಿಳಿಯದು.

ಅವನಿಗೆ ಯಾವ ರಜವೂ ಇರಲಿಲ್ಲ. ವರ್ಷಕ್ಕೆ ಒಂದುತಿಂಗಳು ಮಾತ್ರ ಹಕ್ಕಿನ ರಜಾ ಸಿಗುವುದಿತ್ತು. ಅದೂ ಮಾಲೀಕರ ಇಷ್ಟಬಂದಾಗ ದೊರೆಯುವುದು. ನವರಾತ್ರಿಗೆ ರಜಾತೆಗೆದುಕೊಂಡು ಊರಿಗೆ ಬಂದ. ಅವನಿಗೀಗ ಶೃಂಗೇರಿಯಲ್ಲಿರಲು ಇಷ್ಟವಿಲ್ಲ. ತನ್ನ ಗಲಾಟೆ, ಗದ್ದಲಗಳಿಂದ ಜನರ ಮೈಮರೆಸುವಂತಹ ದೊಡ್ಡ ಊರೇನೂ ಶೃಂಗೇರಿಯಲ್ಲ. ಅಲ್ಲಿ ಮಾಡಲು ಉದ್ಯೋಗವೇನೂ ಇಲ್ಲ. ಅಲ್ಲಿಯ ಜನಜೀವನದಲ್ಲಿ ತುಂಗೆ ಹಾಸುಹೊಕ್ಕಾಗಿ ಬೆರೆತುಹೋಗಿದ್ದಾಳೆ. ಆಕೆಯನ್ನು ಮರೆತು ಅಲ್ಲಿಯ ಯಾವ ಮನುಷ್ಯನೂ ನಡೆಯುವಂತಿಲ್ಲ. ಬಾಗಿಲ ಹೊರಗೆಬಂದರೆ ಅವಳು ಕಾಣಿಸುತ್ತಾಳೆ. ಹೀಗಿರುವಾಗ ತುಂಗೆಯ ದರ್ಶನ ರಂಗಣ್ಣನ ಮನಸ್ಸಿನಲ್ಲಿ

ಲಲಿತೆಯ ನೆನಪನ್ನು ಮೂಡಿಸುವುದು. ಅದೆಂತಹ ಗಟ್ಟಿಬಣ್ಣವೋ ಆ ಚಿತ್ರದ್ದು. ಕಲ್ಲಿನಮೇಲೆ ಒಂದು ಕಾಲನ್ನೆತ್ತಿಟ್ಟು ಒಟ್ಟೆ ಒಗೆಯುತ್ತಿದ್ದ ಅಂದಿನ ಅವಳ ಚಿತ್ರ ಇಂದೂ ಅವನ ಮನಸ್ಸಿನಲ್ಲಿ ಅಚ್ಚಳಿಯದೆ ಮೂಡಿತ್ತು. ಆ ಚಿತ್ರ ಒಂದು ಭಾವಪ್ರವಾಹದ ಉಗಮಸ್ಥಾನಮಾತ್ರ. ಹಿಂದಿನಿಂದ ಅನೇಕ ಭಾವನೆಗಳು ನಿರರ್ಗಳ ಧಾರೆಯಾಗಿ ಹರಿದುಬರುವುವು. ಅವುಗಳ ವಿಚಾರ ವಿಮರ್ಶೆಯನ್ನು ಮಾಡಲುದ್ಯೋಗಿಸಿದಷ್ಟೂ ಅದು ನಿಷ್ಫಲವೆಂದೆನ್ನಿಸುವುದು. ಯಾವುದೋಒಂದು ವ್ಯಕ್ತಿ ಇನ್ನೊಂದು ವ್ಯಕ್ತಿಯ ಜೀವನದಲ್ಲಿ ಈರೀತಿ ಬೆರೆತುಹೋದೀತೆಂಬುದು ನಂಬಲಸಾಧ್ಯವಾಗಿತ್ತು. ಅದರ ಕಾರಣವೇನೇ ಇರಲಿ ಲಲಿತೆ ಅವನ ಜೀವನದಲ್ಲಿ ಸೇರಿಹೋಗಿದ್ದಳು. ಅವಳನ್ನು ಮರೆಯುವುದೇ ಅಸಾಧ್ಯವಾಗಿತ್ತು.

ಇಷ್ಟಾದರೂ ಲಲಿತೆಯ ವಿಷಯ ತಿಳಿಯಲು ಅವನಿಗೆ ಏನೂ ಆಸಕ್ತಿಯಿರಲಿಲ್ಲ. ಅವನ ಪಾಲಿಗೆ ಲಲಿತೆಯ ಭೌತಿಕ ಶರೀರ ಇಲ್ಲದಂತೆ. ಅವಳು ಇನ್ನೊಬ್ಬರ ಕೈ ಹಿಡಿದಂದಿನಿಂದ ಅವಳ ಮುಂದಿನ ಜೀವನಕ್ಕೂ ಅವನಿಗೂ ಏನೇನೂ ಸಂಬಂಧವಿಲ್ಲ. ಅದೇ ಅವಳ ಕೊನೆ. ಅವನ ಪ್ರಪಂಚದಿಂದವಳ ನಿರ್ಗಮನ. ಅವನ ಭಾವ ಪ್ರಪಂಚದ ಲಲಿತೆಯೇ ನಿಜವಾದ ಅಸ್ತಿತ್ವವುಳ್ಳವಳು. ಇನ್ನೊಬ್ಬಳು ಅವಳ ಛಾಯೆ ಮಾತ್ರ—ಆ ನಿಜವಾದ ಲಲಿತೆಯ ಪಾತ್ರದ ನಟಿಮಾತ್ರ. ಆದ್ದರಿಂದ ಅವಳ ವಿಚಾರ ತಿಳಿಯುವ ಗೊಡವೆಗೇ ಅವನು ಹೋಗಲಿಲ್ಲ.

ಅವನಣ್ಣ 'ನವರಾತ್ರಿಯಲ್ಲಿ ಎರಡುದಿನ ನಿಂತುಹೋಗು. ನವರಾತ್ರಿಗೆ ನೀನು ಬರದೆ ಎಷ್ಟೋವರ್ಷಗಳಾಗಿವೆ. ಬಂದವನು ಹಾಗೆಯೇ ಏಕೆ ಹೋಗುತ್ತೀಯೆ?' ಎಂದರು

ಅದೂ ಸರಿ. ಎಲ್ಲೋ ಹುಡುಗನಾಗಿದ್ದಾಗ ಅವನು ನವರಾತ್ರಿಯ ಉತ್ಸವ ನೋಡಿದ್ದ. ಆಕಾಲ ಒಂದು ಹಬ್ಬವಿದ್ದಂತೆ ವಾತಾವರಣದಲ್ಲಿಯೇ ಒಂದು ದೈವಿಕತೆ ತುಂಬಿದಂತಿರುತ್ತಿತ್ತು. ಆಗ ಪ್ರತಿಯೊಬ್ಬ ಎಳೆಯನೂ ತನ್ನಮೇಲೆ ಅಮಿತವಾದ ಜವಾಬ್ದಾರಿ ಹೊರಿಸಲ್ಪಟ್ಟಿದೆಯೆಂದು ತಿಳಿಯುತ್ತಿದ್ದ.

ಮೂಲಾನಕ್ಷತ್ರ. ವೀಣಾಪಾಣಿಯಾದ ಶಾರದೆ. ಮನಮೋಹಕವಾದ ಪಂಚಲೋಹದ ಮೂರ್ತಿ. ವಜ್ರದಕಿರೀಟ. ಪದ್ಮಾಸನಸ್ಥಿತೆಯಾದ ದೇವಿಯಕೈಯಲ್ಲಿ ಪಚ್ಚೆಯ ಪಂಚಪಾತ್ರೆ. ವರದ ಹಸ್ತ. ಅಂದು ದೇವಿಗೆ ಸಾಷ್ಟಾಂಗವೆರಗಿದರೇ ವಾಗ್ದೇವಿಯ ಕಟಾಕ್ಷ ತಮ್ಮಮೇಲೆ ಎಂದು ವಿದ್ಯಾರ್ಥಿಗಳು ನಂಬಿದ್ದರು.

ಎಲ್ಲರೂ ದೀಪಾರಾಧನೆಗೆ ಹೋಗಿದ್ದರು. ರಂಗಣ್ಣ ಮನೆಯ ಮುಂದಿನ ಕಿರುಜಗುಲಿಯಲ್ಲಿ ಕುಳಿತಿದ್ದ. ಚಂದ್ರು ತಮ್ಮ ಮನೆಯ ಕಡೆಯೇ ಬರುತ್ತಿದ್ದ. ಲಲಿತೆಯ ಕೆಳೆತನ ಬೆಳೆಯುತ್ತಿದ್ದಾಗ ಚಂದ್ರುವೂ ರಂಗಣ್ಣನಿಗೆ ಪ್ರಿಯನಾಗಿದ್ದ. ಆದರೆ ಅವನ ವಿಷಯ ರಂಗಣ್ಣನ ಮನಸ್ಸಿನಲ್ಲಿ ಸುಳಿದಿರಲಿಲ್ಲ. ಇಂದು ಅವನು ಬಂದು,

'ಭಾವ' ಎಂದ.

'ಏನಯ್ಯ. ಚಂದ್ರು ಚನ್ನಾಗಿದ್ದೀಯಾ?'

'ಅಕ್ಕ ನಿಮ್ಮನ್ನು ಸ್ವಲ್ಪ ಬರಹೇಳಿದ್ದಾಳೆ.' ಅತ್ತಿಂದಿತ್ತ ನೋಡುತ್ತಾ ಚಂದ್ರು ಹೇಳಿದ— ಯಾರೂ ಇಲ್ಲದ್ದನ್ನು ಖಂಡಿತ ಮಾಡಿಕೊಂಡು. ರಂಗಣ್ಣ ಅಪ್ರತಿಭನಾದ. ಲಲಿತೆ ಇಲ್ಲಿದ್ದಾಳೆಯೆ? ಏತಕ್ಕೆ ಬರಹೇಳಿದ್ದಾಳೆ? ಹೋಗುವುದು ಸೂಕ್ತವೋ ಅಲ್ಲವೋ? ಅದೂ ಈ ಹೊತ್ತಿನಲ್ಲಿ! ಯಾರಾದರೂ ಕಂಡರೆ ಏನೆಂದಾರು? ಇದರಿಂದ ಲಲಿತೆಗೆ ಅಮಂಗಳವಾದರೆ! ಆದರೆ ಲಲಿತೆ ದುಡುಕುವ ಹುಡುಗಿಯಲ್ಲ. ಅವಳ ಕರೆಯನ್ನು ಮನ್ನಿಸಲೇಬೇಕು.

'ಬರ್ತೀರಾ ಭಾವ?'

ರಂಗಣ್ಣ ಅವನನ್ನು ಹಿಂಬಾಲಿಸಿದ.

ನಡುಮನೆಯಲ್ಲಿ ಚಾಪೆ ಹಾಸಿತ್ತು. ಗೋಡೆಯಲ್ಲಿ ಒಂದು ಲ್ಯಾಂಪು ಮಂದ ಪ್ರಕಾಶವನ್ನು ಬೀರುತ್ತಿತ್ತು. ಮನೆಯೆಲ್ಲಾ ನಿಶ್ಶಬ್ದವಾಗಿತ್ತು. ಎಲ್ಲರೂ ದೀಪಾರಾಧನೆಗೆ ಹೋಗಿದ್ದರು. ಬಾಗಿಲಲ್ಲಿಯೇ ಲಲಿತೆ ಕಾದುನಿಂತಿದ್ದಳು. ಇವರು ಬರುವುದನ್ನು ನೋಡಿ ಮೆಲ್ಲನಲ್ಲಿಂದ ಸರಿದು ಒಳಬಾಗಿಲ ಮರೆಯಲ್ಲಿ ನಿಂತಳು.

ರಂಗಣ್ಣ ಹೋಗಿ ಚಾಪೆಯಮೇಲೆ ಕುಳಿತ. ಸ್ವಲ್ಪಹೊತ್ತು ಮೌನವೇ ಮನೆಯಲ್ಲಿ ತುಂಬಿತ್ತು. ಈ ಮೌನವನ್ನು ಬೇಧಿಸಿ ನಡುಕದ ಧ್ವನಿ ಬಾಗಿಲ ಸಂದಿನಿಂದ ಕೇಳಿಸಿತು

'ಆರೋಗ್ಯವಾಗಿದ್ದೀರಾ ಭಾವ?'

ಈ ಆರ್ತಧ್ವನಿ ಅವನಲ್ಲಿದ್ದ ಸಂಕೋಚವನ್ನು ದೂರಮಾಡಿತು.

'ಹೂಂ' ನೀನು ಚನ್ನಾಗಿದ್ದೀಯಾ ಅಮ್ಮ?'

ಅಮ್ಮ ಎನ್ನಬೇಕಾದರೆ ನಾಲಿಗೆ ಎದುರಾಡಿತು.

'ಹೂಂ'

ಸ್ವಲ್ಪಹೊತ್ತು ನೀರವ.

'ನಿಮ್ಮೊಡನೆ ಸ್ವಲ್ಪಮಾತಾಡಬೇಕಿತ್ತು. ಹೇಳಿಕಳಿಸಿದೆ. ಬೇಸರವಿಲ್ಲವಷ್ಟೆ?'

ಅದೇಕೆ ಹಾಗೆಮಾತು? ಏನಾಗಬೇಕು ನಿನ್ನಿಂದ?

ಲಲಿತೆ ಕೋಣೆಯ ಹೊರಗೆ ಬಂದಳು. ರಂಗಣ್ಣನೆದುರು ಗೋಡೆಗೆ ಆತುಕೊಂಡುನಿಂತಳು. ರಂಗಣ್ಣ ಒಂದುಕ್ಷಣ ಅವಳನ್ನು ಆಪಾದ ಮಸ್ತಕಪರ್ಯಂತ ನೋಡಿ ಬೆದರಿದ. ಏನಿದು ವೇಷ. ಹಣೆಯಲ್ಲಿ ಕುಂಕುಮವಿಲ್ಲ. ಕೈಯಲ್ಲಿ ಬಳೆ ಯಿಲ್ಲ. ಬತ್ತಿ ಬಾಡಿಹೋದ ಶರೀರ. ಎಂತಹ ಸರ್ವನಾಶ! ಅಷ್ಟುಬೇಗನೇ ಅವಳ ಸೌಖ್ಯಲತೆ ಬಾಡಿಹೋಯಿತೇನು?

ಬಹು ಕಷ್ಟದಿಂದ ಲಲಿತೆ ಹೇಳಿದಳು.

'ಭಾವ, ಪ್ರಪಂಚದಲ್ಲಿ ನನಗೆ ನೀವೊಬ್ಬರೇ ಬಂಧುಗಳು. ನನಗ್ಯಾರೂ ದಿಕ್ಕಿಲ್ಲ ಎಲ್ಲರೂ ನನ್ನ ಕೈಬಿಟ್ಟರು. ಈಗ ನೀವೇ ನನ್ನನ್ನು ಕಾಪಾಡಬೇಕು.'

'ಕೊನೆಗೂ ಈ ಗತಿಯಾಯಿತೇ ಲಲಿತ'

'ಜೋಯಿಸರ ಮಾತು ನಿಜವಾಯಿತು. ಅದಕ್ಕೇ ನಾನು ಹಾಗೆ ಹೇಳಿದೆ ಆದರೆ ಇದ್ದಷ್ಟರಲ್ಲಿ ಒಂದೇ ಸಮಾಧಾನ. ನಾನು ನಿಮ್ಮನ್ನು ಕೊನೆಗಾಣಿಸಲಿಲ್ಲವಲ್ಲ ಎಂದು. ನಾನು ನಿಮ್ಮಲ್ಲಿ ತಪ್ಪುಮಾಡಿರಬಹುದು. ಆದರೆ ನಿಮ್ಮ ಮನಸ್ಸು ದೊಡ್ಡದು. ನನಗೆ ನೀವೇಗತಿ.'

'..................................'

'ಭಾವ. ನನ್ನ ಕುಂಕುಮ ಅಳಿಸಿಹೋಯಿತು. ಅವರಿಂದ ನನಗೆ ದುಃಖವಾಗಲಿಲ್ಲ. ಅವಿದ್ದರೆ ಎಷ್ಟು ಪ್ರಯೋಜನವಿತ್ತೋ ಇಲ್ಲದಿದ್ದರೂ ಅಷ್ಟೆ ಆಗಿತ್ತು. ಆದರೆ ಅದಕ್ಕಿಂತಮಿಗಿಲಾಗಿ ನಾನೀಗ ಎಲ್ಲರಿಗೂ ಹೊರೆಯಾಗಿದ್ದೇನೆ. ನನಗೆ ಪ್ರಪಂಚಬೇಡವಾಗಿದೆ. ಆದರೆ ಸಾಯುವುದಕ್ಕೆ ಇಷ್ಟವಿಲ್ಲ.

ಲಲಿತೆ ಕುಳಿತುಬಿಟ್ಟಳು ದುಃಖೋದ್ವೇಗದಿಂದ ದೇಹ ಕಂಪಿಸುತ್ತಿತ್ತು,

‘ ಲಲಿತಾ. ನಿನ್ನ ಗಂಡನ ಮನೆಯ ಆಸ್ತಿಯೇನೂ ಇಲ್ಲವೆ ? ಅವರು ಸ್ವಲ್ಪ ನೆಮ್ಮದಿವಂತರೆಂದು ಕೇಳಿದ್ದೆ’

‘ ಭಾವ. ಅಲ್ಲಿ ಆಸ್ತಿ ಇದ್ದರೂ ಒಂದೆ, ಇಲ್ಲದಿದ್ದರೂ ಒಂದೆ. ಅದು ನನಗೆ ಬೇಡ’

‘ ಅದಕ್ಕೆ ಏನಾದರೂ ಪ್ರಯತ್ನ ಮಾಡಲುಬರುತ್ತವೆ’

‘ ಅದಲ್ಲ ಭಾವ. ಅದು ನನಗೇಬೇಡವಾಗಿದೆ’

‘ ಅದೇಕೆ ಲಲಿತ’ ?

‘ ಭಾವ. ಹೇಳಲು ನಾಚಿಕೆಯಾಗುತ್ತದೆ. ಪ್ರಾಣಕ್ಕಿಂತ ಹೆಚ್ಚಾದ ಮಾನ ನನಗೆ ಅಲ್ಲಿ ಕಳೆದುಹೋಯಿತು. ಅಲ್ಲಿಯ ಮಾತೇಕೆ ನನಗಿನ್ನು ? ’

ರಂಗಣ್ಣನಿಗೆ ಯಾವುದೂ ಅರ್ಥವಾಗಲೊಲ್ಲದು. ಆದರೆ ಆ ಅಪ್ರಿಯ ಸಮಾಚಾರವನ್ನು ಹೇಗೆತಾನೇ ಬಿಡಿಸಿ ಕೇಳಿಯಾನು ?

‘ ನಾನೇನು ಮಾಡಲಿ ಲಲಿತ? ಹೇಳು. ನನ್ನಿಂದಾದಷ್ಟುಮಾಡುತ್ತೇನೆ?’

ಭಾವ. ನನ್ನನ್ನು ನಿಮ್ಮೊಡನೆ ಕರೆದುಕೊಂಡು ಹೋಗಿಬಿಡಿ. ನನ್ನ ಜೀವನಕ್ಕೆ ಏನಾದರೂ ಮಾರ್ಗ ಕಲ್ಪಿಸಿಕೊಡಿ. ಅಲ್ಲಿಯ ಹೆಂಗಸರು ಸ್ವತಂತ್ರವಾಗಿ ಜೀವಿಸುತ್ತಾರೆಂದು ನೀವೇ ಹೇಳುತ್ತಿದ್ದಿರಿ. ನನಗೇನಾದರೂ ದಾರಿ ತೋರಿಸಿ. ಸಾಯುವವರೆಗೆ ನಿಮ್ಮ ಹೆಸರು ಹೇಳಿಕೊಂಡು ಜೀವಿಸುತ್ತೇನೆ ’

ರಂಗಣ್ಣನಿಗೆ ಏನು ಉತ್ತರಹೇಳಲೂ ತೋಚದು. ಲಲಿತೆ ದುಃಖೋದ್ವೇಗದಿಂದ ಹಾಗೆ ಹೇಳುತ್ತಾಳೋ ಇಲ್ಲ ನಿಜಕ್ಕೂ ಅದನ್ನು ಅಪೇಕ್ಷಿಸಿದ್ದಾಳೋ ತಿಳಿಯದು. ತಾನು ಅವಳಿಗೆ ಆಶ್ರಯ ಕಲ್ಪಿಸಿಕೊಟ್ಟೇನೇ ? ಅದು ತನ್ನಿಂದಾದೀತೇ ! ಮನಸ್ಸಿನ ಒಂದು ಧ್ವನಿ ‘ ನಿನಗೆ ಪ್ರಾಣಪ್ರಿಯಳಾದ ಈ ಅಬಲೆ ನಿನ್ನನ್ನಾಶ್ರಯಿಸಿ ಬಂದಿದ್ದಾಳೆ. ಆಗಲಿ ಎನ್ನು. ಯಾವುದನ್ನೂ ಹಿಂದುಮುಂದ ಯೋಚಿಸಿ ನೋಡಬೇಡ. ಇಬ್ಬರು ವ್ಯಕ್ತಿಗಳ ಸುಖ ಎಲ್ಲ ನೀತಿನಿಯಮಗಳಿಗೂ ಮಿಗಿಲಾದುದು’ ಎಂದು ಹುರಿದುಂಬಿಸುತ್ತಿದೆ. ಕಲುಷಿತವಾದ ಜಗತ್ತನ್ನು ನೋಡಿ

ಮೂಡಿದ ಇನ್ನೊಂದು ಧ್ವನಿ ' ಇದಷ್ಟುಸುಲಭವಲ್ಲ. ಬಹಳಗಹನವಾದ, ಜಟಿಲ ವಾದ ಸಮಸ್ಯೆಗಳನೇಕವಿವೆ ಇದರಲ್ಲಿ. ಸ್ವಲ್ಪನಿಧಾನಿಸು' ಎನ್ನುತ್ತಿದೆ. ಮನಸ್ಸು ಇಭ್ಭಾಗವಾಗಿದೆ.

ಲಲಿತೆ ಇದನ್ನೂಹಿಸಬಲ್ಲಳು. ರಂಗಣ್ಣನ ಮನಸ್ಸನ್ನು ತಿಳಿಯಬಲ್ಲಳು. ' ಭಾವ. ನಿಮ್ಮನ್ನು ಈ ಕೂಡಲೇ ಅಭಯಕೊಡಿ ಎಂದು ನಾನೊತ್ತಾಯಪಡಿ ಸುವುದಿಲ್ಲ. ನಿಮ್ಮಶ್ರೇಯಸ್ಸನ್ನೇ ನಾನು ಯಾವಾಗಲೂ ಬಯಸಿದ್ದೇನೆ. ನಿಮಗೆ ತೊಂದರೆಯಾಗುವುದಾದರೆ ಬೇಡ. ಯೋಚಿಸಿನೋಡಿ. ನಿಮ್ಮೊಡನೆ ನಾನು ಎಲ್ಲಿಗಾದರೂ ಬರುತ್ತೇನೆ. ನನಗೆ ಯಾವ ಅಂಜಿಕೆಯೂ ಇಲ್ಲ. ನೀವೇ ನನ್ನ ಸರ್ವಸ್ವ.'

ಹೆಣ್ಣು ಇಷ್ಟು ನಿರ್ಭೀತಳಾಗಿ ಸಿದ್ಧಳಿದ್ದಾಗ, ಗಂಡು ಏನುಮಾಡಲಿ ಎಂದು ಗುಣಾಕಾರ ಹಾಕುತ್ತಿತ್ತು. ಘೂ ಇಲ್ಲಸಲ್ಲದ ವಿಷಯಗಳಿಗೆ ಬೆದರಿದ ಅವರ ಬಾಳೇ ! ಮನೆಗೆ ಬಂದೊಡನೆ ಅತ್ತಿಗೆ ಕೇಳಿದಳು.

' ಎಲ್ಲಿ ಹೋಗಿದ್ದೆ ರಂಗಣ್ಣ ?'

' ಎಲ್ಲಿಯೂ ಇಲ್ಲ. ಸುಮ್ಮನೆ ಹೀಗೇ ಹೋಗಿದ್ದೆ'

' ಸುಳ್ಳ್ಯಯಾಕೆ ಹೇಳುತ್ತೀ.? ಲಲಿತೆಯನ್ನು ನೋಡುವುದಕ್ಕೆ ಹೋಗಿರ ಲಿಲ್ಲವೆ ?

' ಇರಬಹುದು. ಅದರಿಂದೇನು ಪ್ರಮಾದ?' ರಂಗಣ್ಣನಿಗೂ ಸ್ವಲ್ಪ ಬೇಸರವಾಗಿತ್ತು.

' ಪ್ರಮಾದ ಅಂದರೆ ಪ್ರಮಾದ. ಇಲ್ಲ ಎಂದರೆ ಏನೂ ಇಲ್ಲ. ಏನು ಹೇಳಿದಳು ?'

' ಏನಿಲ್ಲ. ಸ್ವಲ್ಪ ತನ್ನ ಸುಖದುಃಖ ಹೇಳಿಕೊಂಡಳು'

ದುಃಖಕ್ಕೆ ಅವಳಿಗೇನಾಗಿದೆಯಂತೆ ?'

' ಏನು ಅತ್ತಿಗೆ ಏನೂ ಆಗಲಿಲ್ಲವೆ ಅವಳಿಗೆ '

‘ಅಯ್ಯೋ ಪೆದ್ದ ನಿನ್ನಂತಹ ಹುಡುಗರನ್ನು ಮರುಳುಗೊಳಿಸುವ ವಿದ್ಯೆ ಈ ಹುಡುಗಿಯರಿಗೆ ಬೇಕಷ್ಟುಗೊತ್ತಿದೆ. ನಿನಗೆ ತಲೆಸವರಿದಳು ಅನ್ನು.’

‘ಅತ್ತಿಗೆ, ನಿನ್ನಮಾತು ನನಗೆ ಸರಿಬರುವುದಿಲ್ಲ. ನಿನ್ನ ಮನಸ್ಸು ಕಲ್ಲಿಗಿಂತ ಕಠಿಣ ಎಂದು ತೋರುತ್ತದೆ. ಪಾಪ ಅವಳು ! ಇನ್ನೂ ವರ್ಷ ಹದಿನಾರಿಲ್ಲ, ಸರ್ವಸುಖವನ್ನೂ ಕಳೆದುಕೊಂಡ ಆ ಅಭಾಗಿನಿಗೆ ನಿನ್ನಿಂದ ಒಂದು ಒಳ್ಳೆ ಮಾತು ಹೊರಡಬಾರದೇ ?

‘ನೀನು ಪೂರ್ತಿ ಅವಳ ಬಲೆಗೆ ಬಿದ್ದಿರುವೆ. ಅವಳಿಗೆ ನನ್ನಂತಹಳ ಒಳ್ಳೆಯ ಮಾತು ಏತಕ್ಕೆ ? ಯಾರ ಒಳ್ಳೆಯಮಾತೂ ಇಲ್ಲದೆ ಅವಳು ಬದುಕಿಯಾಳು. ಹಾಗೆ ಜನರ ಮಾತು ಅವಳಿಗೆ ಬೆಲೆಯಾಗಿದ್ದರೆ, ಮಾವನಮನೆಯಲ್ಲಿ ಅಷ್ಟೇಕೆ ರಣರಂಪ ಮಾಡಿ ಓಡಿಬರುತ್ತಿದ್ದಳು ? ’

‘ಏನು ರಣರಂಪ? ’

‘ಅದೇ ನಾನು ಹೇಳುವುದು. ನಿನಗೇನೂ ತಿಳಿಯದು ಎಂತ. ಇಷ್ಟು ನಾಲ್ಕುದಿನಗಳಲ್ಲಿ ಇವಳ ಕೆಟ್ಟಚಾಳಿ ಗಂಡನ ಮನೆಯವರಿಗೆಲ್ಲಾ ತಿಳಿದು ಸಗರಣವಾಗಿ ಮನೆಯನ್ನು ಬಿಡಿಸಿ ಓಡಿಸಿದರು–ಗಂಡನಮನೆಯವರು. ಅದೇಕೊರಗಿನಲ್ಲಿಯೇ ಗಂಡ ಸಹ ಪ್ರಾಣಬಿಟ್ಟ. ಇವಳ ಅಪರಂಜಿ ಗುಣ ಊರಿಗೆಲ್ಲಾ ತಿಳಿದು ಜನರಿಗೆ ಮುಖ ತೋರಿಸುವ ಶಕ್ತಿಯಿಲ್ಲ. ಈಗ ನೀನು ಹೊಸಬ. ಹೇಗೂ ನಿನ್ನನ್ನು ಮರುಳುಗೊಳಿಸಿ ಇಲ್ಲಿಂದ ಪಾರಾಗೋಣ. ಅಂತ.’

‘ಅತ್ತಿಗೆ, ಸುಮ್ಮನೆ ಆಕೆಯನ್ನು ದೂಷಿಸಿ ಪಾಪ ಏಕೆ ಕಟ್ಟಿಕೊಳ್ಳುತ್ತೀಯೆ? ಆಕೆನಿನ್ನ ಗಂಟೇನು ತಿಂದಿದ್ದಾಳೆ ?’

ನನ್ನ ಗಂಟು ತಿಂದಿದ್ದಲ್ಲ ರಂಗಣ್ಣ. ಆಕೆ ಹೇಳುತ್ತಿದ್ದಳಂತೆ, ಭಾವ ಬರಲಿ ನನ್ನನ್ನೆಲ್ಲಿಯಾದರೂ ಒಂದು ಆಶ್ರಮವನ್ನೋ, ಸಮಾಜವನ್ನೋ ಕರೆದುಕೊಂಡು ಹೋಗಿ ಸೇರಿಸುತ್ತಾರೆ ಅಂತ. ಆ ಬಜಾರಿ ಧೈರ್ಯ ನೋಡಿ ನಾನು ಹೇಳಿದೆ ಅಷ್ಟೆ. ಎರಡು ಮನೆತನಗಳ ಹೆಸರು ಕೆಸರಿನಲ್ಲಿ ಅದ್ದಿದುದಾಯಿತು. ಇನ್ನು ಇದೊಂದು ಬಾಕಿ

ಇದೆ, ಅವಳು ಹುಟ್ಟಿದ್ದಕ್ಕೆ. ರಂಗಣ್ಣ ಯಾವಳೋ ಹಾದರಗಿತ್ತಿಯನ್ನು ಕಟ್ಟಿಕೊಂಡುಹೋದ ಎಂದು ಹೊಸಹಳ್ಳಿಯ ಮನೆತನದ ಮುಖಕ್ಕೆ ಮಸಿ ಬಳಿದರೆ ಅವಳ ಜನ್ಮ ಸಾರ್ಥಕವಾಯಿತು.'

'ನೀವೆಲ್ಲಾ ಸಾವಿರಮಾತು ಹೇಳಿ ಅತ್ತಿಗೆ. ನಾನೇನೂ ಮಗುವಲ್ಲ. ಆ ಅಸಹಾಯಕಳಾದ ಹುಡುಗಿಯನ್ನು ಇಲ್ಲಿಯ ನರರಾಕ್ಷಸರ ಕೈಯಿಂದ ತಪ್ಪಿಸುವುದು ನನ್ನ ಕರ್ತವ್ಯ. ಊರೆಲ್ಲಾ ಹುಚ್ಚೆದ್ದು ಕುಣಿಯಲಿ, ಅದರಿಂದೇನೂ ಬಾಧಕವಿಲ್ಲ. ನಿನ್ನೆ ನನ್ನ ಮನಸ್ಸಿನಲ್ಲಿ ಅನುಮಾನವಿತ್ತು. ಈಗೇನೂ ಇಲ್ಲ. ನಿಶ್ಚಯಕ್ಕೆ ಬಂದೆ. ನಿನ್ನ ಮಾತಿನಿಂದ ಲಲಿತ ಎಂತಹ ನರಕದಲ್ಲಿ ಬೇಯುತ್ತಿದ್ದಾಳೆಂದು ತಿಳಿಯಿತು.

'ಸರಿ. ಹಾಗೇ ಆಗಲಿ. ರಂಗಣ್ಣ. ನಾನು ಹೇಳಿದ್ದೆಲ್ಲಾ ಸುಳ್ಳು ಲಲಿತೆ ಸಾವಿತ್ರಿ ಅರುಂಧತಿಯರಿಗಿಂತ ಮಿಗಿಲಾದ ಪತಿವ್ರತೆ. ಅವಳ ಗಂಡ ನನ್ನ ಏಕೆ ಕೊಂದನೋ ಗೊತ್ತಿಲ್ಲ. ನೀನು ಅವಶ್ಯವಾಗಿ ಅವಳನ್ನು ಕರೆದು ಕೊಂಡುಹೋಗು. ಬೇಕಾದರೆ ಪುನರ್ವಿವಾಹ ಮಾಡಿಕೋ. ನಿನ್ನನ್ನು ಕಟ್ಟಿಕೊಂಡರೆ ತನ್ನ ಆಟಕ್ಕೆ ತೊಂದರೆಯಾದೀತೆಂದು ಅಂದು ಆಕೆ ಒಪ್ಪಲಿಲ್ಲ. ಈಗ ನೀನೇ ಅದಕ್ಕೆ ಸಮ್ಮತಿಪಟ್ಟು ಕರೆದುಕೋ. ಆದರೆ ಇವನ್ನೆಲ್ಲಾ ನಿನ್ನ ಅಮ್ಮನಿಗೆ ಹೇಳು. ಅತ್ತೆ ಕೇಳಿ ಹಾಲುಕುಡಿಯಲಿ. ಇಂತಹ ಅಪೂರ್ವಮಗನನ್ನು ಕಂಡು ಸಂತೋಷಪಡಲಿ. ಥೂ. ರಂಗಣ್ಣಾ. ಅತ್ತೆ ಇವನ್ನು ಕೇಳಿ ಪ್ರಾಣದಿಂದಿರುತ್ತಾರೆಯೇನು ? ಒಂದು ಹೆಣ್ಣಿಗೋಸ್ಕರ ತಾಯ ಕೊಲ್ಲುವುದಿದ್ದರೆ ಅವಶ್ಯವಾಗಿ ಕೊಲ್ಲು ನಿನಗೆ ಸದ್ಗತಿದೊರೆಯಲಿ.

ರಂಗಣ್ಣನ ಮನಸ್ಸಿನಲ್ಲಿ ಒಂದೊಂದು ಶಬ್ದಗಳೂ ಗುಂಡಿನ ಶಬ್ದದಂತೆ. ಮೊರೆದುವು. ಲಲಿತ ಹಾದರಗಿತ್ತಿ ! ಪುನರ್ವಿವಾಹ ! ತಾಯಿಯ ಕೊಲೆ. !

'ಅತ್ತಿಗೆ-ನನ್ನ ಕೊಂದುಬಿಡು. ನಿನಗೆ ತೃಪ್ತಿಯಾಗುತ್ತದೆ.'

# ೧೭

ಮನೆಯಲ್ಲಿ ತಂದೆಹೇಳಿದರು.

‘ ರಂಗೂ. ಹೊನ್ನಹಳ್ಳಿಯವರು ಇನ್ನುತಡೆಯುವುದಿಲ್ಲ. ಈ ವರ್ಷ ಅವರು ಮದುವೆಮಾಡಲೇಬೇಕು. ಅವರಿಗೆ ಯಾವುದಾದರೂ ಖಂಡಿತ ಉತ್ತರ ಹೇಳಬೇಕು. ರಂಗಣ್ಣಯಾವುದನ್ನೂ ಹೇಳಲಿಲ್ಲ.

‘ ಈ ಮೂರುವರ್ಷ ನಮ್ಮನ್ನು ನಂಬಿಯೇ ಹುಡುಗಿಮದುವೆ ಮಾಡ ದೇ ಇದ್ದಾರೆ. ಈವರ್ಷ ನಾವು ಅವರಿಗೆ ಖಂಡಿತಹೇಳದಿದ್ದರೆ ಅವರು ಬೇರೆ ನೋಡಿ ಕೊಳ್ಳುತ್ತಾರೆ ’ ನೋಡು. ಅದಕ್ಕೆತನಗೇಕೆ ಒತ್ತಾಯ ? ಅವರೆ ತಂದೆಗೆ ಹಾಗೆ ಹೇಳಲಿಲ್ಲ. ಮೊದಲೊಮ್ಮೆ ಯೋಚನೆಮಾಡಬೇಕಿತ್ತು.

ಇಂದವನು ಪುನಃ ಗುಡ್ಡದಮೇಲಿನ ಸಂಪಿಗೆಯ ಕಟ್ಟೆಗೆ ಹೋದ. ಹಿಂದೆ ಅದೇ ಸ್ಥಳದಲ್ಲಿಯೇ ಕುಳಿತು ಈ ವಿಷಯ ಯೋಚಿಸಿದ್ದ. ಅಂದು ‘ ಲಲಿತ ಒಪ್ಪಿ ದರೆ ತಂದೆಗೆ ಅಸಮಾಧಾನವಾದರೂ ಚಿಂತೆಯಿಲ್ಲ. ತನ್ನ ಸುಖಕ್ಕೆ ಎಳ್ಳುನೀರು ಬಿಡಬಾರದು’ ಎಂಬ ನಿರ್ಣಯಕ್ಕೆ ಬಂದು ಶೃಂಗೇರಿಗೆ ಹೋಗಿದ್ದ. ಆದರೆ ಇಂದು? ಲಲಿತೆ ಏನಾಗಿ ಹೋಗಿದ್ದಾಳೆ? ಕಳಂಕಚರಿತೆಯೆಂದು ಮೂರೀಕರಿಸಲ್ಪಟ್ಟಿದ್ದಾಳೆ. ಅವಳೊಡನೆ ಮಾತಾಡುವವರ ಮೇಲೆ ಸಹ ಸಂಶಯದ ಕಣ್ಣು ಜನರದು.

ಈಗ ತನ್ನ ಮದುವೆಯ ವಿಷಯದಲ್ಲಿ ನಿಶ್ಚಯಕ್ಕೆ ಬರಬೇಕಲ್ಲದೆ. ಲಲಿತೆಯ ಬೇಡಿಕೆಯ ವಿಷಯದಲ್ಲಿಯೂ ನಿರ್ಣಯಕ್ಕೆ ಬರಬೇಕು. ತಾನು ಮದು ವೆಗೊಪ್ಪದೆ, ಲಲಿತೆಯನ್ನು ಕರೆದುಕೊಂಡುಹೋದರೆ ಅವ್ವನೇನೆಂದು ತಿಳಿದಾಳು? ಅತ್ತಿಗೆಯಮಾತು ನಿಜವಾದೀತು ? ಅದುಸಾಧ್ಯವಿಲ್ಲ. ಅಲ್ಲದೇ ಅವಳನ್ನೆಲ್ಲಿ ಇಟ್ಟು ಕೊಳ್ಳಲಿ ? ಯಾವ ವಿಧವಾಶ್ರಮವೂ ಅನಾದದಿಂದ ದೂರವಾಗಿಲ್ಲ. ಅದಕ್ಕೆ ಮದುವೆ ಗೊಪ್ಪುವುದೇ ಒಳ್ಳಿತು. ಅದರಿಂದ ಎರಡೂ ಆದಂತಾಗುವುದು. ಮುಂದೆ ಅನುಕೂಲವಾದರೆ ಅವಳನ್ನು ಕರೆದುಕೊಂಡು ಹೋಗಬಹುದು. ಈಗ ಉಯ್ಯಾಲೆಯಾಡುತ್ತಿದ್ದ ಮನಸ್ಸು ಸ್ಥಿಮಿತಕ್ಕೆ ಬರಲು ಒಂದುಮಾರ್ಗ. ರಂಗಣ್ಣ ನಿಗೆ ಆತ್ಮವಂಚನೆ ಈಗ ಬೇಕಿತ್ತು. ಅತ್ತಿಗೆಹೇಳಿದ ಪ್ರಸಂಗವಾದ ಸೂಚನೆ

ಮನಸ್ಸಿನಲ್ಲಿ ಕಿರುಕುಳಕೊಡುತ್ತಿತ್ತು. ಇದನ್ನು ಸ್ತಬ್ಧಮಾಡಲು ಮದುವೆ ಅವಶ್ಯಕ ವಿತ್ತು. ಪ್ರವಾಹಪತಿತನಾದ ಅವನಿಗೆ ಈಗ ಒಂದು ಆಸರೆ ಬೇಕಿತ್ತು. ಅದೇ ವಿವಾಹ. ಅವನು ಲಲಿತೆಯ ಪ್ರೇಮಪ್ರವಾಹದ ಸುಳಿಯಲ್ಲಿ ಸಿಕ್ಕಿದ್ದಾನೆ. ಅದರಿಂದ ತಪ್ಪಿಸಿಕೊಳ್ಳಲೂ ಯತ್ನಿಸುತ್ತಿದ್ದಾನೆ.

ಇನ್ನೊಂದು ತನ್ನ ಆಸ್ತಿಯನ್ನು ಉಳಿಸುವುದು. ಈಗ ಕಾರ್ಖಾನೆಗೆ ಸೇರಿದಮೇಲೆ ಅವನಿಗೆ ಆತ್ಮಪ್ರತ್ಯಯ ಕಡಿಮೆಯಾಗಿದೆ. ದುಡಿದು ಆಸ್ತಿ ಪುನಃ ಸಂಪಾದಿಸಿಯೇನು ಎಂಬ ನಂಬಿಕೆ ಇಲ್ಲವಾಗಿದೆ. ಆದ್ದರಿಂದ ಈ ಮದುವೆ ತಾನು ಮನೆತನಕ್ಕಾಗಿ ಮಾಡುವ ಒಂದು ತ್ಯಾಗ. ತಾನು ಇನ್ನೇನೂಮಾಡಲಾರೆ. ಇದೊಂದಾದರೂ ತನ್ನ ಕೈಯಿಂದ ನಡೆಯಲಿ. ತನ್ನವರು ಸಂತೋಷಪಡಲಿ ಎಂದು ಹೆಮ್ಮೆ. ತಂದೆ ಮತ್ತೊಮ್ಮೆ ಕೇಳಿದಾಗ

' ನೀವೆಲ್ಲಾ ನಿರ್ಧಾರಕ್ಕೆ ಬಂದಿರುವಾಗ ನನ್ನ ಕೇಳುವುದೇನಿದೆ? ' ಎಂದು ಬಿಟ್ಟ. ತಂದೆಗೆ ಅಷ್ಟರಿಂದಲೇ ತೃಪ್ತಿಯಾಯಿತು. ಇಷ್ಟುಮಾತು ಹೇಳಿ ತಾನು ದೊಡ್ಡ ತೊಡಕಿನಿಂದ ಪಾರಾದೆ ಎಂದು ನಿಟ್ಟುಸಿರುಬಿಟ್ಟ ರಂಗಣ್ಣ. ಇನ್ನು ಲಲಿತೆಯ ವಿಷಯದಲ್ಲಿ ಒಂದುತರಹ ನಿರ್ಲಿಪ್ತಭಾವನೆಯಿಂದಿರಬಹುದು.

ತಾಯಿ ಕೇಳಿದರು ' ರಂಗಣ್ಣ. ಅವರ ಹಟಕ್ಕೆ ಬೆದರಿ ಒಪ್ಪಬೇಡ. ಇನ್ನೊಮ್ಮೆ ನೋಡು ' ಎಂದರು

' ನಾನೊಪ್ಪಿದ್ದರೆ !'

' ಒಪ್ಪದಿದ್ದವಳನ್ನು ಕಟ್ಟಿಕೊಂಡು ಒದ್ದಾಡಬೇಕಲ್ಲ. ಅಂತಹದೇನು ಬಂದಿರುವುದು. ಈಗ ?'

ತಾಯಿಗೆ ಮಗನಮನಸ್ಸು ಗೊತ್ತು. ಮಗ ಹೀನಾನೊಂದುಕೊಂಡಾನು ಎಂದು ಅವರು ಈರೀತಿ ಧೈರ್ಯದ ಮಾತಾಡುತ್ತಾರೆ. ಅದರೆ ಅವರೂ ಏನೂಮಾಡ ಲಾರರು ಎಂದು ರಂಗಣ್ಣನಿಗೆ ಗೊತ್ತು. ಆದರೂ ತಾಯಿಗೆ ಪ್ರೀತಿಯಾಗಲೆಂದು

' ಅಮ್ಮಾ. ನೋಡಿಮಾಡುವುದೇನು ? ಮದುವೆಗೆಸಿದ್ಧನಾದ ಗಂಡಿಗೆ, ಮದುವೆಗೆ ನೆರೆದಿರುವ ಎಲ್ಲಾಹೆಣ್ಣುಗಳೂ–ಕುರುಡಿ, ಕುಂಟಿಯರಾಗದಿದ್ದರೆ ಸರಿ–

ಚನ್ನಾಗೇ ಕಾಣಿಸುತ್ತಾರೆ. ಚನ್ನಾಗಿ ಶೃಂಗಾರ ಮಾಡಿಕೊಂಡು ಬಂದಿರುವ ಹೆಣ್ಣಲ್ಲಿ ತ ಒಂದು ಐದು ನಿಮಿಷ ಏನುನೋಡ ಬಹುದು ? ಗುಣನೋಡಬಹುದೇ, ವಿದ್ಯೆ ನೋಡಬಹುದೇ? ರೂಪು ನೋಡಬಹುದೇ? ಬರಿಮುಖ ನೋಡಿದ್ದರಿಂದ ರೂಪು ತಿಳಿದಂತಾಗುವುದಿಲ್ಲ. ಒಂದು ಎಷ್ಟೊ ವ್ಯಾಪಾರ ಮಾಡಬೇಕಾದರೂ ಇನ್ನೂ ಹೆಚ್ಚು ಕಾಲ ಹಿಡಿಯುತ್ತದೆ. ಆದ್ದರಿಂದ ಈ ಹೆಣ್ಣುನೋಡುವುದು ಎನ್ನುವುದು ಒಂದ ಭ್ರಮೆ. ಮದುವೆ ಸುಖವಾಗುವುದು ಅವರವರ ಅದೃಷ್ಟಬಲ'/ ಎಂದ. ತಾಯಿ ಅವನೊಡನೆ ಹೆಚ್ಚು ಚರ್ಚಿಸಲಿಲ್ಲ.

ಹೊನ್ನಹಳ್ಳಿಯ ಕಾಮಾಕ್ಷಿ ರಂಗಣ್ಣನ ಅರ್ಧಾಂಗಿಯಾದಳು ಅವಳನ್ನು ಮದುವೆಯಾಗಿ ಪತಿತೆಯಾದ ಲಲಿತೆಯನ್ನು ಮರೆಯುತ್ತೇನೆ, ಎಂದುಕೊಂಡ ರಂಗಣ್ಣ. ಆದರೆ ಮದುವೆಯಮಾರನೇದಿನ ಒಂದು ಸುದ್ದಿ ರಂಗಣ್ಣನ ಕಿವಿಗೆ ಬಿತ್ತು. ಕಾಮಾಕ್ಷಿಯದು ಮೂಲಾನಕ್ಷತ್ರ. ಇಲ್ಲದಿದ್ದರೆ ಹೊನ್ನಹಳ್ಳಿಯಂತಹ ಸಿರಿವಂತರು ಹೊಸಹಳ್ಳಿಗೇಕೆ ಹೆಣ್ಣುಕೊಡುತ್ತಾರೆ.? ಈ ಮೂರುವರ್ಷ ಅವರೇಕೆ ಇವನನ್ನೇ ಕಾದಿರುತ್ತಾರೆ? ನರಸಿಂಹಯ್ಯ ದುಡ್ಡಿನಾಸೆಗೋಸ್ಕರ ಮೂಲಾನಕ್ಷತ್ರದ ಸೊಸೆಯನ್ನು ತಂದುಕೊಂಡರು. ಅತ್ತೆಗೆಕೇಡು, ಮಾವನಿಗೆಕೇಡು. ? ಅದೂ ಮುಖ್ಯವಾಗಿ ಅತ್ತೆಗಂತೆ? ರಂಗಣ್ಣ ತಾಯಿಯನ್ನು ಕೇಳಿದ.

'ಇದೇಕೆ ಹೀಗೆ ಮಾಡಿದೆ ಅಮ್ಮ?'

'ಏನು ರಂಗೂ?'

'ನಿನ್ನ ಸೊಸೆಯದು ಮೂಲಾನಕ್ಷತ್ರವಂತೆ.

'ಅವನ್ನೆಲ್ಲಾ ನೀನು ನಂಬುತ್ತೀಯಾ?'

'ನಂಬಿಕೆಯೋ, ಅಪನಂಬಿಕೆಯೋ, ಅದನ್ನೆಲ್ಲಾ ಪರೀಕ್ಷಿಸುತ್ತ ಹೋಗುವುದಕ್ಕೇನು ನಾಸಿಕವುದು? ನೀನು ಮೊದಲೇ ಹೇಳಿದ್ದರೆ!'

'ಹೋಗೋ ಹುಚ್ಚ. ಮೊದಲೇ ಹೇಳಿದ್ದರೆ ನೀನೊಪ್ಪುತ್ತಿರಲಿಲ್ಲ ಅಂತ ಗೊತ್ತು. ಈಗೇನು ಪ್ರಮಾದವಾಗಿ ಹೋಯಿತು ? ನನಗೆ ಕೆಡುಕು ಅಂತಲ್ಲೇನು? ಏನೂ ಆಗುವುದಿಲ್ಲ. ಹೆದರಬೇಡ. ಒಂದುವೇಳೆ ಆದರೆ ಏನಂತೆ? ನೀವೆಲ್ಲಾ ಚನ್ನಾಗಿರುವಾಗ ಒಂದು ಬೊಟ್ಟು ಕುಂಕುಮ ಹಣೆಯಮೇಲೆ ಇರುವಂತೆ

ಕಣ್ಣುಮುಚ್ಚುವುದಕ್ಕಿಂತ ನನಗಿನ್ನೇನು ಬೇಕು? ಇದಕ್ಕೋಸ್ಕರ ಇನ್ನು ಗಲಾಟೆ ಎಬ್ಬಿಸಬೇಡ '

ಅಬ್ಬಾ ! ತಾಯಿಯ ಕರುಳೇ ! ಹಿಂದಿನಕಾಲದವಳಾದ ತಾಯಿಗೆ ಇಂತ ಹುದರಲ್ಲಿ ನಂಬಿಕೆ ಇಲ್ಲವೆ ? ಅದೆಂತಹ ತ್ಯಾಗಬುದ್ಧಿಯಿಂದ ತಾಯಿ ಇದಕ್ಕೆ ಒಪ್ಪಿಗೆ ಯಿತ್ತಿದ್ದಾಳೆ ? ಅದೇಕೋ ತಾನುಮುಟ್ಟಿದ್ದೆಲ್ಲಾ ಜೇಳಾಗಿ ಕೈಕುಟುಕುತ್ತದೆ.

ರಂಗಣ್ಣ ಲಲಿತೆಯನ್ನು ಮತ್ತೊಮ್ಮೆ ನೋಡಲಿಲ್ಲ. ಅವಳವಿಷಯ ವಾಗಿ ಅವನು ಯಾವನಿರ್ಧಾರಕ್ಕೂ ಬಂದಿರಲಿಲ್ಲ.

## ೧೭

ಮೂರುದಿಕ್ಕುಗಳಲ್ಲಿಯೂ ಎತ್ತರವಾದ ಪರ್ವತದಸಾಲುಗಳು. ಆ ಪರ್ವತಗಳ ತಳದಲ್ಲಿ ಮೂರುದಿಕ್ಕಿಗೆ ಅಡಿಕೆಯತೋಟ. ನಡುವೆ ಎತ್ತರದ ಭಾಗದಲ್ಲಿ ಭವ್ಯವಾದ ಮಹಡಿಯಮನೆ. ಮನೆಯಮುಂದೆ ವಿಶಾಲವಾದ ಅಂಗಳ. ಅಂಗಳದ ತಗ್ಗಿನಲ್ಲಿ ದೃಷ್ಟಿಹೋಗುವಷ್ಟುದೂರವೂ ಗದ್ದೆಯಕೋಣು. ತೋಟಗಳ ಪಕ್ಕದಲ್ಲಿ ಒಂದು ಗಪ್ಪೆಯ ಕೋಣನ್ನು ಬೇಧಿಸಿ ಹರಿಯುತ್ತಿರುವ ತೊರೆ. ಈ ಕೋಟೆ ಯಂತಹ ಜಾಗಕ್ಕೆ ಸುಬ್ಬಾಶಾಸ್ತ್ರಿಗಳು ಒಡೆಯರು. ಅವರಲ್ಲಿಗೆ ಪಾಳಯಗಾರರು. ಅಲ್ಲಿ ಅವರುಹೇಳಿದ್ದೇ ಆಟ. ಮಾಡಿದ್ದೇ ಮಾಟ. ಈ ರಾಯನ ಕೋಣೆಯಲ್ಲಿ ಹಿಂದೆ ಎಂತೆಂತಹ ಕೆಲಸಗಳೋ ಜರುಗಿಹೋಗಿವೆ. ಆ ಪುರಾತನವಾದ ಆಸ್ತಿಯೊಂದಿಗೆ ಆ ಭಯಂಕರ ಕೃತ್ಯಗಳೂ ತಲೆಯಿಂದ ತಲೆಗೆ ವಹಿಸಿಕೊಡಲ್ಪಟ್ಟಿವೆ. ಸಬ್ಬಾಶಾಸ್ತ್ರಿ ಗಳಿಗೆ ಆಗದವರು ರಾಯನಕೋಣೆಗೆ ಹೋಗುವುದೆಂದರೆ ನಡುಗಿಹೋಗುತ್ತಾರೆ.

ಸುಬ್ಬಾಶಾಸ್ತ್ರಿಗಳಿಗೆ ಹತ್ತಿರಹತ್ತಿರ ನಲವತ್ತು ವಯಸ್ಸು. ಆದರೆ ನಮೂಹ ರೆಯದ ಮೈಕಟ್ಟು ಅವರಿಗಿದೆ. ಆ ತುಂಬಿದ ಮನೆಯಲ್ಲಿ ಅವರಿಗೆ ಪ್ರತ್ಯೇಕ ಉಟೋ ಪಚಾರ. ಪಂಕ್ತಿಯಲ್ಲಿ ಎಷ್ಟೇಜನ ಕುಳಿತಿರಲಿ, ಅವರಿಗೆ ಮಾತ್ರ ಘಮಘಮಿಸುವ ಜೀರಿಗೇ ಸಣ್ಣ ಅಕ್ಕಿಯ ಮಲ್ಲಿಗೆ ಹೂವಿನಂತಹ ಅನ್ನ. ಬೆಣ್ಣೆಕಾಯಿಸಿದ ತುಪ್ಪ, ಕನೆಮೊಸರು. ಕುಡಿಯಲು, ಏಲಕ್ಕಿ ಬಾದಾಮಿ, ಕೇಸರಿ ಹಾಕಿದ ಕೆನೆಹಾಲು. ಅವರ ಶರೀರೋಪಚಾರಕ್ಕೇ ಒಬ್ಬ ಮಲೆಯಾಳಿಪಂಡಿತ. ಶಾಸ್ತ್ರಿಗಳಿಗೆ ವಿಧವಿಧ

ಪಾದ ಲೇಹ್ಯ, ಆಸವಗಳನ್ನು ತಯಾರಿಸುವುದು, ಸುಗಂಧತೈಲಗಳಿಂದ ಗಂಟೆ ಗಟ್ಟಲೆ ಅವರ ಶರೀರವನ್ನು ಮರ್ದಿಸಿ, ಸುಸ್ತಾಗುವತನಕ ನೀರುಹನಿಸಿ, ಮೃದು ಪಾದ ಹಾಸಿಗೆಯಮೇಲೆ ಅವರನ್ನು ಪವಡಿಸುವುದು–ಇಷ್ಟೇ ಅವನ ಕೆಲಸ.

ಇಂತಹ ಸುಖದಲ್ಲಿ ಬೆಳೆದ ಶಾಸ್ತ್ರಿಗಳ ದೇಹಕಾಂತಿ ಉಜ್ವಲವಾಗಿತ್ತು. ಇವರೊಂದಿಗೆ ಸುಖವನ್ನನುಭವಿಸುವ ಭಾಗ್ಯವಿಲ್ಲದೆ ಅವರ ಧರ್ಮಪತ್ನಿ ಇಬ್ಬರು ಮಕ್ಕಳನ್ನು ಬಿಟ್ಟು ಶಾಸ್ತ್ರಿಗಳ ಇಪ್ಪತ್ತೆಂಟನೆಯ ವಯಸ್ಸಿನಲ್ಲಿಯೇ ಕಾಲವಾಗಿದ್ದರು. ಅವರು ಪುನಃ ಮದುವೆ ಮಾಡಿಕೊಳ್ಳಬಹುದಿತ್ತು. ಆದರೆ 'ನನಗೇಕಿನ್ನು ಮದುವೆ? ವಂಶಾಭಿವೃದ್ಧಿಗೆ ಎರಡುಮಕ್ಕಳಿವೆ' ಎಂದು ಅವರು ಅದಕ್ಕೆ ಸಮ್ಮತಿಸಲಿಲ್ಲ. ಈ ಏಕಪತ್ನೀವ್ರತ ಅವರ ತೂಕವನ್ನು ಹೆಚ್ಚಿಸಿತ್ತು.

ಇಂತಹ ಶಾಸ್ತ್ರಿಗಳಲ್ಲಿ ಎರಡು ಪರಸ್ಪರ ವಿರುದ್ಧವಾದ ಗುಣಗಳು ಮನೆ ಮಾಡಿಕೊಂಡಿದ್ದುವು. ದೇವರು, ಧರ್ಮದಲ್ಲಿ ಅಪಾರವಾದ ಭಕ್ತಿ—ಕೋರ್ಟು ವ್ಯವಹಾರಗಳಲ್ಲಿ ವಿಪರೀತ ಆಸಕ್ತಿ. ಇವೆರಡರಲ್ಲಿ ಸಾಮರಸ್ಯವನ್ನು ಕಂಡಿರುವುದೇ ಅವರ ಜೀವನದ ಗುಟ್ಟು, ಎಂದು ಜನರಾಡಿಕೊಳ್ಳುತ್ತಿದ್ದರು

ಇಂತಹ ಸಂಪನ್ನರ ವಿಷಯದಲ್ಲಿಯೂ ಜನರ ನಾಲಿಗೆ ಸುಮ್ಮನಿರುತ್ತಿರ ಲಿಲ್ಲ. ಯಾವ ಹೆಂಗಸನ್ನೇ ಆಗಲಿ ನಿಂದಿಸಬೇಕಾಗಿದ್ದರೆ 'ಇವಳಿಗಿನ್ನು ರಾಯನ ಕೋಣೆಯ ಶಾಸ್ತ್ರಿಗಳೇ ಗತಿ.' ಎಂದು ಜನರಾಡಿಕೊಳ್ಳುತ್ತಿದ್ದರು. ಆದರೆ ಅದು ಅವರ ಹಿಂದಿನಿಂದ ಆಡುವಮಾತು. ಶಾಸ್ತ್ರಿಗಳನ್ನು ಎದುರಿಸಿ ನಿಲ್ಲುವ ಧೈರ್ಯ ಯಾರಿಗೂ ಇಲ್ಲ. ರಂಗಣ್ಣನ ಮದುವೆಯಾದ ವರ್ಷ ಜ್ಯೇಷ್ಠದಲ್ಲಿ ಶ್ರೀನಿವಾಸಯ್ಯ ನವರು ತೀರಿಕೊಂಡರು. ಅವರು ಸಾಯುವಾಗ ಅವರಿಗಿದ್ದ ಆಸ್ತಿ ಅಭಿಮಾನವೊಂದೇ. ಕೊನೆಯುಸಿರು ಎಳೆಯುವಾಗ ಲಲಿತೆಯನ್ನು ಕರೆದು,

'ಲಲಿತಾ ನಿನಗಿನ್ನು ದೇವರೇಗತಿ. ನಿನ್ನ ಜೀವನವನ್ನು ನನ್ನ ಹಟಕ್ಕೆ ಬಲಿಗೊಟ್ಟೆ. ನನಗೇನು ಶಿಕ್ಷೆ ಕಾದಿದೆಯೋ, ಎಂದು ಪರಿತಪಿಸಿದರು. ಲಲಿತ 'ಏನೂ ಯೋಚನೆ ಮಾಡಬೇಡಿ ತಾತ, ಅದು ನನ್ನ ಪೂರ್ವಾರ್ಜಿತಕರ್ಮ. ಅದಕ್ಕೆ ಯಾರೂ ಹೊಣೆಯಲ್ಲ' ಎಂದು ಸಮಾಧಾನ ಹೇಳಿದಳು. ಅವರಿಗೆ ಅದರಿಂದ ಸಮಾಧಾನವಾಯಿತೋ ಇಲ್ಲವೋ, ಪ್ರಾಣ ತೊಳಲಿ ತೊಳಲಿ ಆ ಗೂಡುಬಿಟ್ಟು ಹೊರಟುಹೋಯಿತು.

ಈಗ ವಿಶಾಲವಾದ ಪ್ರಪಂಚದಲ್ಲಿ ನಿರ್ಗತಿಕರಾದ ಮೂರು ಪ್ರಾಣಿಗಳು, ಗೌರಮ್ಮ, ಲಲಿತ, ಚಂದ್ರ.

ಮಲೆನಾಡ ಮಳೆ ಪ್ರಾರಂಭವಾಯಿತು. ಅದಕ್ಕೆ ನಿಮಿಷಮಾತ್ರವೂ ಬಿಡುವಿಲ್ಲ. ತುಂಗೆಯು ಮೈ ತುಂಬಿಕೊಂಡಿತು. ಕೇಸರಿಯ ಬಣ್ಣದ ನೀರು. ದಡಗಳನ್ನು ಮೀರಿ ದೊಡ್ಡಬೀದಿಯ ಮನೆಗಳ ಹಿತ್ತಿಲ ಬಾಗಿಲ ಹೊಸ್ತಿಲನ್ನು ತೊಳೆದು ಹರಿಯಿತು. ಜನರ್‍ಯಾರೂ ಮನೆಯನ್ನು ಬಿಟ್ಟು ಹೊರಡರು, ಈ ಸಮಯದಲ್ಲಿ ಮಾಡಲು ಕೆಲಸವೇನೂ ಸಿಗದು. ಈ ಮೂವರಿಗೆ ಹೊಟ್ಟೆ ತುಂಬಿಸಿಕೊಳ್ಳುವ ಸಮಸ್ಯೆ ಅಗಾಧವಾಗಿ ಮುಂದೆಬಂದು ನಿಂತಿದೆ.

ಮನೆಯಲ್ಲಿದ್ದ ಮಾರಬಹುದಾದ ಪದಾರ್ಥಗಳನ್ನೆಲ್ಲಾ ಮಾರಿಯಾಯಿತು. ಕೇಳಬಾರದವರನ್ನು ಕೇಳಿ ಸಾಲ ತಂದು ತಿಂದಾಯಿತು. ಇನ್ನು ಮಾರಲು ಏನೂ ಇಲ್ಲ. ಸಾಲಕೊಡುವವರೂ ಉಳಿದಿಲ್ಲ.

ಈ ಪರಿಸ್ಥಿತಿಯಲ್ಲಿಯೂ ಲಲಿತೆಗೆ ತನ್ನ ಗಂಡನ ಮನೆಯ ಸಹಾಯವನ್ನು ಪಡೆಯುವ ಮನಸ್ಸಿಲ್ಲ. ಇದ್ದ ಏಕಮಾತ್ರ ಆಶೆಯು ರಂಗಣ್ಣನದು. ಆದರೆ ಅವಳ ಅಂದಿನ ಪ್ರಾರ್ಥನೆಗೆ ಉತ್ತರ ಕೊಡದೆ ಅವನು ಮದುವೆ ಮಾಡಿಕೊಂಡು ಹೊರಟು ಹೋಗಿದ್ದಾನೆ. ಆದರೆ ಲಲಿತೆ ಅವನನ್ನು ದೂರುವುದಿಲ್ಲ. ನಿಜಕ್ಕೂ ಅವನು ತನ್ನನ್ನು ಕಟ್ಟಿಕೊಂಡೇಕೆ ಒದ್ದಾಡಬೇಕು ? ಆ ರೀತಿಯೂ ಅವಳು ಭಾವಿಸುವುದಿಲ್ಲ. ರಂಗಣ್ಣನಿಗೆ ಏನು ಅನಾನುಕೂಲವಿದೆಯೋ. ಅದಕ್ಕೇ ಅವನು ತನ್ನ ಬೇಡಿಕೆ ಮನ್ನಿಸಲಿಲ್ಲ ಎಂದು ಭಾವಿಸುತ್ತಾಳೆ. ಆದರೆ ಈ ವಿಷಮಸ್ಥಿತಿಯಲ್ಲಿಯೂ ಅವನಿಗೆ ಬರೆದು ಸಹಾಯಬೇಡುವ ಧೈರ್ಯ ಅವಳಿಗಿಲ್ಲ. ಇಂತಹ ಸಮಯದಲ್ಲಿ ಗೌರಮ್ಮನಿಗೆ ರಾಯನ ಕೋಣೆಯಿಂದ ಕರೆಬಂದಿತು. ಸುಬ್ಬಾಶಾಸ್ತ್ರಿಗಳ ಮಗಳ ಬಾಣಂತಿತನದ ಆರೈಕೆಗೆ ಅವರನ್ನು ಕರೆದಿದ್ದರು. ಈ ಸಮಯದಲ್ಲಿ ಅದನ್ನು ಒಪ್ಪಿಕೊಳ್ಳದೆ ವಿಧಿಯಿರಲಿಲ್ಲ. ಆದರೆ ಶೃಂಗೇರಿಯಲ್ಲಿ ಲಲಿತ, ಚಂದ್ರ ಇಬ್ಬರೇ ಇರಲಾರರು. ಮೊದಲನೆಯದಾಗಿ ಮನೆಗೆ ಬಾಡಿಗೆ ತೆರಬೇಕು. ರಾಯನಕೋಣೆಗೆ ಹೋಗುವ ಮೊದಲಲ್ಲಿ ದುಡ್ಡು ಕೇಳುವಹಾಗಿಲ್ಲ. ಅಲ್ಲದೆ ಅವರಿಬ್ಬರೇ ಇರುವ ಊರು ಅಲ್ಲ ಅದು. ಹಿರಿಯರು ಮಾಡಿಟ್ಟ ಆಸ್ತಿ ಕೈಗೆ ಬಂದಿದ್ದು ಮಾಡಲು ಏನೂ ಕೆಲಸವಿಲ್ಲದ, ಸೊಗಸುಗಾರರು ಅನೇಕರು ನೆರೆಹೊರೆಯಲ್ಲಿ. ಆದ್ದರಿಂದ ಅವರು ಮೂವರೂ ರಾಯನ

ಕೋಣೆಗೆ ಹೋಗುವುದೆಂದು ನಿಶ್ಚಯವಾಯಿತು. ಅದಕ್ಕೆ ಶಾಸ್ತ್ರಿಗಳು ಬೇಡವೆನ್ನ ಲಿಲ್ಲ. ಹಳ್ಳಿಯ ಮನೆಯಲ್ಲಿ ಜನ ಹೆಚ್ಚು ಎಂದುಂಟೇ ?

ರೊಟ್ಟಿಜಾರಿ ತುಪ್ಪಕ್ಕೆ ಬಿದ್ದಂತಾಯಿತು, ಎಂದರು ಇದನ್ನು ಕೇಳಿದ ಕುಹಕಿಗಳು. ರಾಯನ ಕೋಣೆಯಲ್ಲಿ ಗೌರಮ್ಮನಿಗೆ ಬಾಣಂತಿತನದ ಆರೈಕೆಯೇ ಸರಿಯಾಗುತ್ತಿತ್ತು. ಲಲಿತೆಗೆ ಮಾಡಲು ನಿರ್ದಿಷ್ಟವಾದ ಕೆಲಸನೇನೂ ಇರಲಿಲ್ಲ. ಅವಳೂ ಮನೆಗೆಲಸಗಳಲ್ಲಿ ನೆರವಾಗುತ್ತಿದ್ದಳು. ಚಂದ್ರು ಚಿಕ್ಕವನಾದರೂ ಅವನಿಗೆ ವಿಶೇಷ ಕೆಲಸವಿತ್ತು. ಮನೆಯಾಳುಗಳಿಗೆ ಅಡಿಕೆಲೆ ಕೊಡುವುದು, ಅಕ್ಕಿ ಅಳೆಯು ವುದು, ಬಂದವರಿಗೆ ಕಾಫಿ ತಂದುಕೊಡುವುದು, ಸ್ನಾನಕ್ಕೆ ಅಣಿಮಾಡುವುದು. ಚಿಕ್ಕ ಹುಡುಗರಿಗೆ ಕೆಲಸಕ್ಕೆ ಬರಗಾಲವೆ !

ವಿಶಾಲವಾದ ದೇವರಕೋಣೆ. ಮಧ್ಯೆ ಬೆಳ್ಳಿಯ ಭವ್ಯವಾದ ಮಂದಾಸನ. ಮಂದಾಸನದ ತುಂಬ ಚಿನ್ನ, ಬೆಳ್ಳಿಯ ವಿಗ್ರಹಗಳು ಓರಣವಾಗಿಡಲ್ಪಟ್ಟಿವೆ. ಶಾಸ್ತ್ರಿಗಳು ಬೆಳ್ಳಿಯ ತಗಡು ಹೊದಿಸಿದ ಮಣೆಯಮೇಲೆ ಪದ್ಮಾಸನಹಾಕಿ ಕುಳಿತಿದ್ದಾರೆ. ಉಟ್ಟಿರುವುದು ರೇಷ್ಮೆಯಮಡಿ. ಮೈತುಂಬಾ ವಿಭೂತಿಯ-ಪಟ್ಟೆಗಳು. ಕೊರಳಲ್ಲಿ ಚಿನ್ನದ ಹೊದಿಕೆಯಿರುವ ರುದ್ರಾಕ್ಷಿಸರ. ಬೆರಳಲ್ಲಿ ಪಚ್ಚೆ, ವಜ್ರಗಳಿಂದ ಕಟ್ಟಿದ ಉಂಗುರ, ಗಂಭೀರವಾದ ಧ್ವನಿಯಲ್ಲಿ ಸೂಕ್ತಗಳನ್ನು ಹೇಳಿ ಸಾಲಿಗ್ರಾಮಶಿಲೆಗಳಿಗೆ ಅಭಿಷೇಕಮಾಡುತ್ತಿದ್ದಾರೆ. ಮೊದಲೇ ಸುಖವಾದ ಶಾರೀರ. ಜೊತೆಗೆ ಕ್ರಮಬದ್ಧವಾದ ವೇದಘೋಷದ ಅನ್ವಾದ್ಯಶವಾದ ಮೋಹಕತೆ. ಲಲಿತೆ ಯಾವುದೋ ಕೆಲಸಕ್ಕೆ ಆಕಡೆ ಸುಳಿದಾಗ ನೋಡಿದಳು. ಕೇಳಿದಳು. ನೋಡಿಕೇಳಿ ಮುಗ್ಧಳಾದಳು. ಶಾಸ್ತ್ರಿಗಳ ತೇಜಸ್ಸನ್ನು ಕಂಡು ಬೆರಗಾದಳು. ಅವರಲ್ಲಿ ಅಪಾರವಾದ ಗೌರವ ಅವಳ ಮನಸ್ಸಿನಲ್ಲಿ ಮೂಡಿತು ಅಂದಿನಿಂದ ಅವಳು ತಪ್ಪದೇ ದೇವರ ಪೂಜೆಯ ಹೊತ್ತಿನಲ್ಲಿ ದೇವರ ಕೋಣೆಯ ಹತ್ತಿರವೇ ಸುಳಿದಾಡುವಳು. ಯಾವುದಾದರೂ ಒಂದು ಕೆಲಸದ ನೆಪವನ್ನು ಹುಡುಕಿ ಅದನ್ನು ಮಾಡುತ್ತಿರುವಂತೆ ನಟಿಸಿ ಮನಸ್ಸನ್ನೆಲ್ಲಾ ದೇವರಮೇಲೆ, ಶಾಸ್ತ್ರಿಗಳಮೇಲೆ ಕೇಂದ್ರೀಕರಿಸುವಳು. ಇದರಿಂದ ಅವಳಿಗೆ ಶಾಸ್ತ್ರಿಗಳ ವಿಷಯದಲ್ಲಿ ಗೌರವದೊಡನೆ ವಿಶ್ವಾಸವೂ ಬೆಳೆದು ಬಂದಿತು

ಅವಳಿಗೆ ಮಾಡಲು ಏನೂ ಕೆಲಸ ನಿಷ್ಕರ್ಷೆಯಾಗಿರದಿದ್ದರೂ, ಒಂದು ಕ್ಷಣವೂ, ಬಿಡದೆ ಕೆಲಸಮಾಡುವಳು. ಉಂಡ ಊಟಕ್ಕೆ ಪ್ರತಿಯಾಗಿ ಅದಷ್ಟು ಕೆಲಸ ಮಾಡಬೇಕೆಂದು ಅವಳ ಬಯಕೆ. ರಾಯನ ಕೋಣೆಯ ಮನೆಯಲ್ಲಿ ಯಾವ

ಮರೆಯೂ ಇಲ್ಲ. ಮನೆಯಲ್ಲಿ ಯಾರು ಎಲ್ಲಿಬೇಕಾದರೂ ಸುತ್ತಿಬರಬಹುದು. ಆ ಮನೆಯ ವೈಭವವನ್ನು ಕಂಡು ಎಂತಹರೂ ಬೆರಗಾಗಬೇಕು. ಹೊಸಬರು ಬಂದರೆ ಮನೆಯಲ್ಲಿ ದಾರಿತಪ್ಪಬಹುದಾದಷ್ಟು ದೊಡ್ಡದಾದ ಮನೆ. ಹಳೆಯಕಾಲದ ಮನೆಯಾದರೂ ಪೆಟ್ಟಿಗೆಯಂತೆ ಭದ್ರವಾಗಿದೆ. ಮನೆ ತುಂಬ ಬೆಲೆಬಾಳುವ ಸಾಮಾನುಗಳು. ಅನರ್ಘ್ಯವಾದ ವಸ್ತ್ರ ಒಡವೆಗಳು. ವೈಭವ ಆಡಂಬರಗಳ ನೋಟದಲ್ಲಿ ಒಂದು ಆನಂದವಿದ್ದೇ ಇರುತ್ತದೆ. ಯಾರಾದರೆ ಏನು, ಬೆಟ್ಟ-ಕಾಡುಗಳನ್ನು ನೋಡಿದರೆ ಆಗುವಂತಹ ಸಂತೋಷ ಅದು, ಲಲಿತೆಯ ಮನಸ್ಸನ್ನು ಆಕರ್ಷಿಸಿತು ಈ ದೃಶ್ಯ.

ಒಂದುದಿನ ನಡುಮನೆ ಹಾದು ಬರುತ್ತಿದ್ದಾಗ ಅಕಸ್ಮಾತ್ ಶಾಸ್ತ್ರಿಗಳು ಎದುರಿಗೆ ಬಂದರು. ಇನ್ನೇನು ಮುಡುಗಬೇಕು, ಅಷ್ಟರಲ್ಲಿ ಲಲಿತೆ ಸಾವರಿಸಿಕೊಂಡು ಪಕ್ಕಕ್ಕೆ ಸರಿದಳು ಶಾಸ್ತ್ರಿಗಳು ಮುಂದೆ ಹೋಗಲಿಲ್ಲ. ಅಲ್ಲಿಯೇ ನಿಂತ. ಅವಳನ್ನು ನೋಡಿ ನಕ್ಕರು. ಅವಳಿಗೆ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಸ್ವಲ್ಪಗಾಬರಿಪಟ್ಟು ಅಲ್ಲಿಂದ ಹೊರಟುಹೋದಳು.

ನಿರಂತರವಾಗಿ ಸುರಿಯುತ್ತಿದ್ದ ಜಡಿಮಳೆ ನಿಂತು, ಮೋಡಗಳ ಬಿರುಕಿನಲ್ಲಿ ಸೂರ್ಯ ಇಣಿಕಿ ನೋಡುತ್ತಿದ್ದ. ಹಚ್ಚಹಸುರಿನ ಗದ್ದೆಯಮೇಲೆ ಬಿಸಿಲು ಬಿದ್ದು ಕುಣಿಯುತ್ತಿತ್ತು. ಒಗೆದ ಬಟ್ಟೆಗಳನ್ನು ಉಪ್ಪರಿಗೆಯಮೇಲೆ ಬಿಸಿಲು ಬೀಳುವ ಜಾಗದಲ್ಲಿ ಹರವಲು ಯಾರೋ ಲಲಿತೆಗೆ ಹೇಳಿದರು. ಲಲಿತೆ ಬಟ್ಟೆಗಳನ್ನು ತೆಗೆದುಕೊಂಡು ಬಂದಳು. ಅಲ್ಲಿಯೇ ಒಂದು ಪಕ್ಕದಲ್ಲಿ ಶಾಸ್ತ್ರಿಗಳ ದಿವಾಣಖಾನೆ ಬಾಗಿಲು ತೆಗೆದಿತ್ತು. ಲಲಿತೆಗೆ ಸ್ವಲ್ಪ ಸಂಕೋಚವಾಯಿತು. ಆದರೆ ಹಾಗೆಯೇ ಕೆಳಗೆ ಹೋಗುವುದು ಸರಿಯಿರಲಿಲ್ಲ. ಅಲ್ಲದೆ ಶಾಸ್ತ್ರಿಗಳು ಆರಾಮ ಕುರ್ಚಿಯಮೇಲೆ ಒರಗಿ ಭಾರತ ಓದುತ್ತಿದ್ದರು. ಸುಶ್ರಾವ್ಯವಾದ ಧ್ವನಿ. ಕೇಳಿದಷ್ಟೂ ಕೇಳಬೇಕೆನ್ನುವಂತಹ ಮಾಧುರ್ಯ; ಅವನ್ನೇ ಆಲೈಸುತ್ತ ಶಬ್ದವಿನಿತೂ ಆಗದಂತೆ ಮೆಲ್ಲನೆ ಬಟ್ಟೆಯನ್ನು ಒಣಹಾಕತೊಡಗಿದಳು.

ಸಂದರ್ಭ ದ್ರೌಪದೀ ವಸ್ತ್ರಾಪಹರಣ. ಕರುಣೆ ಉಕ್ಕಿ ಹರಿಯುವ ಸನ್ನಿವೇಶ ಶಕ್ತಿಸಂಪನ್ನೆಯಾದ, ಕಲಿಗಳೈವರಪತ್ನಿಯಾದ ದ್ರೌಪದಿಯೇ ಕಂಡಕಂಡವರನ್ನು ಕೈಮುಗಿದು 'ಮಾನವನ್ನುಳಿಸಿರಿ' ಎಂದುಬೇಡಿಕೊಳುವ ಶೋಚನೀಯ ಪರಿಸ್ಥಿತಿ. ಕರುಣರಸ ಉಕ್ಕಿಹರಿಯುತ್ತಿದೆ—ಕೇಳುತ್ತಕೇಳುತ್ತ ನಾರಣಪ್ಪನ ಭಾವವಾಹಿನಿಯಲ್ಲಿ ಲಲಿತೆ ಮೈಮರೆತಳು. ಕೊನೆಗೂ ಪರಮಾತ್ಮನೇ ರಕ್ಷಕನಾದ ಅವಳಿಗೆ. ತನ್ನ

ಜೀವನದಲ್ಲಿಯೂ ಅಂತಹ ಸಂದರ್ಭ ಒದಗಿತ್ತು. ಆದರೆ ಅಂದು ಆ ಸರ್ವಶಕ್ತ ತನ್ನ ಸಹಾಯಕ್ಕೆ ಬರಲಿಲ್ಲ. ಅಂತಹ ಭಕ್ತೆಯಾದ ದ್ರೌಪದಿ ಸಹ ಆತ್ಮಾಭಿಮಾನವನ್ನು ತೊರೆದು, ಆತ್ಮ ಸಮರ್ಪಣೆ ಮಾಡುವತನಕ ಅವನು ಬರಲಿಲ್ಲವಂತೆ! ತನ್ನಂತಹ ಮಾನವರಲ್ಲಿ ಎಷ್ಟು ದೌರ್ಬಲ್ಯವಿದೆಯೋ? ಅವಳಿಗೆ ಈ ಯೋಚನೆಯಲ್ಲಿ ಬಾಹ್ಯ ಜಗತ್ತಿನ ಪರಿವೆಯೇಇಲ್ಲ. ಬಟ್ಟೆ ಒಣಹಾಕಲು ಎತ್ತಿದ ಕೈ ಎತ್ತಿದಹಾಗೆಯೇ ಇದೆ. ಸರಿದ ಸೆರಗು ಗಾಳಿಗೆ ಅಲ್ಲಾಡುತ್ತಿದೆ. ಅರೆತೆರೆದ ಕಣ್ಣುಗಳು ಏನೋ ಅನಿರ್ವಚನೀಯ ಕನಸು ಕಾಣುತ್ತಿವೆ. ಎರಡು ಮುತ್ತಿನಂತಹ ಹನಿಗಳು ಕಣ್ಣಮೂಲೆಯಲ್ಲಿ ಹೊಳೆಯುತ್ತಿವೆ. ತುಸುವೇದನೆಯನ್ನು ವ್ಯಕ್ತಪಡಿಸುವ ಮುಖ ಮೋಹಕವಾಗಿದೆ.

ಯಾರೋ ಮೃದುವಾಗಿ 'ಲಲಿತ' ಎಂದು ಕರೆದರು.

ಲಲಿತೆ ಬೆಚ್ಚಿಬಿದ್ದು ಎಚ್ಚೆತ್ತಳು. ಎದುರಿನಲ್ಲಿ ಶಾಸ್ತ್ರಿಗಳು. ತೋಳವಮೂಲೆಯನ್ನೇ ನೆಟ್ಟದೃಷ್ಟಿಯಿಂದ ನೋಡುತ್ತ ನಿಂತಿದ್ದಾರೆ. ಲಲಿತೆಗೆ ವಿಪರೀತ ನಾಚಿಕೆಯಾಯಿತು. ಹೆದರಿಕೆಯೂ ಆಯಿತು. ಎದೆ ನಡುಗಿತು ಅವಳು ಕೆಳಗೆ ಹೋಗುವುದಕ್ಕೆ ಬಿಡದೆ ಶಾಸ್ತ್ರಿಗಳು ಅವಳ ಕೈಹಿಡಿದುಬಿಟ್ಟರು. ಆ ಛಳಿಯಲ್ಲಿಯೂ ಲಲಿತೆ ಬೆವೆತುಬಿಟ್ಟಳು.

'ಬಾ. ಒಳಗೆ ಹೋಗೋಣ'

ಪಿಸುಮಾತಿನಲ್ಲಿ ಶಾಸ್ತ್ರಿಗಳು ಕರೆದು ಕೈಹಿಡಿದು ಕೋಣೆಯಕಡೆಗೆ ಜಗ್ಗಿದರು ಲಲಿತೆಗೆ ಕೂಗಿಕೊಳ್ಳಲೂ ಚೈತನ್ಯವಿಲ್ಲ. ಕೂಗಿಕೊಳ್ಳುವ ಬಯಕೆಯೇನೋ ಇದೆ. ಅವಳ ಸರ್ವಶಕ್ತಿಯೂ ಶಾಸ್ತ್ರಿಗಳ ಸ್ವಾಧೀನವಾಗಿಹೋದಂತಿದೆ. ದೇಹ ಅವರ ದಾಸ್ಯವನ್ನು ಸ್ವೀಕರಿಸಿದೆ. ಮನಸ್ಸು 'ಎಚ್ಚರ, ಎಚ್ಚರ, ಜೋಕೆ! ಎಂದು ಚೀರುತ್ತಿದೆ. ತುಳಿದು ತಡೆದಿಟ್ಟಿದ್ದ ಕಾಮ ಹಾವಿನಂತೆ ಹೆಡೆಯೆತ್ತಿ, ಪೂರ್ತಿಕೆಯನ್ನು ಬಯಸುತ್ತಿದೆ. ಈ ಉತ್ಕಟವಾದ ಬಯಕೆಯ ಮುಂದೆ ಅವಳಾತ್ಮ ಅತಂತ್ರವಾಗಿದೆ. ಈ ಎಲ್ಲದರ ನಡುವೆ ದೇಹ ಯಾವುದೋ ಯಾತನಾಯುಕ್ತವಾದ ಸುಖವನ್ನನುಭವಿಸಿದಷ್ಟು ಸಾಲದು 'ಮುಂದೆ, ಮುಂದೆ' ಎಂದವಳನ್ನು ಮುಂದೆ ತಳ್ಳುತ್ತಿದೆ. ಈ ಸೆಳವಿಗೆ ಸಿಕ್ಕಿ ಅವಳು ಏನೂ ಮಾಡಲಾರಳು. ಆ ಅಬಲೆ ಅಸಹಾಯಳು. ಒಂದೇ ಹೆಜ್ಜೆ, ಕೋಣೆಯ ಹೊಸ್ತಿಲು ದಾಟಿಬಿಡು ಲಲಿತ! ಇನ್ನು

ನಿನಗೆ ಪ್ರಪಂಚದಲ್ಲಿ ನಿಸ್ತಾರವಿಲ್ಲ! ಲಲಿತೆ ಕೋಣೆಯ ಹೊಸ್ತಿಲು ದಾಟಲಿಲ್ಲ ಯಾವುದೋ ಶಕ್ತಿ ಅವಳನ್ನು ಹುರಿದುಂಬಿಸಿ ಶಾಸ್ತ್ರಿಗಳ ಕೈ ಕೊಡವಿ ಉಪ್ಪರಿಗೆ ಇಳಿದು ಓಡುವಂತೆ ಮಾಡಿತು. ಶಾಸ್ತ್ರಿಗಳು ಒಂದು ತೃಪ್ತಿಯ ನಗು ನಗುತ್ತಾ ಆಕೆಯ ಕಡೆಯೇ ನೋಡುತ್ತ ನಿಂತಿದ್ದರು.

ಇದಾಗಿ ಅನೇಕದಿನಗಳು ಕಳೆದಿವೆ. ಲಲಿತೆಯ ಚಿತ್ತಸ್ವಾಸ್ಥ್ಯ ಕಳೆದು ಹೋಗಿದೆ. ಆಕೆ ಆದಷ್ಟು ಮಟ್ಟಿಗೆ ತನ್ನಕೋಣೆಯಲ್ಲಿಯೇ ಹುದುಗಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಅವಳಿಗೀಗ ತನ್ನಲ್ಲಿ ನಂಬಿಕೆ ಸ್ವಲ್ಪವೂ ಇಲ್ಲ. ತನ್ನದೇಹ ಎಂದು ದ್ರೋಹಿಯಾಗುವುದೋ ಎಂದು ಅವಳು ಹೆದರುತ್ತಿದ್ದಾಳೆ. ಆದರೆ ಮನಸ್ಸು ಏನೇನೋ ಕುರಿತು ಯೋಚಿಸುತ್ತದೆ. ರಾತ್ರಿ ಏನೇನೋ ಕನಸು ಬೀಳುತ್ತಿದೆ. ಯಾವುದನ್ನು ಕಂಡು ಜಿಗುಪ್ಸೆಪಡುತ್ತಿದೆಯೋ ಅವಳ ಅಂತರಾತ್ಮ, ಅದನ್ನೇ ಮನಸ್ಸು ತಿರುಗಿ ತಿರುಗಿ ಯೋಚಿಸುತ್ತಿದೆ. ಅಂದುನೆಟ್ಟ ವಿಷವೃಕ್ಷದ ಅಂಕುರ ಇಂದು ಅನುಕೂಲವಾದ ವಾತಾವರಣಗಳೊದಗಿ, ಶಾಸ್ತ್ರಿಗಳಿಂದ ನೀರೆರೆಯಲ್ಪಟು ಮೊಳೆತು ಬೆಳೆಯುತ್ತಿದೆ.

ರಾತ್ರಿ ಯಾರೋ ಮೈ ಮುಟ್ಟಿದಂತಾಗಿ ಲಲಿತೆಗೆ ಎಚ್ಚರವಾಯಿತು. ಅವಳಿಗೆ ಯಾವುದೂ ತಿಳಿವಾಗುವುದರ ಮುನ್ನ ಅವಳನ್ನವರು ಅಪ್ಪಿಕೊಂಡು ಬಿಟ್ಟರು. ಮುಸುಕು ಮುಸುಕಾದ ಬೆಳಕಿನಲ್ಲಿ ಅವರು ಶಾಸ್ತ್ರಿಗಳೆಂಬುದು ಕಾಣುತ್ತಿದೆ. ಆದರವಳು ಕಣ್ಣು ತೆರೆದು ಅವರನ್ನು ನೋಡುವ ಅವಶ್ಯಕತೆಯಿಲ್ಲ. ಅವಳದೇಹದ ಪ್ರತಿಯೊಂದು ಅಂಗಾಂಗಗಳಿಗೂ ಆವರು ಶಾಸ್ತ್ರಿಗಳೇ ಎಂಬುದು ಗೊತ್ತಾಗಿ ಹೋಗಿದೆ. 'ಲಲಿತಾ. ನನ್ನ ಚಿನ್ನ' ಎಂಬ ಶಾಸ್ತ್ರಿಗಳ ಮಧುರವಾಣಿ ಅವಳ ಹೃದಯದ ತಂತಿಗಳನ್ನು ಮಿಾಟಿತು. ಅವಳದೇಹ ದ್ರೋಹಿಯಾಗಿ ಶಾಸ್ತ್ರಿಗಳಿಗೆ ಸ್ವಾಗತವನ್ನು ಬಯಸಿತು.

'ಹಾಳಾಗಿ ಹೋದೆಯಲ್ಲೇ' ಎಂದು ಶಪಿಸುತ್ತಾರೆ ಗೌರಮ್ಮ. ಮೌನವಾಗಿ ಮೂಲೆಸೇರಿ ಅಳುತ್ತಾಳೆ ಮಗಳು. ಇಲ್ಲಿಗೆ ಬರಬಾರದು ಎಂದವಳು ಅಂಗಲಾಚಿ ಕೇಳಿಕೊಂಡಳು, ತಾಯಿಯೇ ಬಂದಿದ್ದು. ಆದರೆ ಗಟ್ಟಿಯಾಗಿ ಜಗಳಸಹ ಆಡುವಂತಿಲ್ಲ, ಪರರಮನೆಯಲ್ಲಿ. ಮಗಳನ್ನು ಮನಃಪೂರ್ತಿಯಾಗಿ ಬೈದಹೊರತು ತಾಯಿಯ ಮನಸ್ಸು ತಣಿಯುವುದಿಲ್ಲ. ಅವರ ಮನಸ್ಸು ತಣಿದಹೊರತು ತಾಯಿಕರುಳು

ಸಹಾನುಭೂತಿ ತೋರಿಸುವುದಿಲ್ಲ. ಶಾಸ್ತ್ರಿಗಳು ಸಮಾಜನಿಂದೆಗೆ ಸಿದ್ಧವಿರಲಿಲ್ಲ. ಸಮಾಚಾರ ಮಠಪ ಕಿವಿಮುಟ್ಟೀತು ಎಂದು ಅವರಿಗೆ ಭಯ. ಮಲೆಯಾಳಿಪಂಡಿತ ಸಹಾಯಕ್ಕೆಬರಲಿಲ್ಲ. 'ಷಡಾನನ ಇದಕ್ಕೆ ಒಪ್ಪುವುದಿಲ್ಲ' ಎಂದುಖಂಡಿತವಾಗಿ ಹೇಳಿಬಿಟ್ಟ. ರಾಯನಕೋಣೆಯಲ್ಲಿ ಏನುಮಾಡಿದರೂ ಕೇಳುವವರಿಲ್ಲದಿದ್ದರೂ, ಈಯೊಂದು ಸಾರೆ ಮಾತ್ರ ಶಾಸ್ತ್ರಿಗಳ ಮನಸ್ಸು ಭಯಭೀತವಾಯಿತು. ಆದ್ದರಿಂದ ತಾಯಿಮಕ್ಕಳನ್ನು ಕರೆದುಕೊಂಡು ಬೆಂಗಳೂರಿಗೆ ಬಂದು ಬಿಟ್ಟರು. ಅಲ್ಲಿ ಒಂದು ಮನೆಮಾಡಿ ತಾಯಿಮಕ್ಕಳಿಗೆ ಸ್ವಲ್ಪ ಜೀವನಕ್ಕೆ ಹಣ ಒದಗಿಸಿ ಊರುಸೇರಿ ಬಿಟ್ಟರು. ರಾಯನಕೋಣೆಯ ಅಪಾರವಾದ ಅಸ್ತಿಯ ಆಡಳಿತದ ಸಮಾರಂಭದ ನಡುವೆ ಅವರಿಗೆ ಈ ಪಾಪಿಗಳ ನೆನಪು ಬರಲೇ ಇಲ್ಲ.

ಬೆಂಗಳೂರಿನ ಜನಸಮೂಹ ಈ ಮೂರುಪ್ರಾಣಿಗಳನ್ನು ತನ್ನಮಧ್ಯೆ ಸೇರಿಸಿಕೊಂಡಿತು. ರೈಲನ್ನೇಕಾಣದ ಈ ಹಳ್ಳಿಯವರಿಗೆ ಇಲ್ಲಿ ಎಲ್ಲವೂ ಹೊಸದು. ಶಾಸ್ತ್ರಿಗಳು ಕೊಟ್ಟದುಡ್ಡು ಮುಗಿಯುವುದಕ್ಕೆ ಹೆಚ್ಚುಹೊತ್ತುಹಿಡಿಯಲಿಲ್ಲ. ಗೌರಮ್ಮನಿಗಂತೂ ಕಣ್ಣುಕಟ್ಟಿ ಕಾಡಿಗೆಬಿಟ್ಟಂತಾಗಿತ್ತು. ಅವರಿಗೆ ಕೆಲಸಮಾಡಲೂ ಶಕ್ತಿಯಿರಲಿಲ್ಲ. ತಾಯಿ, ತಮ್ಮಂದಿರನ್ನು ಸಾಕುವ ಜವಾಬ್ದಾರಿ ಲಲಿತೆಯದೇ. ಆದರೆ ಅವಳೂ ಕೆಲಸಮಾಡುವಸ್ಥಿತಿಯಲ್ಲಿಲ್ಲ. ಅದಳ ಪಾಪ ಹೊಟ್ಟೆಯಲ್ಲಿ ಮಗುವಾಗಿ ಬೆಳೆಯುತ್ತಿದೆ. ಒಂದುದಿನ ತಳ್ಳುವುದೂ ಯುಗ ಮರಳಿದಂತೆ ಭಾಸವಾಗುತ್ತಿದೆ.

ಆ ಮೂವರು ಬಡಪಾಯಿಗಳ ಜೊತೆಗೆ, ಒಂದು ಬಡಕಲು ಕೂಸೂ ಬಂದು ಸೇರಿತು. ಆದರೆ ಆದಕ್ಕೆ ಆ ಸುಖ ಅನುಭವಿಸುವ ಭಾಗ್ಯವಿರಲಿಲ್ಲ. ಸ್ವಲ್ಪದಿನಗಳಲ್ಲಿಯೇ ಬಂದಲ್ಲಿಗೋ ಎಲ್ಲಿಗೋ ಹೊರಟುಹೋಯಿತು. ಮತ್ತೆ ಆ ಮೂವರೇ ಉಳಿದು ಕೊಂಡರು. ಅವರಜೊತೆಗೆ ಉಳಿದುಕೊಂಡುದು ಉರಿಯುತ್ತಿರುವ ದಾರಿದ್ರ್ಯ ಮಾತ್ರ.

ಮಾಡಬಾರದ ಕೆಲಸ ಮಾಡಿಯಾಯಿತು. ಕೇಳಬಾರದನುಡಿ ಕೇಳಿದ್ದಾಯಿತು. ಹೊಟ್ಟೆ ಬ್ರಹ್ಮನ ತೃಪ್ತಿಗೋಸ್ಕರ ಮನುಷ್ಯರಾಗಿಹುಟ್ಟಿ ಮರುಳಾಗಿ ಕುಣಿದದ್ದಾಯಿತು. ಕೊನೆಗೂ ನದಿ, ಸಾಗರದ ಮುಖವಾಗಿ ಹೊರಟಿತು. 'ಹುಟ್ಟಿಸಿದ ದೇವರು ಹುಲ್ಲುಮೇಯಿಸಲಿಕ್ಕಿಲ್ಲ' ಎಂದು ಯಾವ ಮೂರ್ಖಹೇಳಿದನೋ ಏನೋ.? ಆ ದೇವರು ಕಲ್ಲುಮೇಯಿಸಲಿಕ್ಕೂ ಸಿದ್ಧ ಎಂಬುದು ಹೊಳೆಯದ ಅವನೆಂತಹ

ಹುಚ್ಚನೋ! ಈ ಸಂಪತ್ಸಮೃದ್ಧವಾದ ದೇಶದಲ್ಲಿ ಲಲಿತೆ ಮೂರುಬಡಲು ತುಂಬಿಸಲು ಪ್ರಾಣಕ್ಕಿಂತ ಮಿಗಿಲಾದ. ಮಾನವನ್ನು ಮಾರಿಕೊಂಡಳು.

## ೧೮

ಕಾಮಾಕ್ಷಿ ದೊಡ್ಡವಳಾಗಿ, ಮಾವನವರಿಂದ ಪ್ರಸ್ತಮಾಡಿಕೊಂಡು ಹೋಗುವಂತೆ ಒತ್ತಾಯದ ಕಾಗದಗಳು ಒಂದರಮೇಲೊಂದು ಬರುತ್ತಿವೆ. ಮಲೆನಾಡಿನಲ್ಲಿ ಮೈನೆರೆದ ಹುಡುಗಿಯರು ಪ್ರಸ್ತವಾಗದೇ ತೌರುಮನೆಯಲ್ಲಿರುವುದು ಸಂಪ್ರದಾಯಕ್ಕೆ ವಿರುದ್ಧ. ತಾಯಿ ತಂದೆಗಳೂ ಅದೇ ಅಭಿಪ್ರಾಯವನ್ನು ಅನುಮೋದಿಸುತ್ತಾರೆ. ಅದರ ಖರ್ಚು ಗಂಡನಮನೆಯದೇ ಆಗಬೇಕು. ತೌರುಮನೆಯವರನ್ನೇ ಪ್ರಸ್ತಮಾಡಿಸಿ ಕಳಿಸಿ, ಎಂದು ಕೇಳುವುದು ಅತ್ಯಂತ ಹೀನಾಯ. ಅದು ಹೇಗಾದರೂ ಇರಲಿ ರಂಗಣ್ಣನಿಗೆ ಈಗ ಯಾವುದೂ ಬೇಡವಾಗಿದೆ. ' ಹಾಗಾದರೆ ಇನ್ನೆಂದು ? ' ಎಂದು ತಂದೆ ಕೇಳಿದ್ದಾರೆ ಅದೂ ಸರಿಯೆ. ಮದುವೆ ಮಾಡಿಕೊಂಡಮೇಲೆ ಹೆಂಡತಿಯನ್ನು ಎಂದಾದರೂ ಕರೆತಂದು ಸಂಸಾರ ಮಾಡಲೇಬೇಕು. ಅದನ್ನು ಮುಂದೆ ಮುಂದೆ ತಳ್ಳಲು ಅವನು ಯಾವ ನೆಪವನ್ನೂ. ಮುಂದೊಡ್ಡಲಾರ ಎಷ್ಟುಪರಿಯಾಗಿ ವಾದಮಾಡಿದರೂ ತನ್ನನ್ನೇ ತಾನು ಒಪ್ಪಿಸಲಾರ.

ಲಲಿತೆಯ ಚಿತ್ರಮನಸ್ಸಿನಿಂದ ಅಳಿಸಿಹೋಗಿಲ್ಲ. ಆದರೆ ಅದು ಒಂದು ಸುಖಸ್ವಪ್ನದಂತೆ ಆಗಿದೆ, ಒಂದು ಸುಳಿಗಾಳಿ ಅವನ ಮನೋಕರಧಿಯಮೇಲೆ ಬೀಸಿ ಮೆಲ್ಲನ್ನ ತೆರೆಗಳನ್ನೆಬ್ಬಿಸಿ, ಆ ತೆರೆಗಳನ್ನು ಮೃದುವಾಗಿ ಚುಂಬಿಸಿ ಹೊರಟು ಹೋಯಿತು. ತಿರುಗಿ ಬಾರದಂತೆ ಹೋಯಿತು. ಲಲಿತೆಯ ಒಡನಾಟ ಒಂದು ಸಂಗೀತದ ಸವಿಯೂಟ ಒಂದು ಸುಂದರದೃಶ್ಯ, ಒಂದು ಸೂಕ್ಷ್ಮ ಕಂಪು, ಅದೇ ಒಂದು ಪರಿಪೂರ್ಣವಾದುದು; ಎಂದೇ ಈಗಲೂ ಚಿಂತಿಸುತ್ತಾನೆ. ಅವಳ ಇರವನ್ನು ನೆನೆಸಿಕೊಂಡರೆ ಅವನಿಗೆ ಜಾಜಿಯಹೂವಿನ ನೆನಪುಬರುವುದು. ಒಂದು ರಸಿಕ ಗಂಡ. ವಿಶ್ವಾಸವುಳ್ಳ ಅತ್ತೆ, ಆದರವುಳ್ಳ ಭಾವ, ಇವರನೆನಪೇ ಕೂಡಿಕೊಂಡು ಬರುವುದು. ಒಂದು ವಸ್ತುವಿನ ಜೊತೆಗೆ ಭಾವಗಳೂ ಹೊಂದಿಕೊಳ್ಳುತ್ತವೆ. ಆ ವಸ್ತುವನ್ನು ನೆನಸಿಕೊಂಡಾಗ ಬೇರೆ ಭಾವ ಬರದು. ಹೂ, ಹಸಿರು, ಸಂಗೀತ,

ಪರಿಮಳ ಇವುಗಳೊಂದಿಗೆ ಬೆಂಕಿ, ಮಸಣ, ಕಟುಕ, ಈ ಯೋಚನೆಗಳು ಹೊಂದಿಕೊಳ್ಳಲಾರವು. ಆದ್ದರಿಂದ ಈಗ ಅವನು ಲಲಿತೆಯ ನಿಜಸ್ವರೂಪವನ್ನು ಮರೆತೇ ಬಿಟ್ಟಿದ್ದಾನೆ. ಅವಳ ಇರವೇ ಅವನ ಮನಸ್ಸಿಗೆ ಬರುತ್ತಿಲ್ಲ. ಗುಲಾಬಿ ನೆನಪಿನಲ್ಲಿದೆಯೇ ಹೊರತು ಮುಳ್ಳಿಲ್ಲ. ಅದ್ದರಿಂದ ಆಭಗ್ನಪ್ರೇಮ. ಅವನ ಮನಸ್ಸಿನರೀತಿಯ ಮೇಲಾವ ಪರಿಣಾಮವನ್ನೂಂಟುಮಾಡಿಲ್ಲ ಕನಸಿನ ಪ್ರಪಂಚದ ಲಲಿತೆಯನ್ನು ಮದುವೆಯಾಗಿದ್ದು ಈ ಕಾರ್ಖಾನೆಯಬಳಿ ಬಾಳುವುದು ಅಸಾಧ್ಯ. ಅವಳಿಗೆ ತಕ್ಕ ಅಂತಸ್ತಿನಲ್ಲಿಡುವುದು ತನ್ನಿಂದ ಸಾಧ್ಯವಿರಲಿಲ್ಲ.

ಈ ಪರಿಸ್ಥಿತಿಯಲ್ಲಿ ಕಾಮಾಕ್ಷಿಯ ಮೇಲಿನ ಆದರ ಅವನ ಮನಸ್ಸಿನಲ್ಲಿ ಹೆಚ್ಚುತ್ತಿದೆ. ತನ್ನ ಸುಂದರ ಸ್ವಪ್ನ ಅಳಿಸಿಹೋದದ್ದಕ್ಕೋಸ್ಕರ ಅವಳೇಕೆ ದಂಡತೆರಬೇಕು ? ಕರು ಅಕ್ಕಿ ತಿಂದರೆ ಬೆಕ್ಕನ್ನು ಶೂಲಕ್ಕೆ ಹಾಕಿದರಂತೆ. ಅವಳೇನುತಪ್ಪು ಮಾಡಿದ್ದಾಳೆ ? ಎಲ್ಲಿಯೋ ಹುಟ್ಟಿಬೆಳೆದ ಹೆಣ್ಣುಮಗಳೊಬ್ಬಳು ಒಬ್ಬ ಅಪರಿಚಿತನ ಜೊತೆಗೆ ತನ್ನವರನ್ನೆಲ್ಲಾ ಬಿಟ್ಟು, ಅವನೇ ಸರ್ವಸ್ವವೆಂದು ನಂಬಿ ಬರುವುದೇ ಒಂದು ಭವ್ಯವಾದ, ಹೃದಯವನ್ನು ಹರ್ಷಗೊಳಿಸುವ, ಅವಳಲ್ಲಿ ಸಹಾನುಭೂತಿ, ಪ್ರಶಂಸೆ, ಮೆಚ್ಚಿಕೆಗಳನ್ನು ಹೆಚ್ಚಿಸುವ ಸನ್ನಿವೇಶ. ಹಾಗೆ ಬರುವ ವ್ಯಕ್ತಿ ಎಂತಹವಳಾದರೇನು ? ಕುರೂಪಿಯಾಗಿರಲಿ, ಸುರೂಪಿಯಾಗಿರಲಿ, ಆ ಒಂದು ತ್ಯಾಗ, ಅವಳನ್ನು ಮಾನವಾತೀತವಾದ ಅಂತಸ್ತಿಗೇರಿಸುತ್ತದೆ' ಆ ಒಂದು ನೆನಪಿನಿಂದ ಅವಳಲ್ಲಿ ಆದರ ಮೂಡುತ್ತದೆ. ಅವಳ ಆ ಅಸಹಾಯಕತೆಯಿಂದ ಅವಳಲ್ಲಿ ವಿಶ್ವಾಸಹುಟ್ಟುತ್ತದೆ. ಅವಳ ಆ ಒಂದು ಆತ್ಮಸಮರ್ಪಣೆಯಿಂದ ಅವಳಲ್ಲಿ ಗೌರವ ಹುಟ್ಟುತ್ತದೆ.

ಅವನು ಕಾಮಾಕ್ಷಿಯನ್ನು ಒಂದು ಸಾರೆಯೂ ಮುಖಗೊಟ್ಟು ನೋಡಿರಲಿಲ್ಲ. ಅವಳಿಗೇನು ಬರುತ್ತದೆ. ಏನುತಿಳಿಯುತ್ತದೆ. ಒಂದನ್ನೂ ವಿಚಾರಿಸಿಲ್ಲ. ಎಂತಹ ದೌರ್ಷ್ಟ್ಯ ತನ್ನದು ? ತನ್ನ ಆಗು ಹೋಗುಗಳನ್ನು ಸುಖ ದುಃಖ ಆಸೆನಿರಾಶೆಗಳ ಹಿಂದೆ ತನ್ನ ಕೈವಾಡವನ್ನೇ ಪ್ರದರ್ಶಿಸುತ್ತಿರುವ ಒಂದು ಕ್ರತುಶಕ್ತಿ ಇರಬೇಕು. ಅದು ದಾರಿ ತೋರಿಸಿದಂತೆ ನಡೆಯುವುದು ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯ.

ರಂಗಣ್ಣನ ಮನಸ್ಸು ಈ ಹದಕ್ಕೆ ಬಂದಮೇಲೆ ಬಹಳಸಂಗಡಿಯ ಕೊನೆಯಲ್ಲಿ ಅವನ ಸಂಸಾರ ಪ್ರತಿಷ್ಠಿತವಾಯಿತು. ತನ್ನದು ಎಂದು ಕರೆಯಲು

ಒಂದು ಈ ಮನೆ ಸ್ನೇಹಿತರಿಗೆ ಒಂದು ಲೋಟ ಕಾಫಿಕೊಡಲಾದರೂ ಅನುವಾಗಿದೆ. ಕಾಮಾಕ್ಷಿ ಎಲ್ಲಿರುವುದನ್ನು ಶ್ರದ್ಧೆಯಿಂದ ಮಾಡುತ್ತಿದ್ದಾಳೆ. ಯಾವುದರಲ್ಲಿಯೂ ತಾನು ಜಾಣ ಎಂದು ತೋರಿಸಿಕೊಳ್ಳಲಿಷ್ಟವಿಲ್ಲದೆ ಎಲ್ಲವನ್ನು ವಿತರಣೆಯಿಂದ ಮಾಡುತ್ತಿದ್ದಾಳೆ. ಬಹುದಿನಗಳಿಂದ ಏಕಾಂಗಿಯಾಗಿ ಎರಡುಜೀವನ ನಡೆಸುತ್ತಿದ್ದ ರಂಗಣ್ಣನಿಗೆ ಈಗ ಹೆಣ್ಣಿನ ರುಚಿ ಹತ್ತಿದೆ.

ಕನಸಿನ ರಾಜ್ಯದಲ್ಲಿ ಯಾವುದೋ ರಸ ನಿಮಿಷವೊಂದು, ಅಲಾರಂ ಗಡಿಯಾರ ಕಿರ್ರನೆ ಕಿರುಚಿತು. ಸ್ವರ್ಗದಿಂದ ಒಂದೇಸಾರಿಗೆ ಭೂಮಿಗೆ ಧುಮುಕಿತು ರಂಗಣ್ಣನ ಮನಸ್ಸು. ಲಗುಬಗೆಯಿಂದ ಎದ್ದ ನೀರು ಸರಿಯಾಗಿ ಕಾದಿರಲಿಲ್ಲ. ಮನೆಯಲ್ಲಿರಲು ಹೊತ್ತೇ ಸಾಲದ್ದರಿಂದ ಸರಿಯಾದ ಸೌದೆ ತರಲು ಆಗಿರಲಿಲ್ಲ. ಹಸಿ ಸೌದೆ. ಹಲ್ಲುಜ್ಜುವ ಶಾಸ್ತ್ರಮಾಡಿ ತಣ್ಣೀರೇ ಸುರಿದುಕೊಂಡ. ಹಿಂದಿನದಿನದ ಹುಳಿಹಾಲಿನಿಂದ ಮಾಡಿದ ಕಾಫಿಯನ್ನು ಕಾಮಾಕ್ಷಿ ಮುಂದೆ ತಂದಿಟ್ಟಳು. ಅದನ್ನು ಕುಡಿದು ಕೋಟು ಷರಾಯಿ ತಗುಲಿಸಿಕೊಂಡು ಕ್ಯಾರಿಯರ್‌ನಲ್ಲಿ ಮಧ್ಯಾಹ್ನದ ಊಟವನ್ನು ತೆಗೆದುಕೊಂಡು ರಂಗಣ್ಣ ಮುಂಬಾಗಿಲು ತೆಗೆದ. ಮಾಗಿಯ ಕುಳಿರ್ಗಾಳಿ ಒಳನುಗ್ಗಿತು. ಕಾಮಾಕ್ಷಿ ಆ ಛಳಿಯಿಂದ ಗಡಗಡನೆ ನಡುಗಿದಳು. ರಂಗಣ್ಣ ಒಂದು ಕ್ಷಣ ಹೆಂಡತಿಯ ಕಡೆ ನೋಡಿದ. ಒಂದೇ ಒಂದುಕ್ಷಣ ಅವಳ ವಿಷಯವಾಗಿ ಅವನ ಮನಸ್ಸಿನಲ್ಲಿ ಸಹಾನುಭೂತಿ ಮಿಡಿಯಿತು. ಈ ಎಳೆ ವಯಸ್ಸಿನಲ್ಲಿ, ಕಾಣದ ದೇಶ, ನೋಡದ ಜನರ ನಡುವೆ, ಈ ಅವೇಳೆಯಲ್ಲಿ ಒಬ್ಬಳೇ ಒಬ್ಬಳು ನಿಂತ ಆ ಹುಡುಗಿಯನ್ನು ಕಂಡ ಮರುಕವುಂಟಾಯಿತು. ಅವನ್ನು ಬರಸೆಳೆದು ಮುತ್ತಿಡಬೇಕೆಂದೆನ್ನಿಸಿತು. ಆದರೆ ಅದಾವುದೋ ಒಂದು ಸಂಕಟಜ್ವಾಲೆ ಅವನ ಮನಸ್ಸನ್ನು ಆವರಿಸಿ ಬಾಳಿನಲ್ಲಿ ತೀವ್ರವಾದ ಜಿಗುಪ್ಸೆಯನ್ನು ತಂಡೂಡ್ಡಿ ಮನಸ್ಸನ್ನು ಅಲ್ಲೋಲ ಕಲ್ಲೋಲ ಮಾಡಿಬಿಟ್ಟಿತು. ಆ ದುರ್ದಮನೀಯವಾದ ಅದಮ್ಯವಾದ ದೋಷದ ಬಿರುಗಾಳಿಯ ಜೊತೆಗೇ ಅವನು ಹಾಗೆಯೇ ಹೆಂಡತಿಯನ್ನು ಬಿಟ್ಟು ಬೀದಿಗಿಳಿದ. ಮಾಗಿಯ ಸೊನೆ ಸುರಿಯುತ್ತಿತ್ತು. ದೀಪಗಳು ಮಂಕಾಗಿದ್ದುವು. ರಸ್ತೆ ಜನಶೂನ್ಯವಾಗಿತ್ತು. ಪ್ರಪಂಚ ಇನ್ನೂ ಸುಖಸಮಾಧಿಯ ಶಾಂತಿಯಿಂದ ಎಚ್ಚೆತ್ತಿರಲಿಲ್ಲ. ಆದರೆ ಈ ಕಾರ್ಖಾನೆಯ ಜೀತಗಾರ ಒಂದು ಕೈಯಲ್ಲಿ ಅನ್ನದ ಬುತ್ತಿ. ಒಂದು ಕೈಯಲ್ಲಿ ಕಾರ್ಖಾನೆಯಲ್ಲಿ ಬದಲಾಯಿಸಲು ಹರಕು ಷರಾಯಿ. ಹಿಡಿದು ರೈಲ್ವೆಸ್ಟೇಷನ್ನಿಗೆ ಹೋಗುತ್ತಿದ್ದಾನೆ.

ರೈಲಿನಲ್ಲಿ ಜನರ ಸಂತೆ ಕಿಕ್ಕಿರಿದು ನೆರೆದಿದೆ. ಅದೇನು ಈ ನರಕದಲ್ಲಿ ತೂರುವ ಜರೂರೋ ಆ ಪ್ರಾಣಿಗಳಿಗೆ? ಅವರಮಧ್ಯೆ ರಂಗಣ್ಣ ತನ್ನ ದೇಹವನ್ನು

ತೂರುತ್ತಾನೆ. ದೇವರು ಇಂತಹ ದೊಡ್ಡ ಶರೀರವನ್ನು ಏಕೆ ಕೊಟ್ಟನೋ. ದೊಡ್ಡ ದೇಹವನ್ನು ಕೊಟ್ಟು ಈ ರೈಲಿನಲ್ಲಿ ಪ್ರಯಾಣಮಾಡುವ ಶಿಕ್ಷೆಯನ್ನಾದರೂ ಯಾವ ಪಾಪಕ್ಕೋಸ್ಕರ ವಿಧಿಸಿದನೋ ಎಂದು ಮನದಲ್ಲಿ ಪರಿತಪಿಸುತ್ತಾನೆ. ಕಾರ್ಖಾನೆಯ ಹತ್ತಿರದ ಸ್ಟೇಷನ್ನಿನಲ್ಲಿ ರೈಲಿಳಿಯುತ್ತಾನೆ. ಈಗಿನ್ನು ಸೂರ್ಯ ಎದ್ದು ಹೊರಗೆ ಬರುತ್ತಾನೆ. ಮುಂದೆ ಎಂಟು ಗಂಟೆಗಳ ಕಾಲ ಕಾರ್ಖಾನೆಯ ಕೆಲಸ, ಮಧ್ಯೆ ತಂದ ತಂಗಳು ಕೂಳು ತಿನ್ನಲು ಸ್ವಲ್ಪ ಅವಕಾಶ. ರಾಸಾಯನಿಕ ದ್ರವ್ಯಗಳ ವಿಷಗಾಳಿಗಳ ದುರ್ನಾಥ ಹೊಡೆಯುತ್ತಿದೆ. ಯಂತ್ರಗಳ ಕರ್ಕಶ ಶಬ್ದ ಕಿವಿಕೊರೆಯುತ್ತದೆ. ರಂಗಣ್ಣ ಅವುಗಳ ನಡುವೆ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ತಾನೂ ಒಂದು ಯಂತ್ರವಾಗಿ ದುಡಿಯುತ್ತಾನೆ. ಸಂಜೆಯ ರೈಲು ಅವನನ್ನು ವಾಪಸು ಕರೆದು ಕೊಂಡು ಬರಬೇಕು. ಹೊಟ್ಟೆ ಹಸಿಯುತ್ತಿದೆ. ಕೈ ಕಾಲುಗಳಲ್ಲಿ ನಡೆಯಲು ತ್ರಾಣ ವಿಲ್ಲ. ತಲೆ ತಿರುಗುತ್ತಿದೆ. ಹೇಗೆ ಹೇಗೋ ತೆವಳಿಕೊಂಡು ನಾಲ್ಕೈದು ಮೈಲಿ ನಡೆದು ಮನೆ ಸೇರುತ್ತಾನೆ. ಬಿದ್ದುಕೊಂಡರೆ ಸಾಕು ಎನ್ನಿಸುತ್ತಿದೆ ಪ್ರಾಣಕ್ಕೆ. ಕಾಮಾಕ್ಷಿ ಬಡಿಸುತ್ತಾಳೆ. ಆದರೆ ಮಾತಾಡುವುದು ಅವನಿಗೆ ಬೇಕಿಲ್ಲ. ಮಲಗಿ ನಿದ್ದೆ ಹೋಗಿಬಿಡುತ್ತಾನೆ. ಕಾಮಾಕ್ಷಿ ಯಾವಾಗಲೋ ಕೆಲಸ ಮುಗಿಸಿಕೊಂಡು ಬಂದು ಜೊತೆಗೆ ಮಲಗಿರುತ್ತಾಳೆ.

ಇದೊಂದು ಪರ್ವ ರಂಗಣ್ಣನ ಜೀವನದಲ್ಲಿ

ರಂಗಣ್ಣ ದುಡಿದುಬಂದು ಮಲಗಿದ್ದಾನೆ. ಬಿಸಿಲಿನ ತಾಪದಿಂದ ಹಂಚೆಲ್ಲಾ ಕಾದು ಸೆಖೆಯಿಂದ ಮೈ ಬೆವರಿಹೋಗುತ್ತಿದೆ. ನೊಣಗಳು ಮೂಗು ಬಾಯಿಗಳೊಳಗೆ ಹೊಕ್ಕು ನಿದ್ದೆಯನ್ನು ದೂರ ಓಡಿಸುತ್ತಿವೆ. ಹಗಲುಗನಸುಗ ಳಿಂದ ಹುಚ್ಚುಹಿಡಿದಂತಾಗಿದೆ. ಕಣ್ಣುಬಿಟ್ಟಾಗ ಗಡಿಯಾರ ಐದುಗಂಟೆ ತೋರಿಸು ತ್ತದೆ. ರಂಗಣ್ಣ ಎದ್ದು ಷರಾಯಿ ಏರಿಸುತ್ತಾನೆ. ಕಾಮಾಕ್ಷಿ ಕಾಫಿ ತಿಂಡಿ ತಂದು ಕೊಡುತ್ತಾಳೆ. ಅವನ್ನಿಷ್ಟು ತಿಂದು ಕ್ಯಾರಿಯರ್‌ನಲ್ಲಿ ಅನ್ನವನ್ನು ತೆಗೆದುಕೊಂಡು ನಿತ್ಯಯಾತ್ರೆ ಹೊರಡುತ್ತಾನೆ. ಜನರು ಆಟಪಾಟಗಳಿಗೆ ಅಣಿಯಾಗುತ್ತಿದ್ದಾರೆ. ಸಂಜೆವೆಣ್ಣು ಸಡಗರದಿಂದ ಬರುತ್ತಿದ್ದಾಳೆ. ರಂಗುರಂಗಿನ ಸೀರೆಗಳು ಗಾಳಿಗೆ ಚಲಿ ಸುತ್ತಿವೆ. ಪ್ರಪಂಚ ವಿಶ್ರಮಿಸುವ ವೇಳೆಯಲ್ಲಿ ತಾನುಕೂಳಿಗಾಗಿ ದುಡಿಯಲು ಹೋಗು ತ್ತಿದ್ದಾನೆ. ಪುನಃ ರೈಲುಯಾತ್ರೆ. ಎಲ್ಲೋ ಮೂಲೆಯೊಂದರಲ್ಲಿ ನಡುರಾತ್ರಿಯವರೆಗೆ ತೂಕಡಿಕೆ. ಪಿಶಾಚಿಯಂತೆ ಕಾರ್ಖಾನೆ ಸಿಳ್ಳು ಊದುತ್ತದೆ. ಜೀತಗಾರರ ಮನದಲ್ಲಿ

ಪ್ರಪಂಚದ ಮೇಲಿನದ್ವೇಷ ಕಡುತರವಾಗುತ್ತದೆ. ನಲ್ಲ ನಲ್ಲೆಯರು ತೋಳತೆಕ್ಕೆಯಲ್ಲಿ ತನ್ಮಯರಾಗುವ ಸಮಯದಲ್ಲಿ ಈ ನತಪೃಷ್ಟರು ಒಂದು ತುತ್ತು ಕೂಳಿಗಾಗಿ ಅಲ್ಲಿ ಮಡಿಯುತ್ತಿದ್ದಾರೆ.

ಇದು ಇನ್ನೊಂದು ಪರ್ವ ಅವನ ಜೀವನದಲ್ಲಿ.

ಇನ್ನೊಂದು ಪರ್ವ ಇವೆರಡಕ್ಕೂ ಮಧ್ಯದ್ದು.

ಈ ಮೂರು ಪರ್ವಗಳು ಅವನ ಜೀವನದಲ್ಲಿ ಒಂದಾಗುತ್ತಲೊಂದು ನಡೆಯುತ್ತಿವೆ. ಇವು ಬಿಟ್ಟು ಬೇರೆಯಿಲ್ಲ. ಈ ಹೊಟ್ಟೆಗಾಗಿ ಇವನ್ನೆಲ್ಲಾ ಅನುಭವಿಸಬೇಕೇ? ಯಾವ ಪುರುಷಾರ್ಥ ಇದರಿಂದ? ತನ್ನ ಬದುಕಿನಿಂದ ಯಾವ ಕಾರ್ಯಸಾಧನೆಯಾದೀತು? ಇದೇ ಬದುಕು ಬದುಕಿ ಸತ್ತರೆ ಕೊನೆಗಾಲದಲ್ಲಿ ಯಾವ ಕೃತಕೃತ್ಯತೆಯ ಸಮಾಧಾನ ದೊರೆಯಬೇಕು? ಇದೇನೂ ಶಾಶ್ವತವಲ್ಲ. ತನ್ನ ಜೀವನದ ಗುರಿಬೇರೆ ಇದೆ, ಎಂದು ಸಮಾಧಾನ ತಾಳುತ್ತಾನೆ ಅವನು. ಆದರೆ ಕಳೆವ ಪ್ರತಿಯೊಂದು ದಿನವೂ ತನ್ನನ್ನು ಈ ಪಾಶದಲ್ಲಿ ಬಿಗಿಯಾಗಿ ಸಿಕ್ಕಿಸಿ ತನ್ನ ಭವಿಷ್ಯದ ಹೊಂಗನಸುಗಳಿಗೆ ಕೊಡಲಿಯಿಕ್ಕುತ್ತಿದೆಯೆಂದು ಅವನಿಗೆ ಗೊತ್ತಾಗುತ್ತಿದೆ. ಯಾವನೋ ಒಬ್ಬನ ಸುಖಕ್ಕಾಗಿ ದುಡಿಯುವ ತನ್ನ ಸಹೋದ್ಯೋಗಿಗಳಲ್ಲಿ ತೃಪ್ತಿ ಸಮಾಧಾನಗಳಿಲ್ಲ ಈ ಅಶಾಂತಿಯಿಂದ ದ್ವೇಷ, ಬೈಗುಳ, ಅವಾಚ್ಯಶಬ್ದಗಳು, ಅಯೋಗ್ಯ ಭಾವನೆಗಳು. ಅಯುಕ್ತ ಕಾರ್ಯೆಕೆಗಳು. ಇದರಿಂದ ತನ್ನ ಆತ್ಮ ಅಧೋಗತಿಗಿಳಿಯುತ್ತಿರುವುದು ಅವನಿಗೆ ಮನವರಿಕೆಯಾಗುತ್ತಿದೆ.

ಈ ಅತೃಪ್ತಿ ಅಶಾಂತಿ ತಾಂಡವವಾಡುತ್ತಿರುವ ಅವನ ಮನಸ್ಸಿಗೆ ತಣ್ಣೆರೆಯುವಶಕ್ತಿ ಕಾಮಾಕ್ಷಿಗಿಲ್ಲ.

ರಂಗಣ್ಣನ ಸಂಸಾರದಲ್ಲಿ ಸಹಾಯಕ್ಕೆಂದು ಅವನತ್ತೆ ಜೊತೆಗೆ ಬಂದರು ಸುಬ್ಬಮ್ಮನಿಗೆ ಇಳಿವಯಸ್ಸು. ಎಳೆತನವಲ್ಲಿಯೇ ಗಂಡಹೋಗಿ ಅಂದಿನಿಂದ ಸುಖವನ್ನೇ ಕಾಣದೆ ಪರಾಶ್ರಯದಲ್ಲಿ ಬೆಳೆದ ಕಷ್ಟಜೀವಿ ಅವರು. ಐಹಿಕ ಜೀವನದಲ್ಲಿ ಸುಖವನ್ನೇ ಕಾಣದಿದ್ದ ಅವರಿಗೆ ಈ ದುಃಖಗಳನ್ನೆಲ್ಲಾ ಸಹಿಸುವ ಶಕ್ತಿಕೊಟ್ಟಿದ್ದು ಪರವ ಹಂಬಲು. ಇದುವರೆವಿಗೆ ಅವರು ಮಡಿ ಮೈಲಿಗೆ ಆಚಾರಗಳನ್ನು ಚಾಚೂ

ತಪ್ಪದೇ ನಡೆಸಿಕೊಂಡು ಬಂದಿದ್ದರು. ಪರಂಪರಾಗತವಾದ ಆಚಾರದಲ್ಲಿ ಅವರಿಗೆ ಅಚಲವಾದ ಶ್ರದ್ಧೆ. ಅದನ್ನು ತಪ್ಪಿಹೋಗುವವರನ್ನು ಕಂಡರೆ ಅವರಿಗೆ ಎಲ್ಲಿಲ್ಲದ ಕೋಪ. ಅಂತಹವರ ನೆರಳು ತಮ್ಮ ಮೈಮೇಲೆ ಬಿದ್ದರೂ ಸಹ ಸ್ನಾನಮಾಡುವರು. ಅವರ ಮೇಲ್ವಿಚಾರಣೆಯಲ್ಲಿ ರಂಗಣ್ಣನ ಸಂಸಾರ ಕ್ರಮಬದ್ಧವಾದ ಧರ್ಮದ ಹಾದಿಯನ್ನು ಹಿಡಿಯಿತು.

ಇದು ಕಾಲಕ್ರಮದಲ್ಲಿ ಅವನಿಗೆ ನುಂಗಲಾರದ ತುತ್ತಾಗಿ ಪರಿಣಮಿಸಿತು. ಸುಬ್ಬಮ್ಮ ಮನೆಗೆಲಸದ ನಿರ್ವಹಣೆಯಲ್ಲಿ ಎತ್ತಿದ ಕೈ. ಮನೆಯಲ್ಲಿ ಒಂದು ಸೂಕ್ಷ್ಮ ದರ್ಶಕಯಂತ್ರದಿಂದ ಪರೀಕ್ಷಿಸಿದರೂ ಧೂಳು ಸಿಗಬಾರದು. ಒಂದು ಪಾತ್ರೆಯಲ್ಲಿಯೂ ಕಲೆ ಕಾಣಬಾರದು. ಬೆಳಗಿನಿಂದ ಸಂಜೆಯವರೆವಿಗೆ ತೊಳೆಯುವುದು, ಗುಡಿಸುವುದು ದೇವರಪೂಜೆ, ದೇವರ ನಾಮದ ಸರಣಿ ಸಂತತವಾಗಿ ನಡೆಯುವುದು. ಇದರಲ್ಲಿ ಕಾಮಾಕ್ಷಿಯೂ ಭಾಗಿಯಾಗದೆ ವಿಧಿಯಿಲ್ಲ. ಅದಕ್ಕೆ ಅವಳಿಂದ ಯಾವ ಅಭ್ಯಂತರವೂ ಇಲ್ಲ. ರಂಗಣ್ಣನಿಲ್ಲದ ವೇಳೆಯಲ್ಲಿ ಸುಬ್ಬಮ್ಮ ಅವಳಿಗೆ ಆಚಾರದ ವಿಷಯ ಉಪನ್ಯಾಸಕೊಡುವರು. ಅವಳ ಕಣ್ಣಮುಂದೆ ದೇವರು ದೈವಗಳ ಪವಾಡಗಳನ್ನು ಕುಣಿಸುವರು. ಕಟ್ಟುಕಥೆಗಳಲ್ಲಿ ಅವರಿಗೆ ಸಂಪೂರ್ಣ ನಂಬಿಕೆ. ರಾಮಪೂಜೆಯ ಕತೆಯಲ್ಲಿನ ನಾರಾಯಣಭಟ್ಟ ಬದುಕಿದ್ದವ್ಯಕ್ತಿ. ನಿನ್ನೆ ಮೊನ್ನೆಯವ. ಅವನ ವಿಷಯವಾಗಿ ಒಂದು ಕೆಟ್ಟ ಮಾತಾಡಿದರೂ ಅದು ದೈವದ್ರೋಹ. ಕಾಮಾಕ್ಷಿಯ ಎಳೆಯ ಮನಸ್ಸು ಇದನ್ನೆಲ್ಲಾ ನಂಬುತ್ತಿದ್ದಿತು.

ಸುಬ್ಬಮ್ಮನವರಿಗೆ ದೆವ್ವ, ಪಿಶಾಚಿ, ಮಾಟ ಮಂತ್ರಗಳಲ್ಲಿರೋ ಅತ್ಯಂತ ನಂಬಿಕೆ ಯಾವುದೇ ಕಾಹಿಲೆಯಾಗಲಿ ಅದು ದೆವ್ವದ ಕಾಟದ ಪರಿಣಾಮ. ಅವರಿಗೆ ರಾತ್ರಿಯೆಲ್ಲಾ ದೆವ್ವಗಳು ಕಾಣುವುವು. ಕನಸಿನಲ್ಲಿ ಬಂದು ಮಾತಾಡುವುವು. ಅವರನ್ನು ಕೇಳಿ ತಮಗೆ ಬೇಕುಬೇಕಾದ ಪೂಜೆ ಪುನಸ್ಕಾರಗಳನ್ನು ಮಾಡಿಸಿಕೊಳ್ಳುವುವು.

ರಂಗಣ್ಣ ಅವರ ಈ ಮಹತ್ವಭಾವ ಕಾಮಾಕ್ಷಿಯಮೇಲೆ ಪರಿಣಾಮ ಉಂಟು ಮಾಡುತ್ತಿರುವುದನ್ನು ನೋಡಿಯೂ ಏನೂ ಮಾಡಲಾರದವನಾಗಿದ್ದ. ಬೆಳಗಾಗ ಎದ್ದರೆ ರೈಲಿಗೋಡಬೇಕು. ಇನ್ನೂ ಕತ್ತಲೆಯಿರುವಾಗಲೇ ಕಾಮಾಕ್ಷಿ ಮಡಿಯುಟ್ಟು ಗೌರೀಪೂಜೆಯಲ್ಲಿ ನಿರತಳಾಗಿರುತ್ತಾಳೆ. ಬೆಳಿಗ್ಗೆ ರಂಗಣ್ಣ ತೆಗೆದು

ಕೊಂಡು ಹೋಗುವ ಊಟ ಮಡಿಯಲ್ಲೇ ಮಾಡಬೇಕು. 'ರೈಲಿನಲ್ಲಿ ಮುಸಲ್ಮಾನ ರಾದಿಯಾಗಿ ಎಲ್ಲರೂ ಅವನ್ನು ಮುಟ್ಟುತ್ತಾರೆ, ನನಗೆ ಮಡಿ ಬೇಕಿಲ್ಲ' ಎಂದು ರಂಗಣ್ಣ ಹೇಳುವನು—ಕಾಮಾಕ್ಷಿಗೆ ಸ್ವಲ್ಪತೊಂದರೆ ತಪ್ಪಲೆಂದು. ಅದನ್ನು ಸುಬ್ಬಮ್ಮನವರು ಕೇಳರು. 'ಅದು ನಿನ್ನ ಪಾಡು. ನಾವು ಅದನ್ನು ನೋಡುವುದಿಲ್ಲ. ಕಾಣದುದಕ್ಕೆ ಪಾಪವಿಲ್ಲ' ಎಂದು ಶಾಸ್ತ್ರಸೂತ್ರಹೇಳುವರು. ಹೀಗಾಗಿ ಅವಳೊಡನೆ ಬೆಳಿಗ್ಗೆ ಮಾತುಕತೆಯಾಡುವುದಕ್ಕಾಗುವುದಿಲ್ಲ. ಸಂಜೆ ಮನೆಗೆ ಬರುವಾಗಲೇ ಎಂಟುಗಂಟೆಯಾಗಿರುತ್ತದೆ. ಊಟಮುಗಿಯುವಾಗ ಇನ್ನಷ್ಟು ಹೊತ್ತಾಗುತ್ತದೆ. ಆಮೇಲೆ ಕಾಮಾಕ್ಷಿ ಪಾತ್ರೆತೊಳೆದು, ಅಡಿಗೆ ಮನೆಸಾರಿಸಿ, ಬೆಳಗಿಗೆ ಎಲ್ಲಾ ಅಣಿಮಾಡಿಟ್ಟು ಮಲಗಲು ಬರಬೇಕು. ಅಷ್ಟುಹೊತ್ತಿಗೆ ಅವನಿಗೆ ನಿದ್ದೆಬಂದಿರುತ್ತದೆ. ಅವನೂ ಸಯಾಮಿಯವಾಗಿ 'ಬೇಗಮಲಗಬಾರದೇ ?' ಎಂದು ಪೀಠಿಕೆಹಾಕಿದ. ಆದರೆ ಸುಬ್ಬಮ್ಮನವರ ಮತದಂತೆ ಮನೆಯಲ್ಲಿ ಮುಸುರೆಯಿಟ್ಟುಕೊಂಡು ಮನೆಯಾಕೆ ಮಲಗುವುದು, ಪ್ರಾಯಶ್ಚಿತ್ತವಿಲ್ಲದ ಅಪರಾಧ. ಅವರಿಗೆ ಎದುರಾಗಿ ನಡೆಯಲು ಕಾಮಾಕ್ಷಿ ಅಂಜುತ್ತಾಳೆ. ಅವಳ ಮನಸ್ಸಿನ ಬೆಳವಣಿಗೆಯ ಮೇಲೆ ರಂಗಣ್ಣನ ಹಕೋಟಿ ಕೀರಾ ತಪ್ಪಿಹೋಯಿತು.

ರಂಗಣ್ಣನಿಗೆ ಈ ಶಿಸ್ತಿನಸಂಸಾರ ಸ್ವಲ್ಪಹದ್ದುಮೀರಿ ಹೋಗಬಾರದೇ ಎನ್ನಿಸುವುದು. ಇಂದು ಮನಸ್ಸಾದರೆ ಬರಿಯ ಮಾತಿನಲ್ಲಿಯೇ ಹೊಟ್ಟೆ ತುಂಬಿದಂತಾಯಿತು. ಉತ್ಸಾಹವಿದ್ದಾಗ ಅಂಕೆಯಿಲ್ಲದೆ ಸ್ವಚ್ಛಂದವಾಗಿದ್ದುಬಿಟ್ಟರಾಯಿತು ಎನ್ನಿಸುವುದು. ಒಂದು ಆಟ ಪಗಡೆ ಆಡುವುದಕ್ಕಾಗದು. ಸುಬ್ಬಮ್ಮನ ನಂಬಿಕೆ. ಪಗಡೆ ಆಡಿದರೆ ಶನಿಹಿಡಿಯುವುದು, ಎಂದು. ಹಿರಿಯರೆದುರು ಕಾಮಾಕ್ಷಿ ಆಟವಾಡುತ್ತಕುಳಿತಿರುವುದು ಅವರಿಗೆ ಸರಿಬಾರದು. ರಾತ್ರಿ ರಂಗಣ್ಣ ಬರುವ ಹೊತ್ತಿಗೆ ಅವರು ರಾಮಧ್ಯಾನ ಪ್ರಾರಂಭಿಸಿರುತ್ತಾರೆ. ಗಂಡ ಹೆಂಡಿರು ಎರಡುಮಾತಾಡಿದಕ್ಕರೆ ತನ್ನನ್ನೇ ಕುರಿತು ನಕಿದ್ದೆಂದು ಭಾವಿಸಿ ಕಾಮಾಕ್ಷಿಗೆ ಗ್ರಹಚಾರ ಬಿಡಿಸಿಬಿಡುತ್ತಾರೆ. ರಂಗಣ್ಣಏನಾದರೂ ಅವರನ್ನು ಒಪ್ಪಿಸಲುಹೋದರೆ ಅತ್ತುಕರೆದು ರಾದ್ಧಾಂತಮಾಡಿ ಬಿಡುತ್ತಾರೆ. ಮಾತಿಗೆಮೊದಲು ತಮ್ಮ ಸೀರೆಗಳನ್ನು ಗಂಟುಕಟ್ಟುತ್ತಾರೆ ಇವರು ಹೊರಟರೆ ತನಗೆ ಅಪವಾದಬರುವುದೆಂದು ಹೆದರಿ ರಂಗಣ್ಣ ಬಿಸಿತುಪ್ಪವನ್ನು ಕಷ್ಟದಿಂದ ಗಂಟಲಲ್ಲಿಟ್ಟುಕೊಳ್ಳುತ್ತಾನೆ.

ಕಾಮಾಕ್ಷಿಯ ವಸ್ತ್ರಾಲಂಕಾರಗಳಲ್ಲಿಯೂ ಸುಬ್ಬಮ್ಮನವರದೇ ಮೇಲುಗೈ. ಅವರದೃಷ್ಟಿಯಲ್ಲಿ ಓರೆಬೈತಲೆ ಗರತಿಯ ಲಕ್ಷಣವಲ್ಲ. ತಲೆ ಸಡಿಲಾಗಿ ಬಾಚಿಕೊಳ್ಳ

ಮೃದು ಸೂಳೆಯರ ಲಕ್ಷಣ. ಹಣೆತುಂಬಾ ಕುಂಕುಮವಿರಬೇಕು. ಕೈಕಾಲ, ಕೆನ್ನೆಗಳಿಗೆ ಅರಿಸಿನತೊಡೆಯಬೇಕು. ಕೈಯಬಳೆ ಬಿಗಿಯಾಗಿರಬೇಕು. ರವಿಕೆಯ ತೋಳು ಉದ್ದವಾಗಿರಬೇಕು ಕುತ್ತಿಗೆ ಮುಚ್ಚುತ್ತಿರಬೇಕು. ಯಾವರೀತಿಯ ಅಧುನಿಕ ಪದ್ಧತಿಗಳನ್ನೂ ಅವರು ಒಳಸೇರಿಸರು. ಫ್ಯಾಶನ್ನು ತುಂಬಿದ ಬೆಂಗಳೂರು ಸಿಟಿಯಲ್ಲಿ ಕಾಮಾಕ್ಷಿ ಸೌರೀಮುತ್ತೈದೆಯಾಗಿ ಉಳಿದಿದ್ದಾಳೆ. ರಂಗಣ್ಣನ ಮನಸ್ಸು ಇವಕ್ಕೊಪ್ಪುವುದಿಲ್ಲ. (ಗಂಡಸಿಗೆ ಯಾವುದು ಪ್ರಿಯವಾಗಿ ಕಾಣುತ್ತದೆಯೋ—ಅದು ಅಸಭ್ಯವಾಗದಿದ್ದರೆ ಸರಿ—ಆರೀತಿ ಹೆಣ್ಣು ಅಲಂಕರಿಸಿ ಕೊಳ್ಳಬೇಕು, ಅದೇ ಅಲಂಕಾರದ ತತ್ವ.) ಎಂದವನು ತಿಳಿದಿದ್ದಾನೆ. (ಸ್ತ್ರೀಯಲ್ಲಿ ಅಲಂಕಾರ ಮೊದಲಾದದ್ದು ಗಂಡಸಿನ ಆಕರ್ಷಣೆಗೋಸ್ಕರ. ಅದೇಗಂಡಸನ್ನು ಬೆದರಿಸಿ ಓಡಿಸುವುದು ಅಲಂಕಾರವಾದೀತೇ.) ಆದರೆ ಕಾಮಾಕ್ಷಿಯ ಅಲಂಕಾರಗಳಲ್ಲಿ ಗಂಡನ ಪ್ರೀತಿದ್ವೇಷಗಳಿಗೆ ಮಾನ್ಯತೆಯಿಲ್ಲ? ಈತರಹೆಯ ದಾಂಪತ್ಯ ಅವನಿಗೆ ವಿಲಕ್ಷಣವಾಗಿ ಕಾಣುತ್ತದೆ. ಆದರೆ ಸುಬ್ಬಮ್ಮನಿಗೆ ಇದೊಂದೂ ಅರ್ಥವಾಗದು.

ಸಂಸಾರದಲ್ಲಿ ಈರೀತಿ ವಿರಸ ತಲೆ ದೋರಿರುವಾಗ ಎಲ್ಲವನ್ನೂ ಸುಧಾರಿಸಿ ಕೊಂಡು ಅವರವರಿಗೆ ತಕ್ಕಂತೆ ವೇಷಕಟ್ಟುವ ಚಾತುರ್ಯ ಕಾಮಾಕ್ಷಿಯಲ್ಲಿಲ್ಲ. ಸುಖವಾದ ಸಂಸಾರವೆಂದರೆ ಸೊಗಸಾದನಟನೆ. ಅವಳಿಗೆ ಈಜೀವನವೇ ಹಿಡಿಸದು. ಈ ಒಲ್ಲದ ಜೀವನದಲ್ಲಿ ಸ್ವರ್ಗಕಾಣಬೇಕಾದರೆ ಒಲವು ಕ್ರತುಶಕ್ತಿಯಾಗಿರಬೇಕು. ಅದು ಅವಳಲ್ಲಿ ಸ್ವಲ್ಪಕಡಿಮೆಯೋ. ಗಂಡನ ಸಹವಾಸದಿಂದವಳಿಗೆ ಸುಖವಿಲ್ಲ. ಅವನು ಮಾತಾಡಿದರೆ ತಾನೇ ಸುಖವೋ ಕಷ್ಟವೋ? ಅವನಿಗೇನುಕಷ್ಟ ಎಂದು ತಿಳಿದು ಸಹಾನುಭೂತಿತೋರಿಸುವ ಯೋಗ್ಯತೆ ಅವಳಿಗೆ ಸಾಲದು.

ಹೀಗಾಗಿ ಗಂಡಹೆಂಡಿರು ದೂರಸರಿಯುತ್ತಿದ್ದಾರೆ. ಪ್ರತಿಯೊಂದು ಸಣ್ಣ ವಿಷಯವನ್ನು ಅಪಾರ್ಥಮಾಡಿಕೊಂಡು ವೈಮನಸ್ಯವನ್ನು ಬೆಳೆಸುತ್ತಿದ್ದಾರೆ.

ಸುಂದರರಾಯ ಅಂತಹ ಸುಂದರನೇನೂ ಅಲ್ಲ. ಕರಿಯಕುಳ್ಳದೇಹ. ಸ್ವಲ್ಪ ಪ್ರಮಾಣಮೀರಿದ ಹೊಟ್ಟೆ. ಮುಖದಲ್ಲಿ ಒಂದೆರಡುಮಚ್ಚೆಗಳು. ರೂಪ ಹೇಗೇಇರಲಿ, ವೇಷಭೂಷಣಗಳಲ್ಲಿ ಮಾತ್ರ ಬಹಳ ಸಿಸ್ತು, ಶೃಂಗಾರ. ದಿನವೂ ಮುಖಕ್ಷೌರ. ಕರಿಯಮುಖಕ್ಕೆ ಪೌಡರಿನಸುಣ್ಣದಪಟ್ಟೆ. ತಲೆಗೆ ಸುಗಂಧದೆಣ್ಣೆ ಮೈಗೆಲ್ಲಾಸೆಂಟು. ಆಗಸನಿಂದ ಬಂದ ಮುರಿಮುರಿ ಮಲ್ಲುಪಂಚೆ, ಮೇಲೆ ಸಿಲ್ಕಿನ

ಹರಟು. ಟ್ವೀಡುಕೋಟು. ಅಂದವಾದ ಟೋಪಿ, ಕಾಲಿಗೆ ಸೊಗಸಾದ ಕಾನ್ಪುರದ ಚಪ್ಪಲಿಗಳು ಕೈಯಲ್ಲಿ ಚಿನ್ನದ ಸರಪಳಿಯು ಕೈಗಡಿಯಾರ. ಬೆರಳುಗಳಿಗೆಲ್ಲಾ ಉಂಗುರಗಳು.

ಇದೇ ಸುಂದರರಾಯ ಬೆಂಗಳೂರಿನಲ್ಲಿ ಕಾಸಿಲ್ಲದೆ ಬೀದಿಬೀದಿ ಅಲೆಯುವ ಕಾಲವೊಂದಿತ್ತು. ಕಾಲಗತಿಯಲ್ಲಿ ಗಡಿಬಿಡಿಯಾಗಿ ಈಗ ಸುಂದರರಾಯ ತಕ್ಕಮಟ್ಟಿಗೆಸ್ಥಿತಿವಂತ. ಭೂಮಿಯಮೇಲಿನ ಉದ್ಯೋಗಗಳಲ್ಲೆಲ್ಲಾ ಕೈಹಾಕಿ, ಈಗ ಅವನು, ಷೇರು, ಮನೆ ಆಸ್ತಿಗಳ ದಲ್ಲಾಳಿಗೆ ಬಂದು ತಲುಪಿದ್ದ. ಕೊಡುವವನು ಕೆಟ್ಟ. ಕೊಂಡವನು ಸತ್ತ. ಈನಡುವೆ ಸುಂದರರಾಯ ಬದುಕಿದ.

ಕಮಲಮ್ಮ ಸುಂದರರಾಯನ ಸಹಧರ್ಮಿಣಿ ಅವನ ಕಷ್ಟಕಾಲದಲ್ಲಿ ಸಂಸಾರವನ್ನೂ ನಿರ್ವಹಿಸಿಕೊಂಡು ಮೂರು ಮಕ್ಕಳನ್ನು ಹೆತ್ತು ಸಾಕಿದವಳು. ಈಗ ಆಕೆಯನ್ನು ನೋಡಿದರೆ ರೂಪದ ವಿಷಯವಾಗಿ ನಿರ್ದಿಷ್ಟವಾಗಿ ಹೇಳುವಂತಿಲ್ಲ. ಮುಖದಮೇಲೆ ಕಲೆಗಳಿಲ್ಲದಿದ್ದರೆ ಅವಳು ರೂಪವತಿಯಾಗಿರುತ್ತಿದ್ದಳು. ಆದರೂ ಆ ಕಲೆಗಳು ಅಷ್ಟೇನೂ ಎದ್ದುಕಾಣುವುದಿಲ್ಲ ಅಲ್ಲದೇ ಐದುಮಕ್ಕಳ ತಾಯಾದ ಆಕೆಯಲ್ಲಿ ಸೌಂದರ್ಯವನ್ನು ಹುಡುಕುವುದರಲ್ಲೇನೂ ಅರ್ಥವಿಲ್ಲ. ಅವಳಲ್ಲಿ ಈಗಲೂ ಒಂದು ರೀತಿಯ ಆಕರ್ಷಣೆ. ತಾಯ್ತನದ ಗಾಂಭೀರ್ಯ. ಎಳೆತನದ ಚಪಲತೆಯನ್ನು ಪೂರ್ತಿ ಅಡಗಿಸಿಲ್ಲ.

ಸುಂದರರಾಯನಿಗೆ ಈ ರೂಪಸಾಲದು. ಆದರಿಂದ ಅವನ ತೃಷೆ ತಗ್ಗುವಂತಿಲ್ಲ. ಕಮಲಮ್ಮನಿಗೆ ಗಂಡ ಬೇರೆಕಡೆ ಹೋಗುತ್ತಾನೆಂಬುದು ಗೊತ್ತಿದೆ. ಬಸವನಗುಡಿಯ ಮನೆಯಿಂದ ಸೈಕಲಿನಲ್ಲಿ ಚಿಕ್ಕಪೇಟೆಯ ಆಫೀಸಿಗೆ ಅವನು ಪ್ರತಿನಿತ್ಯ ಹೋಗುತ್ತಾನೆ ಅಲ್ಲೇನು ಮಾಡುತ್ತಾನೆ ಎಂಬುದು ಹೆಂಡತಿಗೆ ತಿಳಿಯುವ ಸಂಭವವಿಲ್ಲ. ಆದರೂ ಹೆಣ್ಣಿನ ಒಳದನಿ ಗಂಡನ ಕೃತಘ್ನತೆಯ ಸುಳಿವು ಕಂಡುಕೊಂಡಿದೆ. ಹೆಂಡತಿಗೆ ತನ್ನ ವಿಷಯ ತಿಳಿದಿರುವುದು ಗಮನಕ್ಕೆ ಬಂದಮೇಲೆ ಸುಂದರರಾಯ ಯಾವ ಶಂಕೆಯನ್ನೂ ಇಟ್ಟುಕೊಳ್ಳದೆ, ಬಹಿರಂಗವಾಗಿಯೇ ವ್ಯವಹಾರ ನಡೆಸುತ್ತಾನೆ. ಹೆಂಡತಿಯ ಸ್ಥಾನಮಾನ, ಹಕ್ಕುಬಾಧ್ಯತೆಗಳಿಗೆ ಅವನು ಹೆಚ್ಚು, ಗೌರವಕೊಡುವುದಿಲ್ಲ.

ಸುಂದರರಾಯ ಮುಂದಿನ ಮನೆಯಲ್ಲಿಯೇ ಇದ್ದರೂ ರಂಗಣ್ಣನಿಗೆ ಅವನ ಪರಿಚಯ ಕಡಿಮೆ. ಎಲ್ಲಿಯೋ ಒಂದೆರಡುಸಾರಿ ತೊಟ್ಟಿಯಲ್ಲಿ ಸಿಕ್ಕಾಗ ಸಂಪ್ರದಾಯದಮಾತುಗಳನ್ನು ಮಾತ್ರ ಆಡಿದ್ದರು. ಆದರೆ ಕಾಮಾಕ್ಷಿಗೂ ಕಮಲಮ್ಮನಿಗೂ ಸ್ನೇಹ ಬೆಳೆದುಬಂದಿತು. ಬಟ್ಟೆಒಗಿಯುವಾಗ ತುಲಸಿಪೂಜೆಮಾಡುವಾಗ ಒಬ್ಬರೊಡನೊಬ್ಬರು ಮಾತಾಡಲು ಸಂದರ್ಭಗಳೊದಗುತ್ತಿದ್ದುವು. ಒಂದೊಂದು ಸಾರಿ ಇಬ್ಬರೂ ಒಟ್ಟಿಗೆ ಕುಳಿತು ತಮ್ಮ ತಮ್ಮ ಗೃಹಕೃತ್ಯದ ವಿಷಯಗಳನ್ನು ವಿನಿಮಯಮಾಡಿಕೊಳ್ಳುವರು.

ಒಂದುದಿನ ಸುಂದರರಾಯ ಮನೆಯಲ್ಲೇ ಗೆಳೆಯರಿಗೆ ಸಂತೋಷಕೂಟ ಏರ್ಪಡಿಸಿದ್ದ. ಅದಕ್ಕೆ ರಂಗಣ್ಣನನ್ನೂ ಆಹ್ವಾನಿಸಿದ್ದ. ಆದರದು ಆದರದ ಕರೆಯಲ್ಲ. ಅಲ್ಲದೆ ಅವನ ಸ್ನೇಹಿತಮಂಡಲಿಗೆ ಅವನು ಹೊಸಬ. ಅಂತಹ ಸಂತೋಷಕೂಟಗಳು ಅವನ ಸ್ವಭಾವಕ್ಕೆ ಹಿಡಿಸುತ್ತಿರಲಿಲ್ಲ. ಆದ್ದರಿಂದ ಅವನು ಹೋಗಲಿಲ್ಲ. ಹಾಗೆಯೇರೂಮಿನಲ್ಲಿ ಮಲಗಿದ್ದ.

ಮುಂದಿನಮನೆಯಲ್ಲಿ ಆಮೋದಪ್ರಮೋದಗಳು ನಡೆದಿದ್ದುವು. ಯಾರೋ ವೀಣೆ ಬಾರಿಸಿದರು. ಅದು ಕಮಲಮ್ಮನಂತೂ ಅಲ್ಲ. ಅಷ್ಟುಜನಗಳ ಮುಂದೆ ವೀಣೆಬಾರಿಸುವಂತಹ ಗಡಸುಗಾತಿಯವಳಲ್ಲ. ಹಾಗಿದ್ದರೆ ಅದು ಯಾರಿರಬಹುದು? ಆ ಸಂಭ್ರಮ ಮುಗಿದ ಮೇಲೆ ಎಲ್ಲರೂ ಸಿನಿಮಾಕ್ಕೆ ಹೊರಟುಹೋದರು. ಕಮಲಮ್ಮನೊಬ್ಬಳೇ ಉಳಿದಳು. ಅವಳು ತಮ್ಮ ಮನೆಗೆ ಬಂದು ಕಾಮಾಕ್ಷಿಯೊಡನೆ ತನ್ನ ಅಳಲನ್ನು ಸುರುತ್ತಿದ್ದಳು.

'ಇದನ್ನು ನೋಡುವುದೂ ನನ್ನ ಬಾಳಿನಲ್ಲಿತ್ತು. ಈ ಮನೆಯಲ್ಲಿ ನಾನು ಮುಸುರೆ ತಿಕ್ಕುವವಳು. ಇನ್ನೇನುಳಿದಿದೆ ನನಗೆ ಪ್ರಪಂಚದಲ್ಲಿ. ಇಷ್ಟುದಿನ ಅನುಮಾನವಿತ್ತು. ಸುಳ್ಳೇ ಇರಬಹುದು ಎಂದು ಸಮಾಧಾನವನ್ನಾದರೂ ಪಡೆಯುತ್ತಿದ್ದೆ. ಈ ಸಮಾಧಾನವೂ ಇರಬಾರದೆಂದು ಅವಳನ್ನೀಮನೆಗೆ ಕರೆತಂದು, ನನ್ನ ಕಣ್ಣೆದುರಿಗೇ ಅವಳೊಡನೆ ಲಲ್ಲೆಯಾಡುವುದೇ ?'

ಕಾಮಾಕ್ಷಿ ಮಾತಾಡಲಿಲ್ಲ. ಅವಳಿಗೇನು ಮಾತಾಡಬೇಕೆಂದು ತಿಳಿಯದು.

'ನೋಡಿದಿರಲ್ಲ ಅವಳನ್ನು? ನನಗೇನು ಕಡಿಮೆಯಾಗಿದೆ? ಅವಳೇನು ಅಪ್ಸರೆಯೆ ? ಕಮಲಮ್ಮ ಆವೇಶದಿಂದ ಕೇಳಿದಳು. ಧ್ವನಿ ಕಂಪಿಸುತ್ತಿತ್ತು.

' ಇದೇನು ಗುಲಾಮ ಬದುಕು ಹೆಂಗಸಿನದು. ನೋಡಿ ಕಾಮಾಕ್ಷಮ್ಮ, ನನಗೊಮ್ಮೊಮ್ಮೆ ರಕ್ತ ಕುದಿಯುತ್ತದೆ. ಈ ಕಟ್ಟಿನ ಹಗ್ಗವನ್ನು ಹರಿದು, ಅವರಂತೆಯೇ ಮನಸ್ಸುಬಂದಂತೆ ನಡೆದು, ಈ ಗಂಡಸುಕುಲದಮೇಲೆ ಸೇಡು ತೀರಿಸಿಕೊಳ್ಳಬೇಕು ಎನ್ನಿಸುತ್ತದೆ. ಏನುಹೇಳಿ ಕಾಮಾಕ್ಷಮ್ಮ?

ರಂಗಣ್ಣ ಕೇಳಿ ನಡುಗಿದ. ಹೆಣ್ಣು ಈರೀತಿ ಮಾಡಿದರೇನು ಗತಿ? ಆಕೆ ಸಹನಶೀಲೆಯಾಗಿರುವತನಕ ಗಂಡಸಿನಪಾಪವೇನಿದ್ದರೂ ಆಪುಣ್ಯಪ್ರವಾಹದಲ್ಲಿ ತೊಳೆದುಹೋದೀತು. ಅಂತಹವಳೂ ಈರೀತಿ ಕಿಚ್ಚಿಗೇಳಬೇಕಾದರೆ ಅವಳು ಬಹಳನೊಂದಿರಬೇಕು.

## ೨೦

ಈ ಸಾರಿ ಊರಿಗೆ ಹೋದಾಗ ದೊಡ್ಡತಗಳೆಯೇ ರಂಗಣ್ಣನನ್ನು ಕಾದಿತ್ತು. ಮಾವನಮನೆಯಲ್ಲಿ ಅಧಿಕಾರ ಮಕ್ಕಳಕೈಗೆ ಬಂದಿತ್ತು. ಮುದಿಮಾವನನ್ನು ಲಕ್ಷಿಸುವವ್ಯಾರೂ ಇರಲಿಲ್ಲ. ಈ ಅಧಿಕಾರ ಬದಲಾವಣೆಯಭಾಯೆ ಹೊಸಹಳ್ಳಿಯಮೇಲೂ ಬಿದ್ದಿತ್ತು. ರಂಗಣ್ಣನ ಭಾವಂದಿರು ಹೊಸಹಳ್ಳಿಯ ಜಮೀನಿನಮೇಲಿನ ತಮ್ಮಹಕ್ಕನ್ನು ಸ್ಪಷ್ಟಪಡಿಸಿದ್ದರು. ಈ ಹಿಂದೆ ಹೊಸಹಳ್ಳಿಯವರ ಮತ್ತು ಹೊನ್ನಹಳ್ಳಿಯವರ ವ್ಯವಹಾರ ಒಂದುತರಹೆ ಇತ್ತು. ನರಸಿಂಹಯ್ಯ ಎಷ್ಟೋಕೊಡುತ್ತಿದ್ದರು, ಏನೋತರುತ್ತಿದ್ದರು. ಕೆಲವುಸಾರೆ ಕೊಡುವುದಕ್ಕಿಂತ ತರುವುದೇ ಹೆಚ್ಚಾಗಿತ್ತು. ಮದುವೆಕಾಲದಮಾತಿನಂತೆ ತಮ್ಮ ಜಮೀನಿನ ಮೇಲಿನ ಹಕ್ಕು ಬಾಧ್ಯತೆಗಳನ್ನೆಲ್ಲ ಬೀಗರು ಬಿಟ್ಟುಬಿಡುವರೆಂದು ನರಸಿಂಹಯ್ಯ ಭಾವಿಸಿದ್ದರು.

ಈಗ ಪರಿಸ್ಥಿತಿ ಹಾಗಲ್ಲವೆಂದು ತಿಳಿಯಬಂದಿತು. ಕೊಡುವಾಗ ಭಾವಂದಿರು ತೆಗೆದುಕೊಂಡರು. ತರಲುಹೋದಾಗ ಅದೂಇದೂ ನೆವಹೇಳಿ ಸತಾಯಿಸಿದರು. ಕೊನೆಗೊಮ್ಮೆ ಹೊಸಹಳ್ಳಿಯ ಜಮೀನು ತಮಗೆಸೇರಿದ್ದೆಂದೂ, ಅದರ ಗುತ್ತಿಗೆಯ ಬಗ್ಗೆ ಬಂದಿದ್ದನ್ನು ವಜಾಹಾಕಿ ಕೊಳ್ಳುವುದಾಗಿಯೂ ತಿಳಿಸಿದರು. ನರಸಿಂಹಯ್ಯನವರು ಉರಿದೆದ್ದು ಮದುವೆಯ ಸಂಧಾನದವಿಷಯ ತಿಳಿಸಿದರು.

' ಅದನ್ನೊಪ್ಪಿಕೊಂಡರೂ ಅದು ಭಾವನಿಗೆ ಸೇರಬೇಕಾದುದು. ಅವನೆಲ್ಲೋ ಪರ ಊರಿನಲ್ಲಿ ದುಡಿಯುತ್ತಿದ್ದಾನೆ. ಈಗ ಬಂದ ಗುತ್ತಿಗೆಯನ್ನು ಅವನ

ಹೆಸರಿನಲ್ಲಿಡುತ್ತೀವೆ. ನಾವೇನೂ ಜಮೀನನ್ನು ನಿಮ್ಮೆಲ್ಲರಿಗೂ ಬಿಟ್ಟುಕೊಡುತ್ತೀವೆಂದು ಹೇಳಿರಲಿಲ್ಲ.'

ರಾಮಪ್ಪನವರು ಯಾವುದೂ ತಮ್ಮ ಹತೋಟಿಯಲ್ಲಿಲ್ಲವೆಂದು ತಲೆತಪ್ಪಿಸಿಕೊಂಡುಬಿಟ್ಟರು. ನರಸಿಂಹಯ್ಯ ಗುಡುಗಿದರು.

' ಅನ್ಯಾಯವಾಗಿ ಮೂಲಾನಕ್ಷತ್ರದ ಹೆಣ್ಣನ್ನು ತಂದುಕೊಂಡೆ. ನಾನು ದೊಡ್ಡಮನಸ್ಸುಮಾಡದಿದ್ದರೆ ಯಾವನೋ ಬೀವಾರ್ಸಿಗೆ ಕೊಡಬೇಕಾಗಿತ್ತು ಹೆಣ್ಣನ್ನು.' ಆದಕ್ಕೆ ಪ್ರತ್ಯುತ್ತರವೂ ಕಟುವಾಗಿತ್ತು.

' ಈಗ ನಾವುಕೊಡುವ ಆಸ್ತಿಕೊಟ್ಟಿದ್ದರೆ ಎಂತಹ ಬೀವಾರ್ಸಿಯಾದರೂ ಪುಣ್ಯವಂತನಾಗುತ್ತಿದ್ದ. ಈಗಲೂ ನಮ್ಮ ಸಂಬಂಧ ಅಂತಹ ಶ್ರೀಮಂತರೊಡನೇನೂ ಆಗಿಲ್ಲವಲ್ಲ !

ರಂಗಣ್ಣನ ಮದುವೆಯಿಂದ ತಮ್ಮ ಆಸ್ತಿಯನ್ನು ಮನೆತನಕ್ಕೆ ಉಳಿಸುವುದಾಗಿ ನರಸಿಂಹಯ್ಯ ಭಾವಿಸಿದ್ದರು. ನರಸಿಂಹಯ್ಯನೊಡನೆ ಕೋರ್ಟುವ್ಯವಹಾರ ನಡೆಸುವುದು ಸುಲಭವಲ್ಲ. ಹೇಗೂ ತಕರಾರಿನ ದುಡ್ಡು ಎಂದು ರಾಮಪ್ಪನವರೂ ಆದಾಸೆ ಬಿಟ್ಟಿದ್ದರು. ಆದರೆ ಈಗ ಬೀಗರು ಮನಸ್ಸು ಮಾಡಿದರೆ ಆಸ್ತಿರಂಗಣ್ಣನಿಗೆ. ಉಳಿದವರಿಗೆ ಕೋಲುಕರಟ.

ನರಸಿಂಹಯ್ಯನವರು ಬೀಗರ ಮನೆಯಲ್ಲಿ ನೀರು ಸಹ ಕುಡಿಯದೆ ಹೊರಟುಬಿಟ್ಟರು. ರಂಗಣ್ಣ ಇದನ್ನೆಲ್ಲಾ ಸಾವಧಾನವಾಗಿಕೇಳಿದ. ಭಾವಂದಿರ ವ್ಯವಹಾರದಲ್ಲಿ ಅರ್ಥವೇನೊ ಇತ್ತು. ಆದರೆ ಅದಕ್ಕೆ ಅವನೊಪ್ಪ. ತನ್ನ ಮನೆತನದ ಶ್ರೇಯಸ್ಸಿಗಾಗಿ ಮಾಡಿದ ತ್ಯಾಗ ತನ್ನ ಮದುವೆ. ಅದು ಸ್ವಂತ ಸುಖಾಪೇಕ್ಷೆಯಿಂದ ನಡೆದದ್ದಲ್ಲ. ತನ್ನೊಬ್ಬನ ಸುಖವೇ ಗುರಿಯಾಗಿದ್ದರೆ ಅವನು ಅದಕ್ಕೊಪ್ಪುತ್ತಿರಲಿಲ್ಲ. ಅದರಿಂದ ಈಗ ತನ್ನ ಸುಖ ಸಾಧಿಸಲ್ಪಟ್ಟಿರುವುದೂ ಅಷ್ಟೇ ಇತ್ತು. ಈಗ ಉಳಿದುದು ತನ್ನವರ ಹಿತಮಾತ್ರ. ತನ್ನ ಹಿತಾಹಿತಗಳ ವಿಚಾರ ತನಗೇ ಇರಬೇಕು. ಇದನ್ನು ತನ್ನ ಭಾವಂದಿರೇ ನಿರ್ಣಯಿಸುವುದು ಸರಿಯಲ್ಲ.

ಇವನಮಾತನ್ನು ವ್ಯವಹಾರಕುಶಲರಾದ ಭಾವಂದಿರು ಒಪ್ಪಲಿಲ್ಲ. ತಮ್ಮ ತಂದೆ ಸಂಪಾದಿಸಿದ ಆಸ್ತಿ, ಹಣ, ಅವರ ಸಂತತಿಯವರಿಗೆ ಮಾತ್ರ ಸೇರುವುದ

ರಲ್ಲಿ ಅರ್ಥವಿದೆಯೆಂದೂ ಅದನ್ನು ತಾವು ಹರಿದುಹಂಚುವುದಕ್ಕೆ ಸಿದ್ಧರಿಲ್ಲವೆಂದೂ ಅವರು ಸ್ಪಷ್ಟವಾಗಿ ಹೇಳಿದರು. ಅವರು ಹೇಳಿದ ಅಭಿಪ್ರಾಯದಂತೆ ಅದನ್ನು ಸ್ತ್ರೀಧನವೆಂದು ಕಾಮಾಕ್ಷಿಯ ಹೆಸರಿಗೆ ವರ್ಗಮಾಡಲು ಮಾತ್ರ ತಾವು ಒಪ್ಪುವುದಾಗಿ ಹೇಳಿದರು.

ಇದರಿಂದ ಅವನಿಗೆ ಬಹಳವ್ಯಸನವಾಯಿತು. ತಾನು ತನ್ನ ಹೆಂಡತಿ ಮಕ್ಕಳ ಯೋಗಕ್ಷೇಮವನ್ನೂ ನೋಡಿಕೊಳ್ಳಲು ಶಕ್ತಿಯಿಲ್ಲದವನು ಎಂದು ಬೇರೆ ಹೇಳ ಬೇಕಿರಲಿಲ್ಲ. ಇದು ತನ್ನ ಮರ್ಯಾದೆಗೆ ತೀರಾಕಡಿಮೆ ಎಂದುಕೊಂಡ. ಅವರ ಅಭಿಪ್ರಾಯವೇನೋ ಸಾಧುವಾದದ್ದಿರಬಹುದು. ಈಗ ತಾನಿರುವ ಪರಿಸ್ಥಿತಿಯಲ್ಲಿ ಅದು ಸುಳ್ಳು ಎಂದು ಹೇಳಲು ಬರುವುದಿಲ್ಲ. ಆದರೆ ಈ ಮದುವೆಯಿಂದಾದದ್ದೇನು? ಒಬ್ಬ ಹುಡುಗಿಗೆ ಕನ್ಯಾಸೆರೆ ಬಿಡಿಸಲು ಮಾತ್ರ ತಾನು ಸಾಧನ. ಇಷ್ಟಪಟ್ಟರೆ ಅವಳು ತಂದ ಬಳುವಳಿಯಿಂದ ತಾನು ಜೀವನ ಹೊರೆಯಬಹುದು. ತನ್ನ ಸಂತತಿಗೆ ತಾನೇನೂ ಅಲ್ಲ. ಅವರ ಮತ್ತು ಹೆಂಡತಿಯ ಯೋಗಕ್ಷೇಮ ನೋಡಿ ಕೊಳ್ಳುವುದಕ್ಕೆಬೇರೆ ಇದ್ದಾರೆ. ತಾನೇಕೆ ಈ ನಡುವೆ?

ಅವನು ಹೆಚ್ಚುಮಾತಾಡದೆ ಕಾಮಾಕ್ಷಿಯನ್ನು ತವರುಮನೆಯಲ್ಲಿ ಬಿಟ್ಟು ಹೊರಟ. ಹೆಂಡತಿಯಾದರೂ ಅವನೊಡನೆ ಬರಬೇಕೆಂದು ಉತ್ಸಾಹ ತೋರಿಸಲಿಲ್ಲ. ಅವಳಿಗೆ ತಾನು ಕಳೆದುಕೊಳ್ಳುತ್ತಿರುವುದರ ಬೆಲೆ ಆಗ ತಿಳಿಯಲಿಲ್ಲ. ಭಾವಂದಿರೂ ಏನೂ ಮಾತಾಡಲಿಲ್ಲ. ರಂಗಣ್ಣನ ಕೇಳಿಕೆಯಂತೆ ಯಾವ ಷರತ್ತೂ ಇಲ್ಲದೆ ಆ ಆಸ್ತಿಯನ್ನು ನರಸಿಂಹಯ್ಯನವರಿಗೆ ಒಪ್ಪಿಸುವುದೂ, ಉಪ್ಪುಗಂತು ಹೊಳೆಗೆ ಸುರಿಯುವುದೂ, ಒಂದೇ ಎಂದು ತೋರಿತು ಅವರಿಗೆ.

ರಂಗಣ್ಣನನ್ನು ಕರೆದು ಲಕ್ಷಮ್ಮ ಹೇಳಿದರು.

‘ ರಂಗೂ. ನೀನುಮಾಡಿದುದು ಒಳಿತಾಗಲಿಲ್ಲ. ಈ ನಿಮ್ಮ ನಿಮ್ಮ ವ್ಯವಹಾರದಲ್ಲಿ ಕಾಮಾಕ್ಷಿ ಮಾಡಿದತಪ್ಪೇನು ? ಅವರು ಜಮೀನುಬಿಟ್ಟು ಕೊಡದಿದ್ದರೆ ಪೀಡೆಕಳೆಯಿತು. ಪುರುಷನ ಪುಣ್ಯವನ್ನು ನಾರಿಯ ಭಾಗ್ಯವನ್ನು ಕಂಡವರ್ಯಾರಿದ್ದಾರೆ? ಇದಕ್ಕೆ ಹತ್ತರಷ್ಟು ಸಂಪಾದನೆ ಮಾಡೀಯೆ. ನನ್ನ ಇತರಮಕ್ಕಳೂ ಇದರ ಆಸರೆ ಯಿಂದ ಬದುಕುವುದು ಖಂಡಿತಬೇಡ. ಅವರಹಣೆಯ ಮೇಲೆ ಬರೆದಂತಾಗುತ್ತದೆ.

ಖಂಡಿತ ಹೆಂಡತಿಬಿಟ್ಟು ಹೋಗಬೇಡ. ಮನೆಯ ಲಕ್ಷ್ಮಿ ಕಣ್ಣೀರು ಕರೆಯುವುದು ನಮಗ್ಯಾರಿಗೂ ಒಳ್ಳೆಯದಲ್ಲ. ಅವರ ಹಟ ಇದ್ದದ್ದೇ ಇದೆ.'

ಕಾಮಾಕ್ಷಿಕಣ್ಣೀರು ಕರೆಯುವುದರಲ್ಲಿ ಅವನಿಗೆ ನಂಬಿಕೆಯಿರಲಿಲ್ಲ.

'ನಾಲ್ಕುದಿವಸ ತೌರಿನಲ್ಲಿದ್ದು ಬುದ್ಧಿಕಲಿಯಲಿ. ಸ್ವಲ್ಪದಿವಸ ಒಂಟಿಯಾಗಿರೋಣ ಎಂದು ಅನ್ನಿಸಿದೆ. ಆಮೇಲೆ ನೋಡಿಕೊಂಡರೆ ಸರಿ'

ತಾಯಿ ಮತ್ತೆ ಹೇಳಿದರು.

'ರಂಗೂ, ಮನುಷ್ಯನ ಆಯಸ್ಸು ಬಹಳ ಕಡಿಮೆ. ಅದರಲ್ಲಿ ಹಾಗಷ್ಟು, ಹೀಗಷ್ಟು, ಜಗಳಕ್ಕಷ್ಟು, ಪಶ್ಚಾತ್ತಾಪಕ್ಕಷ್ಟು, ಕಳೆದರೆ ಏನು ಉಳಿಯುವುದು ? ಇದ್ದಷ್ಟು ದಿನ, ಸುಖವಾಗಿ ಬಾಳಬೇಕು. ನಾಳೆಯ ಮಾತು ನಾರಾಯಣಬಲ್ಲ.'

ತಾಯಿಗೆ ಏನೇನೋ ನೆವ ಹೇಳಿ ರಂಗಣ್ಣ ಹೊರಟುಹೋದ.

ಈಗ ರಂಗಣ್ಣನದು ಪುನಃ ಒಂಟಿ ಜೀವನ. ಅವನಿಗೆ ಈ ಒಂಟಿ ಜೀವನವೇ ರಕ್ತಕ್ಕೆ ಹಿಡಿದು ಹೋಗಿದೆಯಾದರೂ ಈಗಿನ ನಜೀವನ ಬಹಳ ವಿರಸವಾಗಿದೆ. ಹಿಂದೆ ಒಂದು ತರಹ. ಈಗ ಒಂದು ತರಹ. ಈಗಿನ ರೀತಿಯಲ್ಲಿ ಪೂರಾ ನಿರಾಶೆಯ ಮಬ್ಬು ಕವಿದಿದೆ. ತನ್ನ ಬದುಕೇ ಮುಂದೆ. ಇದೇ ರೀತಿಯು ಬೆಂಗಾಡೇನೇ ಎಂಬ ಸಂಶಯವು ಹತ್ತಿರಹತ್ತಿರ ನಂಬಿಕೆಯಾಗಿದೆ. ಆದರೆ ಒಂದು ತರಹ ಸ್ವಚ್ಛಂದ ವೃತ್ತಿಯಿಂದ ಮನಸ್ಸು ಹಗುರವಾಗಿದೆ. ಇಷ್ಟವಿದ್ದರೆ ಊಟ ಮಾಡಿದ. ಇಲ್ಲದಿದ್ದರೆ ಇಲ್ಲ. ಯಾವುದೋರೀತಿಯ ಬೇವಾರ್ಸಿ ಜೀವನ ನಡೆಸಿದರಾಯಿತು. ಹೀಗೇನು ? ಹಾಗೇನು ? ಎಲ್ಲವೂಒಂದೆ.

ಅವನು ಹಿಂದಿನ ಮನೆಯಲ್ಲೇ ಇದ್ದಾನೆ. 'ಆ ಸಾಮಾನೆಲ್ಲಾ ಎಲ್ಲಿ ಸಾಗಿಸುವುದು'? ಎಂದು ಅದನ್ನು ಬಿಡದೇ ಇದ್ದಾನೆ. ಸುಂದರರಾಯನನ್ನು, ಕಮಲಮ್ಮನನ್ನು ನಿತ್ಯವೂನೋಡುತ್ತಾನೆ. ಒಬ್ಬಂಟಿಗನಾದ ಇವನಿಗೆ ಅವರು ಆಗಾಗ ತಿಂಡಿ, ಮೇಲೋಗರ ಕೊಡುತ್ತಾರೆ. ಆದ್ದರಿಂದ ಸ್ವಲ್ಪ ಪರಿಚಯ ಬೆಳೆದಿದೆ. ಕಮಲಮ್ಮ ಬಹಳ ಒಳ್ಳೆಯವಳು. ಯಾವ ಸಂಕೋಚವನ್ನು ಇಟ್ಟುಕೊಳ್ಳದೇ ಮಕ್ಕಳ ಮೂಲಕ ಏನಾದರೂ ಕಳಿಸುತ್ತಿರುತ್ತಾಳೆ. ಮಕ್ಕಳೆಲ್ಲವೂ ಇವನ ಮನೆಗೆ ಆಟಕ್ಕೆ ಬರುತ್ತವೆ. ಎಲ್ಲಾಹೆಣ್ಣು ಮಕ್ಕಳೂ-ಚಂಪ, ಶಾಂತ, ಉಮಾ, ಕುಸುಮ

ರಮಾ. ಮುದ್ದಾದಮಕ್ಕಳು. ಮುದ್ದಾದ ಹೆಸರುಗಳು. ಅವುಗಳೊಡನೆ ಆಟವಾಡುತ್ತ ಸ್ವಲ್ಪ ಹೊತ್ತ ಕಳೆಯುವುದು.

ಆದರೆ ಸುಂದರರಾಯ ಕಮಲಮ್ಮ ಇವರ ದಾಂಪತ್ಯ ನೋಡಿ ಇವನಿಗೆ ವ್ಯಸನವಾಗುತ್ತದೆ. ಒಂದೊಂದು ಜೀವನ ಒಂದೊಂದು ರೀತಿ! ಹೊಂದಿಕೆಯಿರುವ ದಾಂಪತ್ಯವೇ ವಿರಳವೆ?' ಎಂದೇ ಪ್ರಶ್ನಿಸಿಕೊಳ್ಳುವನೇ? ಯಾವನಿಗೂ ತೃಪ್ತಿ-ಶಾಂತಿಗಳು ಬರಬೇಕೇಬೇಡವೆ! ಇದೇ ಅತೃಪ್ತಿ, ಅಶಾಂತಿ, ಮಾನವನಿಗೆ ಜಿಜ್ಞಾಸೆಯ ಕಾರ್ಯವನ್ನಿತ್ತು, ಅವನನ್ನು ಜ್ಞಾನದ ಕಿಡಿಯ ಹತ್ತಿರ ಕೊಂಡೊಯ್ಯುವುವೇ? ಏನೋ! ಇದ್ದರೂ ಇರಬಹುದು.

ಮಕ್ಕಳ ಗೆಳೆಯ ರಂಗಣ್ಣ ಮಾವ. ಮನೆಯ ಗೇಟು ತೆಗೆದೊಡನೆಯೇ 'ಮಾವ, ಮಾವ ಬಂದ' ಎಂದು ಅವನ್ನು ಸುತ್ತಿಕೊಳ್ಳುವುವು, ರವಿಯನ್ನವನು ಎತ್ತಿಕೊಳ್ಳುವನು. ಉಳಿದ ಹುಡುಗಿಯರು ಅವನೆರಡು ಕೈಗಳನ್ನು ಹಿಡಿವರು. ಕಾಲಿಗೆ ತೊಡರುವರು. ಮನೆಯ ಬಾಗಿಲನ್ನು ತೆಗೆದು ಹುಡುಗರಿಗೆಲ್ಲ ಸಕ್ಕರೆಯನ್ನೋ ಕೊಬ್ಬರಿಯನ್ನೋ ಕೊಡುವನು.

'ಮಾವ, ಆವಾಗಲೇ ಹಾಡು ನನಗೆ ಕಲಿಸು' ಎಂದು ಹುಡುಗಿ ರಾಗ ಎಳೆಯುತ್ತದೆ. ಉಮಾ ತನ್ನ ಗೊಂಬೆ ಅವನನ್ನು ತೋರಿಸುತ್ತಿರುವಳು. ಅವಳು ರಾಗ ಇದನ್ನು ಉದ್ದಮಾಡುವಳು. ಉಮಾನೂ ಅಳುವಳು. ಅವರನ್ನು ಸಮಾಧಾನ ಮಾಡಲು ಇನ್ನಷ್ಟು ತಿಂಡಿ ಕೊಡುವನು. ಕಮಲಮ್ಮ ಹಿರಿಯವಳಾದ ಚಂಪೆಯನ್ನು ಒಳಗಿನಿಂದಲೇ ಕೂಗುವರು. ಚಂಪಾ ಹೋಗಲೊಲ್ಲಳು.

'ಯಾಕೇ ಅಷ್ಟು ಗಲಾಟೆಮಾಡ್ತೀರಾ?' ಎಂದು ತಾಯಿ ಗದರಿಸುವರು. ಮಕ್ಕಳೆಲ್ಲಾ ಸದ್ದುನಿಲ್ಲಿಸುವುವು. ಶಾಂತ ಸ್ಕೂಲಿನ ವಿಷಯವನ್ನೆಲ್ಲಾ ಹೇಳುವಳು.

'ಮಾವ. ನಮ್ಮ ಮೋಪಮ್ಮನ ಕಣ್ಣು ಸೊಟ್ಟಗೆ.'

'ನೋಡು ನಿನಗೂ, ಸೊಟ್ಟಗಣ್ಣಿನ ಗಂಡ ಸಿಕ್ತಾನೆ'

'ಥೂ. '

'ನನ್ನ ಮದುವೆಯಾಗ್ತೀಯಾ!'

'ಥೂ.'

‘ ಯಾರಿಗೆ ಫೂ.  ಗಂಡನಿಗೋ ನನಗೋ ? ’

‘ ನಂಗಲ್ಲ- ಚಂಪಗೆ ಮದುವೆ ’

‘ ಊಮಾಗೇ.  ನಾಳೆ ಮದುವೆ.’

‘ ನಿಂಗೇ.  ನಿಂಗೇ.  ಮಾವ.  ಚಂಪಗೇ.  ನಿನ್ನೆ ಗಂಡನೊಡನೆ ಮಾತಾಡುತ್ತಿದ್ದಳು.’

‘ ಸುಳ್ಳು ಯಾಕೇಹೇಳ್ತೀ ?  ಬಾ.  ಆಚೆಗೆ ’

‘ ಸುಳ್ಳು  ಏನೇ ?  ನಿನ್ನೆ.  ರಾಮೂ ಜೊತೆಗೆ ಯಾರೋ ಮಾತಾಡುತ್ತಿದ್ದವರು ? ’

‘ ಏನೇ ಇದು ಚಂಪಿ ?  ಗಂಡನ್ನ ಗೋತ್ತುಮಾಡಿಕೊಂಡಿದ್ದು  ನನಗೆ ಹೇಳಲೇ ಇಲ್ಲವಲ್ಲ ಏನೆ ?  ರಂಗಣ್ಣ  ಚಂಪಾನ ಕೀಟಲೆ ಮಾಡುವನು.  ಚಂಪ ಮುಖವನ್ನೆಲ್ಲಾ ಕೆಂಪಗೆ ಮಾಡಿಕೊಂಡು ಶಾಂತೆಯನ್ನು ದುರದುರನೆ ನೋಡುವಳು

‘ ಯಾರೇ ಶಾಂತ.  ರಾಮು ಅಂದರೆ ? ’

‘ ನೆರೆಮನೆ ಹುಡುಗ ಮಾವ.  ಕತ್ರನೆ  ಕೋಡಂಗಿ.’

‘ ನೀನು ಕರಿಯ ಕೋಡಂಗಿ.’

‘ ನೋಡಿ ಮಾವ.  ಅದಕ್ಕೇ.  ಇವಳಿಗ್ಯಾಕೆ ಸಿಟ್ಟು ನಾನು ರಾಮೂನ ಹೆಸರೆತ್ತಿದರೆ ? ’

‘ ಶಾಳು.  ನೀನು ಸ್ಲೇಟು ಒಡೆದಿದ್ದು ಅಪ್ಪನಿಗೆ ಹೇಳ್ತೀನಿ. ಅದನ್ನ ಶಾಂತ  ಹೇಳಲಾ. ?

ಶಾಂತ ಇದ್ದಕ್ಕಿದ್ದಂತೆ ಶರಣಾಗತಳಾಗುವಳು.

‘ ಹೇಳಲಾ.  ಹುಂಡಿತಾ ಹೇಳಲಾ ? ’

‘ ಬೇಡ  ’

‘ ದಮ್ಮಯ್ಯ ಅನ್ನು ’

‘ ದಮ್ಮಯ್ಯ ’

‘ ತಪ್ಪಾಯ್ತು ಅನ್ನು’

‘ ತಪ್ಪಾಯ್ತು ’

‘ ಕೆನ್ನೆಗೆ ಹೊಡೆದುಕೊ ’

ಶಾಂತ ಅಳುವಳು. ರಂಗಣ್ಣ ಈಗ ಮಧ್ಯಸ್ತಿಕೆ ನಡೆಸುವನು–ಇನ್ನು ಮೇಲೆ ತನ್ನ ತಮಾಷೆ ಮಾಡೋದಿಲ್ಲ ಅನ್ನುವತನಕ ಚಂಪ ಬಿಡಳು.

‘ ಮಾವ. ಕಾಮಾಚ್ಚಮ್ಮ ಯಾವಗಬರ್ತಾರೆ ? ’

‘ ಗೊತ್ತಿಲ್ಲ ಮಗೂ ’

‘ ಕಾಮಾಚ್ಚಮ್ಮ ತಿಂಡಿ ಕೊಡೊದೇ ಇಲ್ಲ ಮಾವ. ನೀವೇ ಒಳ್ಳೋರು.

‘ ಹಾಗಾದರೆ ಕಾಮಚ್ಚಮ್ಮನ್ನ ಕರೆದುಕೊಂಡು ಬರೋದೇ ಬೇಡ, ಅಲ್ಲವೇನೇ ಉಮಾ ’

ಅಡಿಗೆ, ಯಾರೇ ಮಾಡೋರು ?

‘ ಮಾವ ಮಾಡ್ತಾರೆ ’

‘ ಸಂಗೆ ಬರೋಲ್ಲ. ನೀನುಮಾಡ್ತೀಯಾ ? ’

‘ ನಮ್ಮಮ್ಮ ಮಾಡ್ತಾಳೆ. ನಮ್ಮ ಜೊತೆಗೇ ಊಟಕ್ಕೆ ಬಾ ಮಾವ ’

‘ ಆಗಲಿ ಬರ್ತೇನೆ.’

‘ ಅಮ್ಮಾ ಮಾವ ಊಟಕ್ಕೆ ಬರ್ತಾರಂತೆ ’ ಎಲ್ಲವೂ ಒಟ್ಟಿಗೆ ಕೂಗಿಕೊಳ್ಳುವುವು.

‘ಈಗ ನೀವೆಲ್ಲಾ ಹೋಗಿ. ನಾನು ನಿದ್ದೇ ಮಾಡಬೇಕು. ಆಮೇಲೆ ಬನ್ನಿ

‘ ಬಾರೇ, ಬಾರೆ ! ಮಾವ ನಿದ್ದೆಮಾಡಬೇಕಂತೆ ’

ಆದಿನ ರಾತ್ರಿಯ ಸಿಫ್ಟಿನಿಂದ ಬೆಳಗಿನ ಸಿಫ್ಟಿಗೆ ಬದಲಾವಣೆಯಾದದ್ದರಿಂದ ರಂಗಣ್ಣ ಕೆಲಸಕ್ಕೆ ಹೋಗಿರಲಿಲ್ಲ. ಸಂಜೆಯ ಹೊತ್ತಿಗೆ ಹಾಗೂ ಬಸವನ ಗುಡಿಯ ಕಡೆ ಹೋಗಿದ್ದ. ಅಲ್ಲಿಯೇ ಒಂದು ಬಂಡೆಯಮೇಲೆ ಕಾಲುಚಾಚಿ ಮಲಗಿದ್ದ. ಕತ್ತಲಾಯಿತು. ಮೇಲೆ ಕೆಳಗೆ ಎರಡು ಕಡೆಯಲ್ಲಿಯೂ ಅಸಂಖ್ಯಾತ ನಕ್ಷತ್ರಗಳು. ಜನಸಂಚಾರ ಕಡಮೆಯಾಗುತ್ತ ಬಂತು. ಅವನು ಎದ್ದು ಮನೆಯ ಕಡೆ ಹೊರಟ. ಗೇಟು ತೆಗೆದ ಶಬ್ದಕೇಳಿ ಮಕ್ಕಳು ಓಡಿ ಬಂದವು— ಚಂಪ, ಶಾಂತ ಉಮಾ, ಒಂದೇ ಧ್ವನಿಯಲ್ಲಿ

'ಮಾವ, ಅಮ್ಮ ಇಲ್ಲ. ಅಮ್ಮ ಹೊರಟು ಹೋದಳು' ಎನ್ನುತ್ತ ಅಳ ತೊಡಗಿದವು. ರಂಗಣ್ಣ ಗಾಬರಿಯಾದ.

'ಏನಮ್ಮ, ಏನು ? ಏನಾಯಿತು'

'ಅಮ್ಮ ನಮ್ಮನ್ನೆಲ್ಲಾ ಬಿಟ್ಟು ಹೊರಟು ಹೋದಳು'

'ಹೊರಟು ಹೋದಳು ಎಂದರೇನು? ಇದ್ದಕ್ಕಿದ್ದಂತೆ ಏನಾದರೂ ಪ್ರಾಣಾ ಪಾಯವಾಯಿತೆ ? ಮಧ್ಯಾಹ್ನ ಮನೆಗೆಲಸ ಮಾಡುತ್ತಿದ್ದರಲ್ಲ ! ಯಾವ ಅಸ್ವಸ್ಥ ತೆಯೂ ಇದ್ದಂತೆ ತೋರಲಿಲ್ಲವಲ್ಲ'

'ಅಪ್ಪ ಮನೆಗೆ ಬಂದಿಲ್ಲವೇ ?'

'ಇಲ್ಲ.'

'ಏನೋ ಅನಾಹುತವಾಗಿಹೋಗಿದೆ' ಅವುಗಳೊಡನೆ ರಂಗಣ್ಣ ಮನೆಗೆಹೋದ. ಮನೆಯಲ್ಲಿ ಎಲ್ಲಿಯೂ ಕಮಲಮ್ಮನ ಸುಳಿವೇ ಕಾಣಿಸಲಿಲ್ಲ. ಒಂದು ಸಂಶಯ ನಿವೃತ್ತಿಯಾಯಿತು. ಅವರ ಜೀವಕ್ಕೆ ಏನೂ ಆಗಿಲ್ಲ. ಇಲ್ಲೇ ಎಲ್ಲೋ ಹೋಗಿರ ಬೇಕು. ಹುಡುಗಿಯರು ಸುಮ್ಮನೆ ಗಾಬರಿಯಿಂದ ಅಳುತ್ತಿದ್ದಾರೆ.

'ಎಷ್ಟು ಹೊತ್ತು ಆಯಿತು ಹೋಗಿ ಚಂಪಾ ? ಎಲ್ಲಿಗೆ ಹೋಗುತ್ತೇನೆಂದು ಹೇಳಿ ಹೋದರು ?'

"ಸಂಜೆಗೆ ಮೊದಲೇ ಹೊರಟು ಹೋದಳು. ನಮಗೆಲ್ಲಾ ಅನ್ನ ಹಾಕಿ ಅಪ್ಪ ಬರುವವರೆಗೆ ಎಲ್ಲಿಗೂ ಹೋಗಬೇಡಿ. ಮನೆಯಲ್ಲೇ ಆಟ ಆಡಿಕೊಂಡಿರಿ. ಹಸಿ ವಾದರೆ ಈ ಮೂಲೆಯಲ್ಲಿ ರಾಗಿಹಿಟ್ಟು, ಸಕ್ಕರೆ ಇದೆ. ಚಂಪ, ಎಲ್ಲರಿಗೂ ಕಲಸಿ ಕೊಟ್ಟು ನೀನೂ ತಿನ್ನು, ಎಂದು ಹೇಳಿಹೋದಳು."

"ಛೇ ಸುಮ್ಮನೆ ಏಕೆ ಅಳುತ್ತೀರಿ ? ಇಲ್ಲೇ ಎಲ್ಲೋ ಹೋಗಿದ್ದಾರೆ. ಈಗ ಬರುತ್ತಾರೆ."

'ಹೋಗುವಾಗ ನಮ್ಮೆಲ್ಲರನ್ನೂ ಮುದ್ದಿಟ್ಟು ಹೋದಳು. ಸರಿಯಾಗಿ ಓದಿ ಕೊಂಡು, ಕೆಟ್ಟ ಜೇಷ್ಟೆಗೆ ಹೋಗದೆ ಇರಿ. ಉಮಾ, ಸುಮ್ಮನೆ ಹಟಮಾಡಬೇಡ. ಒಳ್ಳೆಯ ಹುಡುಗಿಯಾಗಿರು. ಸ್ಕೂಲಿಗೆ ಹೋಗುವಾಗ ಕಾರುಗೀರು ಜಟಕಾ ಜೋಕೆ. ಚಂಪ, ನೀನು ಎಲ್ಲರಿಗೂ ನಿತ್ಯವೂ ಮೈ ತೊಳೆಸಿ ತಲೆಬಾಚಿ ಒಗೆದ ಲಂಗ ಹಾಕಬೇಕು ಅಂತ ಏನೇನೋ ಹೇಳಿದಳು ಮಾವ.'

ರಂಗಣ್ಣನ ಮನಸ್ಸು ಹಿಂದಿನ ನೆನಪಿನಿಂದ ಬೆದರಿತು.

ಮನಸ್ಸು ಬಂದಂತೆ ನಡೆದು, ಗಂಡಸರ ಕುಲದಮೇಲೆಯೇ ಸೇಡುತೀರಿಸಿ ಕೊಂಡಿರಬಾರದೇಕೆ ? ಎಲ್ಲಿಯಾದರೂ ಕಮಲಮ್ಮ ಇದೇ ನಿಶ್ಚಯಕ್ಕೆ ಬಂದು ಬಿಟ್ಟ ಳೇನು ? ಆಕೆಯ ಸಹನೆಯು ಮೇರೆ ಮೀರಿತೇನು ? ಈ ಪರಿಸ್ಥಿತಿಗೆ ಅವಕಾಶ

ಕೊಟ್ಟ ಸುಂದರರಾಯನ ಮೇಲೆ ಅವನಿಗೆ ಮಿತಿಮೀರಿದ ದ್ವೇಷವುಂಟಾಯಿತು.

ಮಕ್ಕಳನ್ನೆಲ್ಲಾ ಸಮಾಧಾನ ಪಡಿಸಿ ಮುಗಿಸಿದ್ದಾಯಿತು. ಹನ್ನೊಂದು ಘಂಟೆಯ ವೇಳೆಗೆ ಸುಂದರರಾಯನ ಸವಾರಿ ಚಿತ್ತೈಸಿತು. ಅವನ ಆಗಮನವನ್ನು ಸೆಂಟಿನ ಪರಿಮಳವೇ ಸೂಚಿಸಿತು. ಆ ಹೊತ್ತಿನಲ್ಲಿ ಮುಂಬಾಗಿಲಿನಲ್ಲಿ ಕಾದು ಕುಳಿತಿದ್ದ ರಂಗಣ್ಣನನ್ನು ಕಂಡು ಅವನಿಗೆ ಸ್ವಲ್ಪ ಆಶ್ಚರ್ಯವೇ ಆಯಿತು.

' ಏನ್ರೀ ರಂಗಣ್ಣ, ಇಲ್ಲಿ ಕುಳಿತಿದ್ದೀರಲ್ಲಾ ? '

ನಡೆದುದನ್ನು ನೋಡಿ ಸುಂದರರಾಯ ಪೂರಾ ಎದೆಗೆಟ್ಟ. ತಲೆಯಮೇಲೆ ಕೈಹೊತ್ತುಕೊಂಡು ಏನೂ ತೋಚದೆ ಕುಳಿತು ಬಿಟ್ಟ. ಅವನದು ಒಂದೇ ಪ್ರಶ್ನೆ

' ಏನು ಮಾಡುವುದರೀ ರಂಗಣ್ಣ ? '

ಮನೆಯಲ್ಲಿ ಆಕೆ ಇದ್ದಾಗ ಅವಳನ್ನು ಕೀಳಾಗಿ ಕಂಡು ದೌಷ್ಟ್ಯದಿಂದ ನಡೆದುಕೊಂಡ ಈ ಗಂಡಸು ಈಗ ಮಗುವಿನಂತೆ ಅಳುತ್ತ ಕುಳಿತಿದ್ದಾನೆ. ಇದೂ ಒಂದು ಕಪಟನಾಟಕವೇ ಆದರೂ ಇವನಿಗೆ ಧೈರ್ಯ ಹೇಳಬೇಕಾದುದು ತನ್ನ ಮೊದಲನೆಯ ಕೆಲಸ.

' ಯಾಕ್ರಿ ಭಯಪಡ್ತೀರಾ ? ಎಲ್ಲೋ ಸ್ನೇಹಿತರ ಮನೆಗೋ, ನೆಂಟರ ಮನೆಗೋ ಹೋಗಿರಬಹುದು. ಏನು ಕಾರಣವೋ ಬರಲಾಗಲಿಲ್ಲ. ನಾಳೆ ಬೆಳಿಗ್ಗೆ ಬರಬಹುದು. '

' ಇಲ್ಲ ರಂಗಣ್ಣ ನಾನು ಪಾಪಿ. ಅವಳಿಗೆ ನಾನು ವಿಪರೀತ ಕಷ್ಟಕೊಟ್ಟೆ. ಅವನ್ನು ಸಹಿಸದೆ ಹೊರಟುಹೋಗಿದ್ದಾಳೆ. ಇನ್ನು ಬರುವುದಿಲ್ಲ. ಖಂಡಿತಾಗೊತ್ತು '

ಇದೇ ಪಶ್ಚಾತ್ತಾಪ ಸ್ವಲ್ಪ ಮೊದಲೇ ಇದ್ದಿದ್ದರೆ ? ರಂಗಣ್ಣನಿಗೆ ಅದನ್ನು ಈಗಲೇ ಹೇಳಬೇಕು ಎಂದೆನ್ನಿಸಿತು.

' ನೀನು ಪಾಪಿ ಸುಂದರರಾಯ. ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತ ಅನುಭವಿಸು ಎಂದು ಮುಖ ಮುರಿದು ಮಾತಾಡಬೇಕು ಎಂದು ಮಾತುಗಳು ನಾಲಗೆಯ ತುದಿಗೆ ಬಂದು ನಿಲ್ಲುತ್ತವೆ. ಆದರೆ ಅದನ್ನು ಹೇಳುವುದು ಉಚಿತವಲ್ಲ. ತಾನ್ಯಾಕೆ ಅವರ ಸಂಸಾರದ ಸುಳಿಯಲ್ಲಿ ಸಿಕ್ಕಿಕೊಂಡು ಒದ್ದಾಡಬೇಕು. ?

' ಏನೋ ಸಂಸಾರದಲ್ಲಿ ಕಿಲುಬು ಇದ್ದೇ ಇರುತ್ತದೆ.ಎಲ್ಲರ ಮನೆಯ ದೋಸೆಯೂ ತೂತೇ. ಆದಿರಲಾರದು ಎಲ್ಲಿಯೋ ಹೋಗಿದ್ದಾರೆ. ಬರುತ್ತಾರೆ.

" ನಿಮಗೆ ಗೊತ್ತಿಲ್ಲ ರಂಗಣ್ಣ. ತಪ್ಪೆಲ್ಲಾ ನನ್ನದು. ನನಗೆ ಆಗಲೂ ಗೊತ್ತಿತ್ತು. ಈಗಲೂ ಗೊತ್ತಿದೆ. ಆದರೆ ನನ್ನ ಮೇಲೆಯೇ ನನಗೆ ಅಂಕೆಯಿರಲಿಲ್ಲ ಅವಳು ಬಹಳ ಒಳ್ಳೆಯವಳು. ಇಷ್ಟು ದಿನವೂ ಸಹಿಸಿಕೊಂಡಳು. ಈಗ ಹೊರಟು ಹೋದಳು. ಮುಂದೇನುಮಾಡಲಿ ? ಈ ಕೂಸುಗಳ ಗತಿಯೇನು ?

ಅದನ್ನೆಲ್ಲಾ ನಿಧಾನವಾಗಿ ಯೋಚಿಸಿದರಾಯಿತು. ಈಗ ನೀವು ಊಟ ಮಾಡಿ, ಆಮೇಲೆ ಯೋಚಿಸೋಣ.

' ಊಟವೂ ಬೇಡ ಏನೂಬೇಡ. ಈಗ ಪೋಲೀಸಿಗೆ ದೂರು ಕೊಡಲೇ ? '

ಪೋಲೀಸೂ ಬೇಡ ಎಂಥಾದ್ದೂ ಬೇಡ. ಮೊದಲು ಅವರು ಎಲ್ಲಿಗೆ ಹೋಗಿರಬಹುದು ಅಲ್ಲೆಲ್ಲಾ ವಿಚಾರಿಸಿ. ಸುಮ್ಮನೆ ಗಲಾಟೆ ಮಾಡಿಕೊಂಡರೆ ಪ್ರಯೋಜನವಿಲ್ಲ. ಊರಿಗೆಊರೇ ಅಪಹಾಸ್ಯಮಾಡುತ್ತದೆ.

ಮಾಡಲಿಬಿಡಿ. ನನಗೆ ತಕ್ಕ ಪ್ರಾಯಶ್ಚಿತ್ತವಾಗುತ್ತದೆ.

ನಿಮ್ಮೊಬ್ಬರ ಮಾತಲ್ಲ ಇದರಲ್ಲಿ ಕಮಲಮ್ಮನವರ ವಿಚಾರವನ್ನೂ ಸ್ವಲ್ಪ ಯೋಚಿಸಬೇಡವೆ?

ನೋಡಿ ರಂಗಣ್ಣ ನಾನೇ ಅವಳನ್ನು ಒಪ್ಪಿ ಮದುವೆಯಾದದ್ದು. ಅದೊಂದು ದೊಡ್ಡ ಕತೆಯೇ ಸರಿ.

ಅದನ್ನು ಇನ್ನೊಮ್ಮೆ ಹೇಳಿದರಾಯಿತು. ಈಗ ಸ್ವಲ್ಪ ನಿದ್ದೆಮಾಡಿ. ನಾನೂ ಇಲ್ಲೇಬಂದು ಮಲಗುತ್ತೇನೆ.

ಅಷ್ಟರಲ್ಲಿ ಕುಸುಮಾ ' ಅಮ್ಮಾ. ಅಮ್ಮಾ. ಅಮ್ಮಾ ಎಲ್ಲಿ ? ' ಎಂದು ಕೂಗಿಕೊಂಡು ಎದ್ದು ಕುಳಿತಳು. ಸುಂದರರಾಯ ' ನಿನ್ನ ಅಮ್ಮ ಎಲ್ಲರನ್ನೂ ಬಿಟ್ಟು ಹೋದಳು ' ಎಂದ.

ಸ್ವಲ್ಪ ಸುಮ್ಮನಿರಿ ನೋಡೋಣ ಎಂದು ಗದರಿಸಿದ ರಂಗಣ್ಣ. ಕೂಸನ್ನು ಮಲಗಿಸಿ -ಮಲಕ್ಕೊ ಮಗು ಎಂದು ತಟ್ಟಿದ

ಮಾವ ಅಮ್ಮ ಎಲ್ಲಿ ?

ಬರುತ್ತಾರೆ ಮಗು. ಸಿನಿಮಾಕ್ಕೆ ಹೋಗಿದ್ದಾರೆ. ಮಲಕ್ಕೋಮ್ಮ.

ಸುಂದರರಾಯನಿಗೆ ವಿಪರೀತ ನಾಚಿಕೆಯಾಯಿತು. ಮಕ್ಕಳಿಗೆ ಮಾವನೊಡನೆ ಸಲುಗೆಯಿದ್ದಷ್ಟು ತನ್ನೊಡನೆ ಇರಲಿಲ್ಲ. ತಾನೆಂದೂ ಅವುಗಳನ್ನು ಮುದ್ದು ಮಾಡಿ ಆಡಿಸಿರಲಿಲ್ಲ. ಎಂತಹ ಸಂಸಾರ ದ್ರೋಹಿ ತಾನು ?

ಮರುದಿವಸ ರಂಗಣ್ಣ ರಜಾಕ್ಕೆ ಬರೆದು ಕಳಿಸಿದ. ಮೊದಲೇ ಮಂಜೂರಾಗದೇ ರಜಾ ಕೇಳುವುದು ಅಕ್ಷಮ್ಯ ಅಪರಾಧವಾಗಿತ್ತು. ಅವನ ಕಾರ್ಖಾನೆಯಲ್ಲಿ ಹತ್ತುಮೈಲಿ ದೂರದಿಂದ ಜನ ಬರುವರಾದರೂ, ಏನಾದರೂ ಕಾಹಿಲೆ ಕಸಾಲೆಯಾದರೆ ಅವರು ಅದು ಬರುವುದನ್ನು ಭವಿಷ್ಯ ತಿಳಿದು ಮೊದಲೇ ರಜಾಕ್ಕೆ ಅರ್ಜಿ ಹಾಕಿ ಮಂಜೂರಾತಿ ಪಡೆಯ ಬೇಕಾಗಿತ್ತು. ಇದರಿಂದ ಇನ್ನೇನು ಕಿರುಕುಳ ಕಾದಿದೆಯೋ ಕಾರ್ಖಾನೆಯಲ್ಲಿ ? ಆದರೆ ಈ ಹಸು ಮಕ್ಕಳನ್ನು ಸುಂದರರಾಯನ ಪೋಷಣೆಗೊಪ್ಪಿಸಿ ತಾನು ನಿಶ್ಚಿಂತನಾಗಿರುವುದು ಸಾಧ್ಯವಿರಲಿಲ್ಲ..

ಬೆಳಿಗ್ಗೆ ಎಲ್ಲಾ ಹುಡುಗಿಯರಿಗೂ ಕಾಫಿ ತಿಂಡಿ ಮಾಡಿಕೊಟ್ಟು ರಂಗಣ್ಣ ಚಂಪಾನ್ನ ಕರೆದು 'ನಾವು ಅಮ್ಮನ್ನ ಕರೆದುಕೊಂಡು ಬರುತ್ತೇವೆ. ನೀವು ಆಟ ಆಡಿಕೊಂಡು ಇರಿ' ಎಂದು ಹೇಳಿ, ಸುಂದರರಾಯನೊಡನೆ ಕಮಲಮ್ಮನನ್ನು ಹುಡುಕಲು ಹೊರಟ. ಅವಳು ಎಲ್ಲೆಲ್ಲಿ ಹೋಗಿರಬಹುದೋ ಅಲ್ಲೆಲ್ಲಾ ಹುಡುಕಿಯಾಯಿತು. ಯಾರೂ ಆಕೆಯನ್ನು ಕಂಡವರಿಲ್ಲ. ಸುಂದರರಾಯ ಕಣ್ಣೀರು ಕರೆಯಲು ಪ್ರಾರಂಭಿಸಿದ.

'ಎಲ್ಲೋ ಭಾವಿನೋ ಕೆರೇನೋ ಬಿದ್ದು ಪ್ರಾಣತ್ಯಾಗ ಮಾಡಿದ್ದಾಳೆ ಅವಳು'

ರಂಗಣ್ಣನ ಮನಸ್ಸು ಅವಳು ಸತ್ತಿಲ್ಲ ಎಂದು ಹೇಳುತ್ತಿತ್ತು. ಆದರೂ ಕೆರೆ, ಭಾವಿ ಎಲ್ಲಾ ಹುಡುಕಿಯಾಯಿತು. ಕಮಲಮ್ಮ ಸಿಕ್ಕಲಿಲ್ಲ.

ಮೂರುದಿನ ಕಳೆಯಿತು. ಕಮಲಮ್ಮ ಸಿಕ್ಕುವ ಭರವಸೆ ಕಡಿಮೆಯಾಯಿತು. ಇಬ್ಬರಿಗೂ ಒಂದೇ ಕೆಲಸ. ಬೆಳಿಗ್ಗೆ ಹೊರಟು ಸುತ್ತಿಕೊಂಡು ಮಧ್ಯಾಹ್ನ ಮನೆಗೆ ಬರುವುದು. ಹುಡುಗರಿಗೆ ಅನ್ನಕಾಣಿಸಿ ತಾವು ಸ್ವಲ್ಪ ಊಟಮಾಡಿ ಮತ್ತೆ ಹೊರಡುವುದು. ಸಂಜೆಗೆ ಮನೆ. ಈ ಕಷ್ಟದಲ್ಲಿ ಇದ್ದಕ್ಕಿದ್ದಂತೆ ರಂಗಣ್ಣ ಸುಂದರರಾಯರ ಸಂಸಾರದಲ್ಲಿ ಒಬ್ಬನಾಗಿ ಆತ್ಮೀಯನಾಗಿಹೋದ.

ಈ ದಿವಸಗಳಲ್ಲಿ ಸುಂದರರಾಯನಿಗೆ ಎರಡು ಜೀವವಿರುವುದು ರಂಗಣ್ಣನಿಗೆ ಸ್ಪಷ್ಟವಾಯಿತು. ಒಂದು ಹೆಂಡತಿಯಮೇಲಿನ ಪ್ರೀತಿಯಿಂದ ಪೂರ್ಣವಾದ ದೈನ್ಯ ಹೃದಯ. ಇನ್ನೊಂದು ಗಂಡಸಿಗೆ ಸ್ವಾಭಾವಿಕವಾದ ರೂಪತೃಷೆಯಿಂದ ಕೂಡಿದ ಮಾನವ ಜೀವ. ಈರೀತಿಯ ದ್ವಂದ್ವ ವ್ಯಕ್ತಿತ್ವವುಳ್ಳ ಆ ಮಾನವವ್ಯಕ್ತಿ ಅಂತಹ ಪೂಜನೀಯನಲ್ಲದಿದ್ದರೂ ಚಿಂತೆಯಿಲ್ಲ ಆದರಕ್ಕೆ ಅರ್ಹನಾದವನು' ಎಂದು ಸುಂದರರಾಯನಮೇಲೆ ವಿಶ್ವಾಸಮೂಡಿತು. ಈ ಮನುಷ್ಯನನ್ನು ಸ್ವಲ್ಪ ತಿದ್ದಿದರೆ ಪರವಾಯಿಲ್ಲ. ಒಳ್ಳೆಯವನಾದಾನು ಎಂದು ಭರವಸೆಯುಂಟಾಯಿತು. ಆದ್ದರಿಂದ ಮಧ್ಯೆ ಮಧ್ಯೆ ಅವಕಾಶವಾದಾಗಲೆಲ್ಲಾ ಅವನು ಸುಂದರರಾಯನನ್ನು ಒಳ್ಳೆಯ ಮಾತಿನಿಂದಲೇ ಬೈದ. ಅದಕ್ಕೆ ಅವನು ಪ್ರತಿಹೇಳಲಿಲ್ಲ. ಬದಲಾಗಿ ತನ್ನ ಕತೆಯನ್ನು ರಂಗಣ್ಣನಿಗೆ ಹೇಳಿದ.

## ೨೧

ಇಪ್ಪತ್ತುವರ್ಷದ ಹಿಂದಿನ ಕಾಲ. ಸುಂದರ ಕಮಲ ಒಡನಾಡಿಗಳು. ಇಬ್ಬರ ಮನೆಗಳೂ ಮುಗ್ಗುಲಲ್ಲಿಯೇ. ಆಗ ಕಮಲಮ್ಮ ನಿಜವಾಗಿಯೂ ಸುಂದರಿಯಾಗಿದ್ದಳು.

ಸುಂದರನ ಮನೆಯಲ್ಲಿ ಇಬ್ಬರೂ ಒಂದುದಿನ ಆಡುತ್ತಿದ್ದರು. ಸುಂದರ ತಾನು ಚಿತ್ರಬರೆಯುವುದರಲ್ಲಿ ಪ್ರವೀಣನೆಂದುಕೊಂಡಿದ್ದ. ಮನೆಯ ಗೋಡೆಯ ಮೇಲೆಲ್ಲಾ ಅವನ ಚಿತ್ರಲೇಖನದ ಚಾತುರ್ಯ ಒಡೆದು ಕಾಣುತ್ತಿತ್ತು. ಒಂದು ದಿನ ಸ್ಲೇಟಿನಮೇಲೊಂದು ಚಿತ್ರಬರೆದು ಕಮಲೆಗೆ ತೋರಿಸಿ 'ಇದೇನು?' ಎಂದು ಕೇಳಿದ. ಕಮಲ 'ಕತ್ತೆ' ಎಂದಳು. ಸುಂದರನ ಮನಸ್ಸಿನಲ್ಲಿ ಅದು ಕುದುರೆಯೇ ನೆಗೆದು ಬರುವಂತಿದೆಯೆಂದು ಅಭಿಮಾನವಿತ್ತು. ಆ ಜೋಟುದ್ದದ ಹುಡುಗಿ ಅದನ್ನು ಅಲ್ಲಗಳೆಯುವುದು ಅವನ ಆತ್ಮಾಭಿಮಾನಕ್ಕೆ ಕುಂದು.

'ನಿನಗೆ ಕಣ್ಣಿದ್ದರೆ! ಅದು ಕುದುರೆ'

'ಅಲ್ಲ ಕತ್ತೆ. ಇದು ಕುದುರೆಯಾಗಿ ಸತ್ತಿತ್ತು'

'ನಿನ್ನ ಕಣ್ಣೇ ಕುರುಡು. ಇದು ಕುದುರೆ. ಥೇಟ್ ರೇಸ್ ಕುದುರೆ'

'ಕತ್ತೆ ಕುದುರೆ'

'ಇದನ್ನು ಕುದುರೆಯೆಂದು ಒಪ್ಪುತ್ತೀಯೋ ಇಲ್ಲವೋ'

'ಇದು ಕತ್ತೆ. ಕತ್ತೆ. ಕ..'

ಸುಂದರ ಕಮಲೆಯ ಕೆನ್ನೆಗೊಂದು ಬಿಟ್ಟ. ಕಮಲ ಅದನನ್ನು ಹಿಡಿದು ಪರಚಿದಳು. ಸುಂದರ ಕೊಸರಿಗೊಂದು ಬಿಟ್ಟ. ಕಮಲೆ ಅಳುತ್ತಾ ಹೋದಳು.

'ಕತ್ತೆ, ಕತ್ತೆ, ಕತ್ತೆ, ನಿನಗೆಲ್ಲಿ ಕುದುರೆ ಬರೆಯುವ ಯೋಗ್ಯತೆ?'

'ನಿನ್ನ ಹಲ್ಲು ಮುರಿಸಿಬಿಡುತ್ತೀನಿ ನೋಡು'

'ಇನ್ನೊಂದುಸಾರಿ ಹುಟ್ಟಿಬರಬೇಕು. ಪುಗಸಾಟೆ'

ಅಂಗಳದಲ್ಲೊಂದು ಜೇನು ಕಟ್ಟಿತ್ತು. ಹುಳುಗಳು ಹೂ ಕೊಯ್ದು ತಂದು ಗೂಡಿಗೆ ಸೇರಿಸುತ್ತಿದ್ದುವು. ಜೇನು ಗೂಡು ಕಪ್ಪಗೆ ಜೋಲಾಡುತ್ತಿತ್ತು. ಅದನ್ನು ನೋಡಿ ಕಮಲೆಯ ದುಃಖ ಅದೃಶ್ಯವಾಯಿತು. ಅಲ್ಲಿಯೇ ಅದನ್ನು ನೋಡುತ್ತಾ ನಿಂತಿದ್ದಳು. ತನ್ನ ಚಿತ್ರಕಲಾಕೌಶಲ್ಯಕ್ಕೆ ಆದ ಅವಮಾನದಿಂದ ರೇಗಿದ ಸುಂದರ ತನ್ನ ಜಾಣ್ಮೆಯನ್ನು ಒಪ್ಪದ ಕಮಲೆಯ ಚಪಲವನ್ನೇ ನಿರೀಕ್ಷಿಸುತ್ತಿದ್ದ. ಅವನ ಮನಸ್ಸಿನಲ್ಲಿ ಪ್ರತೀಕಾರದ ಬಯಕೆ ಉಲ್ಬಣವಾಗಿತ್ತು. ಹಿಂದು ಮುಂದು ನೋಡದೆ ಒಂದು ಕಲ್ಲು ತೆಗೆದು ಜೇನು ಗೂಡಿಗೆ ಗುರಿಯಿಟ್ಟು ಹೊಡೆದುಬಿಟ್ಟ.

ಕಮಲೆಯನ್ನು ತಂದು ಮನೆಯಲ್ಲಿ ಮಲಗಿಸಿದ್ದರು. ರೇಗಿದ ಹುಳುಗಳಿಂದ ಅವಳನ್ನು ತಪ್ಪಿಸಿ ಕರೆತರುವುದೇ ಭಗೀರಥಯತ್ನವಾಗಿತ್ತು. ಅವಳ ಮನೆಯವರೂ ತನ್ನ ಮನೆಯವರೂ ಸುತ್ತಲೂ ನೆರೆದಿದ್ದರು. ಅವಳಿಗೆ ಮೈಮೇಲೆ ಎಚ್ಚರವಿರಲಿಲ್ಲ. ಅವಳ ತಾಯಿ ಗೊಳೋ ಎಂದು ಅಳುತ್ತಿದ್ದರು. ಅರೆಗಳಿಗೆಯಲ್ಲಿಯೇ ಮುಖವೆಲ್ಲಾ

ಊದಿಕೊಂಡು ಇದು ಕಣ್ಣು, ಇದು ಬಾಯಿ ಎಂದು ಗುರುತಿಸುವುದೇ ಬಹಳ ಕಷ್ಟವಾಗಿತ್ತು.

ಸುಂದರ ಒಳಗೆ ಇಣಿಕಿ ನೋಡಿದ. ಹೆದರಿಕೆಯಿಂದ ಅವನ ಅರ್ಧ ಪ್ರಾಣವೇ ಹಾರಿಹೋಗಿತ್ತು. ತಾನು ಕಲ್ಲು ಬೀರಿದರೆ ಕಮಲೆ ಜೇನು ಹುಳುಗಳಿಗೆ ಹೆದರಿ ಓಡಿಯಾಳು, ತಾನು ನೋಡಿ ಚಪ್ಪಾಳೆ ತಟ್ಟಿ ಗೇಲಿ ಮಾಡಿ ನಕ್ಕೇನು, ನಕ್ಕು-ಸೇಡು ತೀರಿಸಿಕೊಂಡೇನು ಎಂದು ಅವನು ಭಾವಿಸಿದ್ದ. ಆದರೆ ಈಗ ವಿಪರೀತಕ್ಕೆ ಇಟ್ಟುಕೊಂಡುಬಿಟ್ಟಿತ್ತು.

ಅವನ ಅಪರಾಧವನ್ನು ಯಾರೂ ಪ್ರಶ್ನೆ ಮಾಡಿರಲಿಲ್ಲ. ಆದರೆ ಅವನ ಮನಸ್ಸು ಮಾತ್ರ ಭಯಗೊಂಡಿವೆ. ಬಹುಶಃ ಕಮಲೆಗೆ ತಾನೇ ಕಲ್ಲು ಹೊಡೆದಿದ್ದು ಎನ್ನುವುದು ತಿಳಿದಿರಬಹುದು. ಅದು ಗೊತ್ತಾದರೆ ತನ್ನ ಗತಿಯೇನು? ಕಮಲೆಗೆ ಏನಾಗುವುದೋ ಏನೋ? ಸುಂದರ ಪಶ್ಚಾತ್ತಾಪದಿಂದ ಬೆಂದುಹೋಗಿದ್ದಾನೆ.

ಕಮಲೆಯನ್ನು ಆಸ್ಪತ್ರೆಗೆ ಸೇರಿಸಿದ್ದರು. ಆವಳಿಗೆ ಕೆಂಡದಂತಹ ಜ್ವರ ಬರಲು ಪ್ರಾರಂಭಿಸಿತು. ಆಕೆಯ ಮನೆಯವರು ಆಸೆ ನಿರಾಸೆಗಳ ಮಧ್ಯೆ ತೂರಾಡುತ್ತಿದ್ದರು. ಸುಂದರನೂ ಆಸ್ಪತ್ರೆಗೆ ಅವಳನ್ನು ನೋಡಲು ಹೋಗಿದ್ದ. ಆದರೆ ಅವಳೊಡನೆ ಯಾರೂ ಮಾತಾಡುವಂತಿರಲಿಲ್ಲ. ಮನೆಗೆ ಬಂದು ಅಕ್ಕನನ್ನು ಕೇಳಿದ. "ಕಮಲೆ ಬದುಕುತ್ತಾಳೆಯೇ?" ಎಂದು. ಅಕ್ಕ ಹೇಳಿದರು.

"ಡಾಕ್ಟರು ಈಗಲೇ ಯಾವುದೂ ಹೇಳಲು ಬರುವಂತಿಲ್ಲವೆಂದರು" ಆಗ ಸುಂದರನಿಗೆ ಸಾವು ಎನ್ನುವುದು ಅಷ್ಟಾಗಿ ತಿಳಿಯದು. ಆದರೂ ಅಜ್ಜಿಯ ಹೇಳಿಕೆಯಂತೆ ತಾನು ಮುಂದೆ ಯಮಧರ್ಮರಾಯನ ಮುಂದೆ ಹೋಗಿ ನಿಂತಾಗ ಚಿತ್ರಗುಪ್ತ ದಫ್ತರವನ್ನು ಬಿಚ್ಚಿ 'ಇವನು ಕಮಲೆಯನ್ನು ಕೊಂದವನು' ಎಂದು ತಪ್ಪು ಹೊರಿಸಿದರೆ ಏನು ಜವಾಬು ಹೇಳುವುದು? ಸುಂದರನ ಕನಸಿನಲ್ಲಿ ಭಯಂಕರ ದೃಶ್ಯಗಳು ಕುಣಿಯುತ್ತಿದ್ದುವು. ರಾತ್ರಿ ಇದ್ದಕ್ಕಿದ್ದಂತೆ ಅಯ್ಯೋ ಎಂದು ಕಿರಿಚಿಕೊಳ್ಳುತ್ತಿದ್ದ. ರಾತ್ರಿಯೆಲ್ಲಾ ಅಳುತ್ತಿದ್ದ. ಆ ಸಮಯದಲ್ಲಿ ಅವನು ಎಲ್ಲಾ ದೇವರಿಗೂ ಅಸಾಧ್ಯವಾದ ಹರಕೆಗಳನ್ನು ಹೊತ್ತು ದಿನವೂ ಈಶ್ವರನ ಮುಂದೆ ನಿಂತು 'ಕಮಲೆಯನ್ನು ಬದುಕಿಸಿ ಕೊಡು' ಎಂದು ಮೊರೆಯಿಡುತ್ತಿದ್ದ.

ಕಮಲೆ ಗುಣಹೊಂದುತ್ತಾ ಬಂದಳು. ಅವಳನ್ನು ನೋಡಲು ದಿನವೂ ಸುಂದರ ಹೋಗುತ್ತಿದ್ದ. ಇವನ ವಾತ್ಸಲ್ಯವನ್ನು ಕಂಡು ಬಂಧುಗಳು ಬೆರಗಾದರು ಕೊನೆಗೆ ಕಮಲೆ ಆಸ್ಪತ್ರೆಯನ್ನು ಬಿಟ್ಟು ಮನೆಗೆ ಬಂದಳು. ಆದರೆ ಮುಖದತುಂಬಾ

ಕಲೆಗಳು ತುಂಬಿ ವಿಕಾರವಾಗಿತ್ತು. ಇನ್ನೂ ಚಿಕ್ಕ ಹುಡುಗಿಯರಾಗಿದ್ದರೂ ತನ್ನ ಸೌಂದರ್ಯವೇ ತನ್ನ ಜೀವ ಎಂದವಳಿಗೆ ತಿಳಿದಿತ್ತು. ಡಾಕ್ಟರು ಕಾಲಕಳೆದವೆ ಆ ಕಲೆಗಳು ಮಾಯಬಹುದು ಎಂದು ಆಸೆ ತೋರಿಸಿದ್ದರು.

ಕಾಲ ಕಳೆಯಿತು. ಈಗ ಕಮಲೆ ಮದುವೆಗೆ ನೆರೆವ ಹೆಣ್ಣು. ಆದರೆ ಆಕೆಯನ್ನು ಮದುವೆಯಾಗುವವರ್ಯಾರು ? ಅಂಗಹೀನರೂ ಸಹ ರತಿಯನ್ನೇ ಬಯಸುವಾಗ ಅವಳ ವಿವಾಹ ಸಮಸ್ಯೆ ತಾಯಿತಂದೆಗಳಿಗೆ ಅಗಾಧವಾದುದಾಯಿತು.

ಸುಂದರ ತನ್ನ ಅಪರಾಧದ ವಿಷಯ ಯೋಚಿಸುತ್ತಲೇ ಇದ್ದ. ಮರೆತರೂ ಕಮಲೆಯನ್ನು ನೋಡಿದಾಗ ಅದು ನೆನಪಾಗುತಿತ್ತು. ಹಿಂದಿನ ಪಾಪ-ಪುಣ್ಯ ಸ್ವರ್ಗ-ನರಕಗಳ ಭಾವನೆಹೋಗಿ ಕರ್ತವ್ಯ ಜವಾಬ್ದಾರಿ ಎಂಬ ಭಾವನೆ ಅವನಲ್ಲಿ ಬೆಳೆಯಿತು. ಗಂಡಿನ ಬೇಟೆಯ ಸಂತೆಯಲ್ಲಿ ಹೆಣ್ಣು ಮಾರಲಿರುವ ಸರಕು ಎಂದರೆ ಅವಳ ರೂಪ. ಕಮಲೆಯ ಸರಕನ್ನು ಹಾಳುಮಾಡಿ ಇಂದು ಅವಳು ಬೀದಿಯ ಭಿಕಾರಿಯಾಗುವಂತೆ ಮಾಡಿದ ಜವಾಬ್ದಾರಿ ತನ್ನದು. ಈ ನಷ್ಟವನ್ನು ಕೂಡಿಸಿ ಕೊಡುವ ಕರ್ತವ್ಯವೂ ತನ್ನದು. ಇಲ್ಲದಿದ್ದರೆ ತಾನು ಆ ಜನ್ಮವೂ ಈ ಅಪರಾಧದ ಹೊರೆಯನ್ನು ಹೊತ್ತು ಅಂತರಾತ್ಮನೆದುರು ನಾಚಿ ತಲೆ ತಗ್ಗಿಸಬೇಕಾಗುವುದು. ಆಗಿನ ವಯಸ್ಸಿನಲ್ಲಿ ಸುಂದರ ಸ್ವಲ್ಪ ಧ್ಯೇಯಜೀವಿ. ಯೌವನದ ಬಿಸಿ ರಕ್ತದ ಕಾಲದಲ್ಲಿ ವಸ್ತು ಸ್ಥಿತಿಯ ಪರಿಜ್ಞಾನ ಕಡಿಮೆಯಾಗುತ್ತದೆ. ಎಲ್ಲವೂ ಧ್ಯೇಯಕ್ಕೆ ತಕ್ಕಂತೆ ನಡೆಯುತ್ತದೆ. ತಾನಾದರೂ ತನ್ನ ಸ್ವಾಮಿಯಾಗಿಯೇ ಎಂದೂ ಇರುತ್ತೇನೆ ಎಂಬ ಆತ್ಮ ವಿಶ್ವಾಸದ ಕೆಚ್ಚು ಅವನನ್ನು ಹುರಿದುಂಬಿಸಿ ಅವನು ಕಮಲೆಯನ್ನು ಪತ್ನಿಯಾಗಿ ಸ್ವೀಕರಿಸುವಂತೆ ಮಾಡಿತು. ತನ್ನವರು ಯಾರೂ ಒಪ್ಪಲಿಲ್ಲ. ಆದರೆ ಇವನ ನಿರ್ಧಾರದ ಮುಂದೆ ಅವರ ಅಸಮ್ಮತಿ ನಿಲ್ಲಲಿಲ್ಲ. ಆಗ ಅವನಿಗೆ ಕಾಣುತ್ತಿದ್ದುದು ಕಮಲೆಯ ಬಾಹ್ಯರೂಪವಲ್ಲ. ಕವಿಕಲ್ಪನೆಯ ಒಂದು ರೂಪ.

ಮನೆಯಾಯಿತು. ಕಮಲೆ ಬಹಳ ಕೃತಜ್ಞತೆಯನ್ನು ನಡೆ ನುಡಿಗಳಲ್ಲಿ ವ್ಯಕ್ತಪಡಿಸಿದಳು. ಕೆಲವು ಕಾಲ ಸಂಸಾರ ಸುಖವಾಗಿತ್ತು. ಆದರೆ ಕಾಲ ಕಳೆದಂತೆಲ್ಲಾ ಸುಂದರನ ಕವಿಗನಸು ಜಾರುತ್ತ ಬಂದಿತು. ತನ್ನ ತ್ಯಾಗದಿಂದ ಒಂದು ಹೆಮ್ಮೆ ಅವನಲ್ಲುಂಟಾಗಿತ್ತು. ಆ ಹೆಮ್ಮೆಯ ದೆಸೆಯಿಂದ ಗಂಡ ಹೆಂಡಿರ ಸಂಬಂಧದಾತ ದರಿದ್ರರದಾಗಿ ಉಳಿಯಿತೇ ಹೊರತು ಪ್ರೀತಿ ಬೆಳೆಯಲಿಲ್ಲ. ಬರುಬರುತ್ತಾ ಅವನಲ್ಲಿ ರೂಪತೃಷೆ ಹೆಚ್ಚುತ್ತಾಹೋಯಿತು. ಹೆಂಡತಿಯ ಕುರೂಪು ಅವನಲ್ಲಿ ಜಿಗುಪ್ಸೆಯನ್ನು ಹೆಚ್ಚಿಸುತ್ತಾ ಬಂದಿತು. ಆದರೆ ಕಮಲೆ ತಾನು ಕುರೂಪಿಯೆಂಬುದನ್ನು ಮರೆಯುತ್ತಬಂದಳು. ನಿಜವಾಗಿಯೂ ಅವಳಕಲೆ ಮಾಯುತ್ತು

ಬಂದಿತ್ತು. ಯಾವ ಹೆಣ್ಣು ತಾನೇ ತಾನು ಕುರೂಪಿಯೆಂದು ನಂಬುತ್ತಾಳೆ? ಅದೇ ಬರುಬರುತ್ತ ಕೊನೆಗೆ ಆತ್ಮವಂಚನೆಯು. ತಾನು ರತಿಯಲ್ಲದಿದ್ದರೂ ಯಾರ ಕಣ್ಣನ್ನಾದರೂ ಆಕರ್ಷಿಸಬಲ್ಲ ಹೆಣ್ಣು ಎಂದು ನಂಬಿಕೆಯಾಗುತ್ತದೆ. ಇದರ ವಿರುದ್ಧ ಭಾವ ಸುಂದರನಲ್ಲಿತ್ತು. ಅವನ ಕಣ್ಣಿಗೆ ಕಮಲೆಯ ರೂಪದಲ್ಲಾಗುತ್ತಿದ್ದ ಸುಧಾರಣೆಯಾಗಲೀ, ಯೌವನದ ಆಕರ್ಷಣೆಯಾಗಲೀ, ಗಮನಕ್ಕೆ ಬರಲಿಲ್ಲ. ಕಣ್ಣಿಟ್ಟು ನೋಡಿದರೆ ತಾನೇ ಗಮನಕ್ಕೆ ಬರುವುದು! ಒಂದು ಸಾರೆ ಕುರೂಪಿ ಎಂದು ನಿರ್ಧರಿಸಿದ ಮೇಲೆ ಅದೇ ಹೆಣ್ಣನ್ನು ಸುರೂಪಿ ಎಂದು ಯಾವ ಗಂಡೂ ನಂಬುವುದಿಲ್ಲ.

ಸುಂದರರಾಯ ರಸಿಕ. ಜೀವನದಲ್ಲಿ ಸವಿಯಾದುದನ್ನು ಸವಿಯಬೇಕೆನ್ನುವವ. ಕಮಲೆಯು ವಿಧೇಯವಾಗಿ ತನ್ನ ಕರ್ತವ್ಯವನ್ನು ಮುಗಿಸಿದಮೇಲೆ ತನ್ನ ಮನಸ್ಸಿನ ತೃಪ್ತಿಗೆ ಬೇರೆಕಡೆ ಹೋಗುವುದರಲ್ಲಿ ಅವನು ಯಾವ ದೋಷವನ್ನು ಕಾಣಲಿಲ್ಲ. ಆದರೆ ಕಮಲಮ್ಮ ಹೆಂಗಸು. ತನ್ನ ಗಂಡ ಸಂಪೂರ್ಣವಾಗಿ ತನ್ನವನೇ ಆಗಿರಬೇಕೆಂಬ ಈರ್ಷೆಯುಳ್ಳ ಹೆಂಗಸು. ಇದೇ ಈರ್ಷೆಯು ಹುಚ್ಚು ಹೊಳೆಯಲ್ಲಿ ಕುಂದುಕೊರತೆಗಳ ಅರಿವು ಕೊಚ್ಚಿಹೋಗಿಬಿಡುತ್ತದೆ. ಇದೇ ಅವರ ಜೀವನದ ದುರಂತದ ಆರಂಭ.

* * * * * *

ನಾಲ್ಕನೆಯ ದಿವಸ ಸ್ವಲ್ಪ ಕಾರ್ಖಾನೆಗೆ ಹೋಗಿ ಮಧ್ಯಾಹ್ನ ಬಂದು ಬೀಸುವುದಾಗಿ ಹೇಳಿ ರಂಗಣ್ಣ ಹೊರಟುಹೋದ. ಸುಂದರರಾಯನಿಗೆ ಎಚ್ಚರವಾದಾಗ ಬಿಸಿಲು ಬಂದಿತ್ತು. ರಂಗಣ್ಣ ಹಿಂದಿನ ದಿವಸವೇ ಅವನಿಗೆ ಬೆಳಿಗ್ಗೆ ಕಾಫಿ ಮಾಡುವುದು ಅವನ ಕೆಲಸ ಎಂದು ಹೇಳಿದ್ದ. ಅವನು ಎದ್ದು ಹೊರಟು ಹೋದುದೇ ಸುಂದರರಾಯನಿಗೆ ಗೊತ್ತಿಲ್ಲ. ಇಷ್ಟು ಹೊತ್ತಿನವರೆಗೆ ಸುಮ್ಮನಿರುವಂತಹವಲ್ಲ-ಮಕ್ಕಳು. ರಮೆಗಂತೂ ಹಾಸಿಗೆ ಬಿಟ್ಟೇಳುವ ಮೊದಲೇ ಕಾಫಿಯಾಗಬೇಕು. ಆದರೆ ಇಂದು ಯಾವ ಗಲಾಟೆಯೂ ಇರಲಿಲ್ಲ. ಇಂದು ಸುಂದರರಾಯನಿಗೆ ತನ್ನ ಸಂಸಾರದಲ್ಲಿ ಏನೂ ಬದಲಾವಣೆಯಾಗಿಲ್ಲವೆನ್ನಿಸಿತು. ಇದುವರೆವಿಗೆ ನಡೆದಿದ್ದು ಒಂದು ಸ್ವಪ್ನ ಇರಬೇಕೆಂದು ತೋರಿತು. ಏಕೆಂದರೆ ಮನೆಯ ವಾತಾವರಣವೇ ಬದಲಾದಂತೆ ಭಾಸವಾಯಿತು. ಅಷ್ಟು ಹೊತ್ತಿಗೆ ಚಂದ ಬಂದಳು.

'ಅಮ್ಮ ಬಂದಳು' ಎಂದಳು ಹರ್ಷದಿಂದ. ಅವನಿಗೆ ತನ್ನ ಕಿವಿಯನ್ನೇ ನಂಬಲಾಗಲಿಲ್ಲ. ಅಷ್ಟು ಒಳ್ಳೆಯದಾಗಿತ್ತು ಆ ಸುದ್ದಿ. ಅದೇ ಆನಂದದ ಭರದಲ್ಲಿ ಸುಂದರರಾಯ ಅಡಿಗೆಯ ಮನೆಯೊಳಗೆ ನೋಡಿದ. ಹೌದು. ಕಮಲಮ್ಮ ಕೆಲಸ

ಪತ್ತೆ ತೊಡಗಿದ್ದಳು. ಯಾವ ವಾಯಿಯಲ್ಲಿಯೋ ಎಲ್ಲಿ ಇದ್ದಳೋ ಅವಳು ಬೆಳಿಗ್ಗೆ ಬಂದು ಮನೆ ಸೇರಿದ್ದಳು. ಸುಂದರರಾಯನಿಗೆ 'ಏಕವಂ' ಒಳಗೆ ಹೋಗಲು ಧೈರ್ಯ ವಾಗಲಿಲ್ಲ. ಮುಖ ತೊಳೆದುಕೊಂಡು ಅಪರಾಧಿ ನ್ಯಾಯಾಧೀಶನ ಮುಂದೆ ಹೋಗು ವಂತೆ ಹೆದರುತ್ತ ಒಳಗೆ ಕಾಲಿಟ್ಟ. ಕಮಲಮ್ಮ ಕಾಫಿ ತಂದು ಮುಂದಿಟ್ಟಳು. ಯಾರೂ ಒಂದುಮಾತೂ ಆಡಲಿಲ್ಲ. ಆದರೆ ಅದು ಕ್ಷಣಕಾಲ ಮಾತ್ರ. ಕಮಲಮ್ಮ ಕುಸಿದು ಬಿಕ್ಕಿ ಬಿಕ್ಕಿ ಅಳುತ್ತಿದಳು. ಸುಂದರರಾಯ ಅವಳ ತಲೆಯನ್ನು ಎದೆ ಯಲ್ಲಿ ಹುದುಗಿಸಿ ಮೃದುವಾಗಿ ತಲೆಗೂದಲನ್ನು ನೇವರಿಸುತ್ತಿದ್ದ. ಇಬ್ಬರೂ ಮೌನವಾಗಿಯೇ ಮಾತಾಡುತ್ತಿದ್ದರು. ಆಗಿನ ಭಾವಪರವಶತೆ ಮಾತು ಬಯಸು ತ್ತಿರಲಿಲ್ಲ.

ಸುಂದರರಾಯ ಹೆಂಡತಿಯನ್ನು ಎಲ್ಲಿ ಹೋಗಿದ್ದೆ ಎಂದು ಕೇಳಲೂ ಇಲ್ಲ. ಅವಳೂ ಆ ವಿಷಯ ಹೇಳಲಿಲ್ಲ. ಆ ಮೂರು ದಿನಗಳನ್ನು ಎಲ್ಲಿ ಕಳೆದಳು, ಹೇಗೆ ಕಳೆದಳು ಎನ್ನುವುದು ಅವಳೊಬ್ಬಳಿಗೇ ಗೊತ್ತು.

ರಂಗಣ್ಣ ಮಧ್ಯಾಹ್ನ ಕಾರ್ಖಾನೆಯಿಂದ ಹಿಂತಿರುಗಿದ. ಗೋವಿಂದರಾಯರ ಹರಿಸಿಂದನೆಯನ್ನು ಸಾವಧಾನದಿಂದ ಕೇಳಿ, ಅವರು ಪರರ ಹೆಂಡಿರ ವಿಷಯದಲ್ಲಿ ಮಾಡುತ್ತಿದ್ದ ಕುಚೋದ್ಯಗಳನ್ನು ಅಲ್ಲಗಳೆಯದೆ, ಅವರು ಸರ್. ಸಿ. ವಿ. ರಾಮನ್ ರವರಿಗೆ ಹೋಲಿಸಿ ಕೊಂಡಿದ್ದನ್ನು ಅಂಗೀಕರಿಸಿ, ಅವರ ಕೃಪೆ ಸಂಪಾದಿಸಿ, ರಜಾ ಪಡೆದು ವಾಪಸು ಬಂದ. ಬಂದವನೇ ಸೀದಾ ಸುಂದರರಾಯನ ಮನೆಯ ಒಳಗೆ ಕಾಲಿಟ್ಟ. ಅವನಿಗೂ ಮನೆಯಲ್ಲಿನ ಬದಲಾವಣೆ ಬೋಧೆಯಾಯಿತು. ಅಸ್ಪಷ್ಟ ವಾದ ಬಳೆಯ ಧ್ವನಿ ಕೇಳಿಸಿತು.

'ಸುಂದರರಾಯರೇ, ಸುಂದರರಾಯರೇ' ಎಂದು ಕೂಗಿದ ಬಾಗಿಲಲ್ಲೇ ನಿಂತು. ಒಳಗಿನಿಂದ ಮೃದು ಧ್ವನಿಯೊಂದು 'ಅವರಿಲ್ಲಿಯೋ ಮಾರ್ಕೆಟ್ಟಿಗೆ ಹೋಗಿದ್ದಾರೆ.' ಎಂದು ಹೇಳಿತು. ಒಳಗಿಟ್ಟ ಕಾಲನ್ನು ಹೊರಗಿಡುವ ಹೊತ್ತಿಗೆ ಕಮಲಮ್ಮ ಹೊರಗೆ ಬಂದು, 'ಕೂತುಕೊಳ್ಳಿ ಈಗ ಬರುತ್ತಾರೆ. ಎಂದಳು.'

'ಅವರು ಬಂದಮೇಲೆ ಬರುತ್ತೇನೆ' ಎಂದು ರಂಗಣ್ಣ ಮನೆ ಸೇರಿಕೊಂಡ.

ಈ ನಾಲ್ಕುದಿನದ ಗಲಾಟೆ ಕಳೆದ ಮೇಲೆ ರಂಗಣ್ಣ ಎಂದಿನಂತೆ ಕಾರ್ಖಾನೆಗೆ ಹೋಗುತ್ತಿದ್ದಾನೆ. ನಿತ್ಯವೂ ಅವನಲ್ಲಿ ಅಶಾಂತಿ ಹೆಚ್ಚುತ್ತಿದೆ. ಅವನ ಗೊತ್ತು ಗುರಿಯಿಲ್ಲದ, ಸುಖ ಸಂತೋಷವಿಲ್ಲದ ಜೀವನ ಅವನ ಮನಸ್ಸಿನಮೇಲೆ ಬಹಳ ಪರಿಣಾಮ ಉಂಟುಮಾಡಿದೆ. ತಾನೆಲ್ಲಿಗೆ ಹೋಗುತ್ತಿದ್ದೇನೆ, ಇದಕ್ಕೆ ಅಂತ್ಯವೆಲ್ಲಿ? ಎಂತಹುದೂ—ಒಂದೂ ಅವನಿಗೆ ತಿಳಿಯದಾಗಿದೆ. ಕಾರ್ಖಾನೆಯನ್ನು ನೆನಸಿ

ಕೊಂಡರೆ ಮೈ ಜುಂ ಎನ್ನುತ್ತದೆ. ಅದೆಂತಹ ವಿಷಪೂರಿತವಾದ ವಾತಾವರಣ ? ಕಾಲೇಜು ಬಿಡುವಾಗಿನ ಧ್ಯೇಯಜೀವಿಯೆಲ್ಲಿ ? ಈಗಿನ ಅಧೋಗತಿಗಿಳಿದ ಮಾನವ ವ್ಯಕ್ತಿಯೆಲ್ಲಿ ? ಅದು ಅವನಿಗೂ ಅರಿವಾಗುತ್ತಿದೆ. ಆದರೆ ಅದನ್ನು ತಡೆಯಲು ಏನೂ ಮಾಡಲಾರ. ಸಂತತವಾದ ಸಹವಾಸದಿಂದ ಅವನೂ ಅದೇ ನೀಚ ಮನೋಭಾವದವನಾಗುತ್ತಾನೆ ಅದರಿಂದ ಅವನ ಸಂಕಟ ಸಂಪೂರ್ಣದ್ವಿಗುಣವಾಗುತ್ತದೆ. ಇದರಿಂದ ಬಿಡುಗಡೆಯೆಲ್ಲಿ ?

ನಡು ರಾತ್ರಿಯ ತಂಪು ಹೊತ್ತಿನಲ್ಲಿ ಅವನಿಗೆ ತನ್ನೂರು ನೆನಪಾಗುತ್ತದೆ. ಎಂತಹ ಸುಂದರವಾದ ದೇಶ ಅದು. ಎಲ್ಲೆಲ್ಲಿಯೂ ಹಸಿರು, ಎಲ್ಲೆಲ್ಲಿಯೂ ತಂಪು. ಎಲ್ಲೆಲ್ಲಿಯೂ ಹೂ ಹಣ್ಣು. ಇಲ್ಲಿ ಬಂದು ತಾನೇನು ಗಳಿಸಿದ್ದೇನೆ ? ಬರಿಯ ಹೊಟ್ಟೆ ಪಾಡು ಮಾತ್ರವೇ ಧ್ಯೇಯವಾದರೆ ಅದಕ್ಕೆ ಇಲ್ಲಿಯೇಕೆ ಬಂದು ಬದನಾಗಬೇಕು? ಸುಖವೇ ಮನಗಂಡನಾದರೆ ಮನುಷ್ಯ ಇಲ್ಲಿಗಿಂತ ಅಲ್ಲಿಯೇ ಕೃತಕೃತ್ಯತೆ ಪಡೆದಾನು ಮನುಷ್ಯನ ಸಾಧಾರಣ ಅವಶ್ಯಕತೆ ಪೂರೈಸಿದರೆ ಅವನು ಸುಖಿ. ಅದಕ್ಕಿಂತ ಮಿತಿ ಮೀರಿ ಇರಬಾರದು. ಅದರಿಂದ ಒಂದಾದ ಮೇಲೊಂದು ಆಸೆಗಳು ಬಲಿತು, ಅತೃಪ್ತಿಯ ದಾರಿಯಲ್ಲಿ ಎಳೆದೊಯ್ಯುತ್ತವೆ. ಇಲ್ಲಿ ಎರಡೇ ಜಾತಿ ಉಳ್ಳವರು. ಇಲ್ಲವೇ ಇಲ್ಲದವರು. ಇಬ್ಬರಲ್ಲಿಯೂ ಸುಖ ಶಾಂತಿಗಳಿಲ್ಲ. ತೃಪ್ತಿ ಸಮಾಧಾನಗಳಿಲ್ಲ. ಆ ರಾತ್ರಿಯ ಗಂಭೀರ ವಾತಾವರಣದಲ್ಲಿ ತನ್ನೂರು ಸ್ವರ್ಗವೇ ಎಂದು ಭಾವನೆಯುಂಟಾಗುತ್ತದೆ. ಹಳ್ಳಿಯವರು ಕೊಳಕರು. ಅಜ್ಞಾನಿಗಳು. ನನ್ನ ಶಿಸ್ತುಗಾರ ಸ್ನೇಹಿತರು ಹೇಳುವಂತೆ ('ಬಂಕರ್ಸ್') ಇರಬಹುದು. ಆದರೇನಂತೆ ? ಅವರ ಜೀವನದಲ್ಲಿಯೂ ಸೌಂದರ್ಯವಿದೆ. ಅವರೆಂತಹವರಾದರೂ ಇರಬಹುದು, ಆದರೆ ಕಳ್ಳರಲ್ಲ. ಸುಳ್ಳರೂ ಅಲ್ಲ. ಕೇಡಿಗಳಲ್ಲ. ಇನ್ನೊಬ್ಬರ ದುಃಖದಿಂದ ಜೀವ ಹೊರೆಯುವ ವ್ಯಾಘ್ರರಲ್ಲ. ಜೀವಗಳ್ಳರಲ್ಲ. ಅವರು ಎಂತೆಂತಹ ದುರಾಚಾರಗಳಿಗೂ ಕಟ್ಟುಬಿದ್ದಿರ ಬಹುದು. ಆದರೆ ಅಸತ್ಯವನ್ನು ಮೈಗೂಡಿಸಿಕೊಂಡವರಲ್ಲ. ಇಲ್ಲಿ ಪಟ್ಟಣದಲ್ಲಿ ಕಾಣುವುದಾದರೂ ಏನು ?. ಒಂದು ನಾಗರೀಕತೆಯ ಅಪಭ್ರಂಶ. ಒಂದು ಸಂಸ್ಕೃತಿಯ ವಿಕೃತರೂಪ. ಇನ್ನೂ ಸಹ ಸಾವಿರಾರು ಕಳಂಕಗಳಿಂದ ಮುಚ್ಚಿಹೋಗಿವೆ. ಕಸ್ತೂರಿಯ ಸುವಾಸನೆ ಕೊಳಕಿನ ದುರ್ನಾತದಿಂದ ಮರೆಸಲ್ಪಟ್ಟಿದೆ.

ರಾತ್ರಿಯೆಲ್ಲಾ ಈ ಯೋಚನೆಗಳಿಂದ ರಂಗಣ್ಣ ನಿದ್ದೆಯನ್ನು ದೂರಮಾಡುವನು. ಆ ಗೂಡಿ ಬಿಸ್ಸನ್ನು ನಡೆಸಲು, ಆಲೋಚನಾ ಪರಂಪರೆಗಳಿಂದ ದೇಹವನ್ನು ಎಚ್ಚರವಾಗಿಡುವನು.

## ೨೨

ಈಗ ರಂಗಣ್ಣ ಸುಂದರರಾಯ ಗೆಳೆಯರು. ಕಮಲಮ್ಮನೂ ಸಹಾ ಸಂಕೋಚವಿಲ್ಲದೆ ಅವನೊಡನೆ ಮಾತಾಡುತ್ತಾಳೆ. ತನ್ನ ಸುಖ ದುಃಖಗಳನ್ನು ಹೇಳಿ ಕೊಳ್ಳುತ್ತಾಳೆ. ಮಕ್ಕಳು ಎಂದಿಗಿಂತ ಹೆಚ್ಚಾಗಿ ಮಾವನನ್ನು ಗೋಳಾಡಿಸುತ್ತವೆ. ಈ ಸ್ನೇಹದ ತುಷಾರ ಸಿಂಚನದಿಂದ ಅವನ ಕಾದ ತಲೆ ಸ್ವಲ್ಪ ತಣ್ಣಗಾಗುತ್ತದೆ.

ಈಚೆಗೆ ಸುಂದರರಾಯನಲ್ಲಿ ವಿಪರೀತ ಮಾರ್ಪಾಡಾಗಿದೆ. ಹೆಂಡತಿಯೊಡನೆ ಬಹಳ ವಿಶ್ವಾಸದಿಂದ ನಡೆದುಕೊಳ್ಳುತ್ತಾನೆ. ಕಮಲಮ್ಮನಾದರೂ ಗಂಡನ ಮನೋನುಕೂಲೆಯಾಗಿರಲು ಸರ್ವ ಸಾಹಸ ಪಡುತ್ತಾಳೆ. ಸ್ವಲ್ಪ ರಾದ್ಧಾಂತವಾದರೂ ಚಿಂತೆಯಿಲ್ಲ. ಅದಕ್ಕೆ ತಕ್ಕ ಪ್ರತಿಫಲ ದೊರೆತಿದೆ. ಆದರೆ ಇದೇ ಬಹಳ ದಿವಸವಿದ್ದೀತು ಎನ್ನುವುದರಲ್ಲಿ ರಂಗಣ್ಣನಿಗೆ ಸ್ವಲ್ಪ ಸಂಶಯವೇ.

ಇಬ್ಬರೂ ಒಂದುದಿನ ಸಿನಿಮಾಕ್ಕೆ ಹೋಗಿ ಹಿಂತಿರುಗುತ್ತಿದ್ದರು. ವಾಪಾಸು ಬರುವಾಗ ಸುಂದರರಾಯ ಮನಃ ಪೂರ್ವಕವಾಗಿಯೇ ರಂಗಣ್ಣನನ್ನು ಸಂದಿಗೊಂದಿಗಳಲ್ಲಿ ಕರೆದುಕೊಂಡು ಬರುತ್ತಿರುವುದು ರಂಗಣ್ಣನಿಗೆ ತಿಳಿಯಿತು. ಹಾಗಾದರೆ ಅವನು ತನ್ನ ಹಿಂದಿನ ಚಾಳಿಯನ್ನು ಇನ್ನೂ ಬಿಟ್ಟಿಲ್ಲ. ಎಲ್ಲಿಯಾದರೂ ಹೋಗಲಿ ? ಅದವನ ಸ್ವಂತ ಸಮಾಚಾರ. ಮುಖ್ಯ ಕಮಲಮ್ಮನನ್ನು ಸುಖದಲ್ಲಿಟ್ಟಿದ್ದಾನೆ. ಅಷ್ಟೇಸಾಕು ಎಂದುಕೊಂಡ.

ಅನೇಕ ಮನೆಗಳ ಮುಂಬಾಗಿಲು ತೆರೆದಿತ್ತು. ಮನೆಯ ಮುಂದೆ ಯಾರಾದರೊಬ್ಬ ಮುದುಕಿಯೋ, ಇಲ್ಲ ಗಂಡಸೋ ಕುಳಿತಿರುತ್ತಿದ್ದರು. ಮನೆಯಿಂದ ಸುಲಭ ಬೆಲೆಯ ಸೆಂಟಿನ ಪರಿಮಳ ಬಂದು ಮೂಗೊಡೆಯುತ್ತಿತ್ತು. ಒಂದೊಂದು ಮನೆಯಿಂದ ಅಪಸ್ವರದಲ್ಲಿ ಹಾರ್ಮೋನಿಯಂ ಶೃತಿಯೊಡನೆ ಸಂಗೀತ ಕೇಳಿಬರುತ್ತಿತ್ತು. ರಂಗಣ್ಣನ ಮನಸ್ಸಿಗೆ ತೀರಾ ಅಸಹ್ಯವಾಯಿತು. ಏನು ಕಂಡು ಇಲ್ಲಿಗೆ ಬರುತ್ತಾರೆ ಜನರು ? ಆದರೂ ಇಲ್ಲಿಯೂ ಏನೋ ಇರಬೇಕು. ಬರಿಯ ಕಾಮವೊಂದೇ ಅಲ್ಲ, ಬೇರಾವ ಆಕರ್ಷಣೆಯೋ ಇರಬೇಕು. ಅದಿಲ್ಲದಿದ್ದರೆ ಮನೆಯಲ್ಲಿ ಎಂತೆಂತಹವರನ್ನೋ ಬಿಟ್ಟು ಇಲ್ಲಿಗೆ ಬರುವವರೆಲ್ಲಾ ಹುಚ್ಚರೇ ? ಮನೆಯಲ್ಲಿ ಅವರ ಯಾವುದೋ ಆಕಾಂಕ್ಷೆ ಫಲಿ..

ಒಂದು ನಿಮಿಷ ಅವನು ತನ್ನ ಜೀವನವನ್ನೇ ನೆನಸಿಕೊಂಡ.

ಸಂಸಾರದ ರೀತಿಯೆಂದು ಮಧ್ಯೆ ಸುಖದ ಜರಿಯೆಳೆ ನೇಯುವುದು ಹೆಣ್ಣಿನ ಪಾಲಿನ ಕೆಲಸ. ಅವಳ ಕೋಪ ಸ ಜಿಲೇಬಿಯ ಮಧ್ಯೆ ರಸಪಾಕ ತುಂಬಿದಂತೆ, ಮಯಣದ ತಟ್ಟಿನ ನಡುವೆ ಜೇನು ತುಂಬಿದಂತೆ. ಅಲ್ಲಿ ಒಂದು ರಸಿಕತೆಯ ಅಂತರ್ವಾಹಿನಿ ಹರಿಯುತ್ತಿರಬೇಕು. ಇದರ ಅಂಗವಾಗಿ ಹಾವ, ಭಾವ, ಅಲಂಕಾರ, ಒನಪು, ವೈಯ್ಯಾರ, ಇವುಗಳಿಂದ ಹೆಣ್ಣು ಸೂಕ್ಷ್ಮ ಬಲೆ ಪಸರಿಸಿ, ಅದರಲ್ಲಿ ಗಂಡನ್ನು ಸೆರೆಗೈಯ್ಯಬೇಕು. ಗಂಡು ಆ ಸೆರೆಯಲ್ಲಿ ಸುಖದ ಪರಮಾವಧಿಯನ್ನು ಕಾಣುತ್ತಾ. ಹೆಣ್ಣು ಜೊತೆಗೂಡುತ್ತದೆ. ಈ ಕೌಶಲ್ಯ ಹೆಣ್ಣಿನ ಕೈವಾಡ, ಗಂಡು ಹೇಳಿಕೊಟ್ಟು ಬರುವುದಲ್ಲ. ಅದು ಅವರ ವಿದ್ಯವೇ ಅಲ್ಲ. ಹೆಣ್ಣಿಗೆ ಇದು ಸಂಗಾತಿಯರ ಸಹವಾಸದಿಂದ, ರಸಿಕ ದಾಂಪತ್ಯದ ಕಣ್ಣೋಟದಿಂದ, ಬರತಕ್ಕದು. ಗಂಡು ಕಾಮದ ಹೆಂಡದ ಅಮಲೇರಿದು ಹೋದಾಗ ಅವನನ್ನು ರಮಿಸಲು, ಈ ಸ್ತ್ರೀ ಸಂಸ್ಕಾರವಿಲ್ಲದ ಹೆಣ್ಣಿಗೆ ಬರಿಗೈ-ಬರಿಬಾಯಿ. ಇಲ್ಲಿಯೇ ಭಾವಜೀವಿ ಸಂಸಾರದಲ್ಲಿ ಜಿಗುಪ್ಸೆ ಹೊಂದುವುದು. ಪ್ರಪಂಚದ ವಿಷಪೂರಿತ ವಾತಾವರಣದಲ್ಲಿ ದುಡಿದು ಬೆಂದು ಬಂದಾಗ ತನ್ನ ಕೈಹಿಡಿದು ತನ್ನದೇ ಆದ ಒಂದು ಜಗತ್ತಿಗೆ ಹೆಣ್ಣು ಕರೆದೊಯ್ದಾಗ ಮಾತ್ರ ಅವನಿಗೆ ಸಂಸಾರದಲ್ಲಿ ತಾಳ್ಮೆ ಹುಟ್ಟುವುದು. ಆ ಕಲ್ಪನಾಮಯ ಜಗತ್ತು ಎಂತಹ ಹುಡುಗಾಟವೇ ಆಗಲಿ ಅವರ ಆ ಬಾಲ್ಯ ಭಾವ ಅವನಿಗೆ ಕಾಣುವುದಿಲ್ಲ.

ಈ ತರಹ ಸಾಮರಸ್ಯವಿಲ್ಲದೆ ವಿರಕ್ತಿ ಹೊಂದಿದವರಿಗೆ ಸ್ವಲ್ಪ ಕಾಲ ಕೃತಕವಾದರೂ-ಹಿತವಾದ ಸುಖವನ್ನು ಕೊಡುವವರು ಇವರು. ಕಾಮಾಕ್ಷಿ ತನಗೆ ನಿಜವಾದ ಸುಖ ತರಲಿಲ್ಲ. ತಾನಾದರೂ ಯಾಕೆ ಅದರಿಂದ ವಂಚಿತನಾಗಿರಬೇಕು ? ಅದರ ನೆಳಲನ್ನಾದರೂ ಇಲ್ಲಿ ಯಾಕೆ ಕಾಣಬಾರದು ? ಬಹುದಿನಗಳಿಂದ ಏಕಾಂಗಿಯಾದ ಅವನ ಮನವು ಮಂಗನಂತೆ ಹಾರಿಯಲು ತೊಡಗಿತು. ಮೈ ನವಿರೆದ್ದಿತು. ತುಸು ಗಾಬರಿಯಿಂದ ರಂಗಣ್ಣ ಸುಂದರರಾಯನಿಗೆ,

'ನಿಮಗಿಲ್ಲಿ ಏನಾದರೂ ಕೆಲಸವಿದ್ದರೆ ಮುಗಿಸಿಬನ್ನಿ. ನಾನು ಹೋಗುತ್ತೇನೆ' ಎಂದ. ಸುಂದರರಾಯ 'ನೀವೂ ಬನ್ನಿ ರಂಗಣ್ಣ. ಒಂದು ಕಾಲುಘಂಟೆ ಇದ್ದು ಇಬ್ಬರೂ ಒಟ್ಟಿಗೆ ಹೋಗೋಣ' ಎಂದ. ಅವನಿಗೆ ರಂಗಣ್ಣನ ಜೀವನದ ಇತಿಹಾಸ ಸ್ವಲ್ಪ ತಿಳಿದಿತ್ತು. ಆದ್ದರಿಂದ ರಂಗಣ್ಣ ಈ ಕರೆಯನ್ನು ಒಪ್ಪಿಕೊಳ್ಳಬಹುದು ಎನ್ನುವ ಭಾವನೆಯೂ ಇತ್ತು. ಈ ತರದ ಜೀವನ ನಡೆಸುವ ಅವನಿಗೆ ಬದುಕಿನ ಸವಿ ತೋರಿಸುವುದು ಉಪಕಾರವೇ ಎಂದವನು ತಿಳಿದ. ಅಲ್ಲದೆ ಅದೇಕೋ ಅವನು ರಂಗಣ್ಣನ ಸಹಾನುಭೂತಿಯನ್ನು ಬಹುವಾಗಿ ಅಪೇಕ್ಷಿಸುತ್ತಿದ್ದ.

‘ ನೀವೀರೀತಿ ಗುಲಾಮರಾಗಿರುವುದರ ಗುಟ್ಟು ತಿಳಿದುಕೊಳ್ಳಬೇಕೆಂದೇನೋ ಆಸೆಯಿದೆ. ಆದರೆ ನಾನಿದಕ್ಕೆಲ್ಲಾ ಹೊಸಬ.’

ನೀವು ನಾನು ಹೇಳಿದ್ದಕ್ಕೆ ತಪ್ಪು ಅರ್ಥ ಮಾಡುತ್ತಿದ್ದೀರಿ, ರಂಗಣ್ಣ, ನೀವು ಅಷ್ಟ ಹಾದಿ ಇಳಿಯಿರಿ ಎಂದಲ್ಲ ನಾನು ಹೇಳಿದ್ದು. ಆದರೆ ಇವರಲ್ಲಿಯೂ ಒಂದು ಸೌಂದರ್ಯ ಇದೆ. ಎಂದು ಮಾತ್ರ ನಿಮಗೆ ತೋರಿಸಬೇಕು ಎಂದು ನನ್ನ ಇಚ್ಛೆ. ಹಿಂದೆ ದೇವದಾಸಿಯರ ಮನೆಗಳು ಲಲಿತಕಲೆಗಳಿಗೆ ತೌರೂರಾಗಿದ್ದಿತು. ಅಲ್ಲಿಗೆ ಹೋಗುವುದು ಒಂದು ಗೌರವವಾಗಿದ್ದಿತೇ ವಿನಹ ಈಗಿನಂತೆ ಹೇಸಿಗೆಯಾಗಿರಲಿಲ್ಲ. ನೀವು ನನ್ನವಳನ್ನು ನೋಡಿಲ್ಲ. ನೋಡಿದರೆ ನಿಮ್ಮ ಅಭಿಪ್ರಾಯ ಬದಲಿಸುತ್ತೀರಿ. ಅವಳಂತಹ ಬೇದಿಯು ನೂರಿಯಲ್ಲ. ವಸಂತಸೇನೆಯಂತೆ ಅದೇ ವೃತ್ತಿಗೆ ಗೌರವ ತರುವವಳು. ನಿಮಗೆ ನನ್ನನ್ನು ಕಂಡರೆ ಜಿಗುಪ್ಸೆ ಬರಬಹುದು. ನನಗೂ ಒಮ್ಮೊಮ್ಮೆ ನನ್ನ ಕಂಡೇ ಅಸಹ್ಯವಾಗುತ್ತದೆ. ಆದರೆ ನನ್ನ ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳಲು ನಾನು ಸಮರ್ಥನಾಗಿಲ್ಲ. ಅದಕ್ಕೆ ಕಾರಣವಿಷ್ಟೆ. ಲಲಿತೆಯೊಡನಿದ್ದ ಪ್ರತಿನಿಮಿಷವೂ ಆನಂದಮಯವಾದುದು ಎಂಬ ಭಾವನೆ ನನಗೆ ಬರುತ್ತದೆ. ಅದು ಜೀವನ, ನನ್ನ ಜೀವಿತ ವ್ಯವಹಾರವೆಲ್ಲ ಮಿಥ್ಯ ಎಂದೆನಿಸುತ್ತದೆ. ನಾನೇನು ಮಾಡಲಿ? ಲಲಿತೆ! ಆ ಹೆಸರು ರಂಗಣ್ಣನ ಮನಸ್ಸಿನ ಯಾವುದೋ ಸುಪ್ತ ಭಾವನೆಗಳನ್ನು ಚೇತನಗೊಳಿಸಿತು. ಅದು ಅವನಿಗೆ ಬರಿಯ ಶಬ್ದಮಾತ್ರವಾಗಲಿಲ್ಲ. ಅದರಲ್ಲಿ ಅಸಾಧಾರಣ ಜೀವವಿದ್ದಿತು.

‘ಆಂ ಏನೆಂದಿರಿ? ಲಲಿತೆಯೆಂಬುದು ನಿಮ್ಮವಳ ಹೆಸರೆ?’

“ಸೊಗಸಾದ ಹೆಸರಲ್ಲವೇ”

ಲಲಿತೆಯ ಗತಿ ಏನಾಗಿರಬಹುದು? ಲಲಿತೆ, ತಾಯಿ ತಮ್ಮಂದಿರೊಡನೆ ಎಲ್ಲಿಯೋ ಹೊರಟುಹೋದಳೆಂದು ಶೃಂಗೇರಿಯಲ್ಲಿ ಕೇಳಿದ್ದ. ಎಲ್ಲಿಯಾದರೂ ಅವಳು ಇಂತಹದೇ ವೃತ್ತಿ ನಡೆಸುತ್ತಿರಬಹುದೇನು! ಹಾಗಿದ್ದರೆ ನೋಡಿಯೇ ತೀರಬೇಕು.

“ನಾನೂ ಬಂದೇನನ್ನಿ. ಅದು ನಿಮಗೆ ಸಮಸೆಯೇನು?”

‘ಅಲ್ರೀ ರಂಗಣ್ಣ. ವೇಶ್ಯೆಯಲ್ಲಿ ಪಾತಿವ್ರತ್ಯ, ಪ್ರೀತಿ ಅಪೇಕ್ಷಿಸುವ ಮೂರ್ಖ ನಾನೆಂದು ತಿಳಿದಿರುವಿರೇನು. ನೀವಲ್ಲದಿದ್ದರೆ ಇನ್ನೊಬ್ಬ ದಾಸಯ್ಯ ದುಡ್ಡು ತೆತ್ತು ಬರುತ್ತಾನೆ. ನನ್ನ ಲಲಿತೆ ಅಂತಹ ದುಡ್ಡಿಗೋಸ್ಕರ ಎಂತಹವನನ್ನಾದರೂ ಸೇರಿಸುವ ಶೀಲವುಳ್ಳವಳಲ್ಲದಿದ್ದರೂ, ಅವಳೂ ಜೀವನ ನಡೆಸಬೇಕಲ್ಲ! ರಂಗಣ್ಣ ಹೇಳಿದ.

' ನಡೀರಿ, ನಿಮ್ಮ ಆ ಪ್ರೇಯಸಿ ಎಂತಹ ಚೆಲುವೆಯೋ ನೋಡೋಣ.

ಸಾಧಾರಣವಾದೊಂದು ಮನೆ. ಬಾಗಿಲಲ್ಲಿ ಮುದುಕಿಯೊಬ್ಬಳು ಅವರನ್ನು ನಸುನಗುವಿನಿಂದ ಸ್ವಾಗತಿಸಿದಳು. ರಂಗಣ್ಣನನ್ನು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿ, ' ಬರಬೇಕು, ಬಡವರ ಮನೆಗೆ ತಮ್ಮಂತಹವರು' ಎಂದಳು. ರಂಗಣ್ಣ ಇದ್ದಕ್ಕಿದ್ದಂತೆ ' ನಾನು ಹೋಗುತ್ತೇನೆ ಸುಂದರರಾಯರೆ, ಇನ್ನೊಮ್ಮೆಯಾಯಿತು. ಇಂದೇಕೋ ಮನಸ್ಸು ಸ್ವಸ್ಥವಿಲ್ಲ. ' ಎಂದು ಬಿದಿಗಿಳಿದುಬಿಟ್ಟ. ಅವನ ತಲೆಯಲ್ಲಿ ಅಸಾಧ್ಯ ಗಲಿಬಿಲಿಯಾಗಿತ್ತು. ಯಾವುದೋ ವಿಷಯ ಯೋಚಿಸಿಕೊಂಡು ಮನಸ್ಸು ಹೆದರುತ್ತಿತ್ತು. ನಿಜವಾಗಿಯೂ ಲಲಿತೆ ಇಲ್ಲಿಯೇ ಇದ್ದರೆ! ಅದಕ್ಕೆ ಅವನ ಮನಸ್ಸು ಸಿದ್ಧವಿರಲಿಲ್ಲ.

ಸುಂದರರಾಯ ಆಶ್ಚರ್ಯದಿಂದ ಅವನ ಕಡೆ ನೋಡಿದ. ಸ್ವಲ್ಪ ನಕ್ಕು ' ಹೋಗಲಿ ಬಿಡಿ. ನಾನೂ ಬಂದೆ. ಹೇಳಿಬಿಟ್ಟು ಬರುತ್ತೇನೆ. ಒಂದೇ ನಿಮಿಷ, ಎಂದ. ರಂಗಣ್ಣನೆದುರಿಗೆ ಸ್ವಲ್ಪವಾದರೂ ಮನಸ್ಥೈರ್ಯವನ್ನು ಪ್ರದರ್ಶಿಸಬೇಕೆಂದಿತ್ತು ಅವನಿಗೆ. ಮನೆಯನ್ನು ತಲುಪುವವರೆಗೂ ಇಬ್ಬರೂ ಮಾತಾಡಲಿಲ್ಲ.

* * * * * *

ಅಂದು ರಂಗಣ್ಣನ ಮನಸ್ಸು ವ್ಯಗ್ರವಾಗಿತ್ತು. ಯೋಚಿಸಿದಷ್ಟೂ ಬಗೆಹರಿಯದು. ಮನಸ್ಸು ಅಂಕೆಯಿಲ್ಲದ ಕುದುರೆಯಾಗಿತ್ತು. ಕೈಲಿಳಿದವನು ನೇರವಾದ ಹಾದಿ ಹಿಡಿಯಲಿಲ್ಲ. ಮನಸ್ಸುಬೇಡವೆನ್ನುತ್ತಿದ್ದರೂ ಕಾಲು ಅವನನ್ನು ಸಂದಿಗೊಂದಿಗಳಲ್ಲಿ ಕರೆದೊಯ್ಯುತ್ತಿತ್ತು. ಅದೇಮನೆ, ಅದೇಮುದುಕಿ. ಕತ್ತಲಾಗಿದ್ದರೂ ದೀಪಹತ್ತಿಸಿರಲಿಲ್ಲ. ಒಳಗಿನಿಂದ ವೀಣೆಯ ಮಧುರನಾದವು ಕೇಳಿಬರುತ್ತಿತ್ತು. ಸಂಗೀತಗೊತ್ತಿದ್ದ ರಂಗಣ್ಣನಿಗೆ ವೀಣೆಯಮೇಲೆ ಚಲಿಸುತ್ತಿದ್ದುದ್ದು ಪಳಗಿದ ಕೈ ಎಂದು ಗೊತ್ತಾಗುತ್ತಿತ್ತು. ಆ ದರಿದ್ರ ಕುಟೀರವನ್ನು ಆ ಅಪೂರ್ವವಾದ ಗಾನ ತುಂಬಿ ಹೊರಸೂಸುತ್ತಿತ್ತು. ಇದ್ದಕ್ಕಿದ್ದಂತೆ ಬಾರಿಸುತ್ತಿದ್ದವರು ವೀಣೆಯ ಶೃತಿಯೊಂದಿಗೆ ಹಾಡಲು ಪ್ರಾರಂಭಿಸಿದರು.

' ನೀವೇ ಪಾಲಿಂಚುರಾ ನಿನ್ನ ನಮ್ಮಿನಾನುರಾ '

ರಂಗಣ್ಣನ ಮೈಮೇಲಿನ ಎಚ್ಚರತಪ್ಪಿತು. ಒಳನುಗ್ಗಿದವನೇ ಹಾಡುತ್ತಿದ್ದವಳ ಮುಂದೆ ಹೋಗಿನಿಂತು, ' ಲಲಿತಾ ' ಎಂದು ಕೂಗಿದ.

ಹಾಡುನಿಂತಿತು. ತೊಡೆಯ ಮೇಲಿಂದ ವೀಣೆ ಕೆಳಗುರುಳಿತು. ಹಾಡುತ್ತಿದ್ದವಳೂ ಎಚ್ಚರ ತಪ್ಪಿದವಳಾಗಿ, ' ಭಾವ ' ಎಂದಳು. ಒಂದೇ ಒಂದುಕ್ಷಣ ಆ ಕತ್ತ

ಲಲ್ಲಿ ಇಬ್ಬರೂ ಎದುರು ಬದರಾಗಿ ನಿಂತಿದ್ದರು. ಮರುಕ್ಷಣದಲ್ಲಿಯೇ ರಂಗಣ್ಣ ಬೀದಿಗಿಳಿದು, ಎದುರಿಗೆ ಡಿಕ್ಕಿ ಹೊಡೆಯುತ್ತಿದ್ದವನ ಬೈಗುಳನ್ನೂ ಕೇಳದೆ ಓಡಿಬಿಟ್ಟ.

ನಡುರಾತ್ರಿ ಕಳೆದಮೇಲೆ ಅವನು ಮನೆಸೇರಿದ. ಆದರೆ ನಿದ್ದೆ ಬರಲೊಲ್ಲದು. ಅಲ್ಲಿಗೆ ಹೋದದ್ದೇನು? ಅಲ್ಲಿಂದ ಓಡಿಬಂದದ್ದೇನು? ವರ್ಷಗಳು ಕಳೆದಮೇಲೆ ಅವಳನ್ನು ನೋಡಿದಾಗ ಒಂದುಮಾತೂ ಆಡದೆ ಓಡಿಬಂದೆನೇಕೆ? ಅವಳಂತಹ ಹೀನವೃತ್ತಿಯವಳೊಡನೇಕೆ ಮಾತುಕತೆ? ಹಾಗಿದ್ದರೆ ಅವಳನ್ನು ಏಕೆ ಮರೆಯಬಾರದು? ಮರೆಯಲಾಗದಮೇಲೆ ಅವಳ ವಿಷಯವನ್ನು ತಿಳಿದುಕೊಳ್ಳಬಾರದೆ? ಅವಳ ದುಃಖದಲ್ಲಿ ಅನುಕಂಪ ತೋರಿಸಲಾಗದೆ?

ಆ ವಿಷಯ ಮರುದಿನವೂ ಇತ್ಯರ್ಥವಾಗಲಿಲ್ಲ. ಆದಿನವೂ ಅವನು ಎಲ್ಲೆಲ್ಲೋ ಅಲೆದು ದಣಿದ. ಆದರೆ ಭಾರವಾದ ಮನಸ್ಸಿನೊಡನೆ ಮನೆಗೆಹೋಗಲು ಇಷ್ಟವಿಲ್ಲ. ಅವನಿಷ್ಟವಿಲ್ಲದಿದ್ದರೂ ಅವನ ಕಾಲುಗಳು ಅವನನ್ನು ಲಲಿತೆಯಮನೆಯ ಕಡೆಯೇ ಕರೆದೊಯ್ಯುತ್ತಿದ್ದವು. ಏನಾದರೂ ಆಗಲಿ ಅವಳನ್ನುಕಂಡು ಮನಸ್ಸು ಬಂದಂತೆ ಬೈದಾದರೂ ಬರಬೇಕು. ಆಮೇಲೆಯೇ ಮನಸ್ಸಿಗೆ ಸಮಾಧಾನ.

ಮನೆಯು ಒಂದು ದಿನದಲ್ಲಿಯೇ ವಿಪರೀತ ಬದಲಾವಣೆ ಹೊಂದಿದಂತೆ ತೋರಿತು. ಸಂಭ್ರಮ ವಿಲಾಸಗಳಿಂದ ಕೂಡಿದ ಈ ಮನೆ ಇಂದು ಪ್ರೇತಕಳೆ ಸುರಿಸುತ್ತಿದೆ. ನಿನ್ನೆ ಕತ್ತಲಾಗಿತ್ತು. ಏನೂ ನೋಡಲಾಗಲಿಲ್ಲ. ಆದರೆ ಅಂದು ಸುಂದರರಾಯನ ಜೊತೆಗೆ ಬಂದಾಗ ಮನೆಯನ್ನು ಹೊರಗಿನಿಂದ ನೋಡಿದ್ದ. ಮನೆಯು ಚಿಕ್ಕದಾಗಿದ್ದರೂ ಅಚ್ಚುಕಟ್ಟಾಗಿತ್ತು. ಇಂದು ಅದು ಪ್ರೇತಕಳೆ ಸುರಿಸುತ್ತಿದೆ. ಇದೇನುತನ್ನ ಮನಸ್ಸಿನಲ್ಲಾದ ಆಂದೋಳನದ ಪರಿಣಾಮವೋ? ಇಂದು ಕತ್ತಲಾಗಿ ಬಹಳ ಹೊತ್ತಾಗಿದ್ದರೂ ಹಜಾರದಲ್ಲಿ ದೀಪವೇಇಲ್ಲ. ಮನೆಯಮುಂದೆ ಕುಳ್ಳಿರುತ್ತಿದ್ದ ಕುಂಟಣಿಯೂ ಇಲ್ಲ. ಮನೆಯಿಂದ ಪರಿಮಳವೂ, ಮೃದುಮಧುರ ಸಂಗೀತವೂ ಹೊರಡುತ್ತಿಲ್ಲ. ಇಂದು ಅದು ಬೀಡಿಲ್ಲದ ಮನೆಯಂತಾಗಿದೆ. ತನ್ನ ಮನಸ್ಸಿನಂತೆ ಶೂನ್ಯವಾಗಿದೆ. ಲಲಿತೆ ಎಲ್ಲಿಯಾದರೂ ಮನೆಬಿಟ್ಟು ಹೋಗಿರಬಹುದೇ? ತಾನೇನುಮಾಡಿದೆ? ತನ್ನಪಾಡಿಗೆ ತಾನಿದ್ದರೆ ಲಲಿತೆ ಯಾವುದೋ ರೀತಿಯಲ್ಲಿ ಅವಳು ತಿಳಿದಮಟ್ಟಿಗೆ ಸುಖದಿಂದಿರುತ್ತಿದ್ದಳೋ ಏನೋ? ಅವಳ ಜೀವನದಲ್ಲಿ-ಅದೆಂತಹ ಹೇಯವಾದುದೇ ಆಗಲಿ, ಹೀಗೆ ಅಕಸ್ಮಾತ್ ಪ್ರವೇಶಿಸಿ ಅವಳನ್ನು ತಲ್ಲಣಗೊಳಿಸುವ ಹಕ್ಕಾದರೂ ತನಗೆಲ್ಲಿ? ಹಿಂದೆ ಅವಳು ತನ್ನನ್ನು ಬೇಡಿದಾಗ ತನ್ನಿಂದವಳಿಗೆ ಏನೂ ಉಪಕಾರವಾಗಲಿಲ್ಲ. ಅವಳಿಗೆರಡು ಸಾಂತ್ವ

ವಚನಗಳನ್ನಾಡಿ ಅವಳ ಮನಸ್ಸಿನ ದುಗುಡವನ್ನು ನಿವಾರಿಸಲು ಸಹಾ ಯತ್ನಿಸ ಲಿಲ್ಲ. ತಾನೊಬ್ಬ ಬಂಧು ಎಂದು ಆಶ್ರಯಿಸಿ ಬಂದ ಆ ಅಬಲೆಯನ್ನು ಅಂದು ನಿರ್ಲಕ್ಷಿಸಿ ದೂರತಳ್ಳಿದ್ದ. ಈಗವಳ ಪಾಪಪುಣ್ಯಗಳ ವಿವೇಚನೆಯ ಹಕ್ಕು ತನಗೆ ಲ್ಲಿಂದ ಬಂದಿತು ? ತಾನಂದು ಅವಳಿಗೆ ಒಂದುದಾರಿ ತೋರಿಸಿದ್ದರೆ ಇಂದು ಅವಳು ಹೇಗಿರುತ್ತಿದ್ದಳೋ ? ಅವಳ ಪಾಪದಲ್ಲಿ ಹೆಚ್ಚಿನಭಾಗ ತನ್ನದು. ವ್ಯಕ್ತಿಯ ಉದ್ದೇಶವನ್ನು ಪರೀಕ್ಷಿಸಬೇಕೇ ಹೊರತು, ಆ ಕಾರ್ಯವನ್ನಲ್ಲ. ಉದ್ದೇಶದಮೇಲೆ ಒಡಿತವುಂಟು. ಕಾರ್ಯ ಯಾವುದೋ ಗುಪ್ತಶಕ್ತಿಯ, ಸಮಯ ಸನ್ನಿವೇಶಗಳ ಪ್ರೇರೇಪಣೆ.

ರಂಗಣ್ಣ ಮನೆಯನ್ನು ಪ್ರವೇಶಿಸಿದ. 'ಯಾರೂ ?' ಎಂದು ಎಲ್ಲಿಂದಲೋ ಕ್ಷೀಣಸ್ವರವೊಂದು ಕೇಳಿಸಿತು. 'ನಾನು' ಎಂದ ರಂಗಣ್ಣ. ಲಲಿತೆ ದೀಪವನ್ನು ಹತ್ತಿಸಿ ಎದ್ದುಬಂದಳು.

ರಂಗಣ್ಣ ಲಲಿತೆಯಕಡೆ ನೋಡಿದ. ದೌರ್ಭಾಗ್ಯದ ಪ್ರತೀಕವೋಎಂಬಂತಿದ್ದ ಆ ಹೆಣ್ಣನ್ನು ನೋಡಿ ಅವನ ಕರುಳು ಕಿವಿಚಿತು. ಮಾಸಿದಸೀರೆ, ಕೆದರಿದಕೂದಲು, ಅತ್ತು-ಅತ್ತು ಕೆಂಡವಾಗಿದ್ದ ಕಣ್ಣುಗಳು, ಕತ್ತಲಲ್ಲಿಯೂ ಅವಳ ದುರ್ದೆಸೆಯನ್ನು ಅವನಿಗರಿವುಮಾಡಿಕೊಡುತ್ತಿವೆ. ಕಣ್ಣೀರಿನ ಪಟ್ಟೆಯಿನ್ನೂ ಕೆನ್ನೆಯಿಂದ ಅಳಿಸಿ ಹೋಗಿಲ್ಲ. ನೀರು ಇನ್ನೂ ಆರಿಲ್ಲ. ಕ್ಷಣಮುಂಚೆ ಅವಳು ಅಳುತ್ತಿದ್ದಳೋಏನೊ.

ಲಲಿತೆ ಬಾಗಿಲು ಸರಿಸಿ ಬಂದು ಗೋಡೆಯನ್ನಾತು ನಿಂತುಕೊಂಡಳು ಯಾರಿಗೂ ಏನೂ ಮಾತಾಡಲು ತಿಳಿಯದು. ಮಾತಾಡುವುದಕ್ಕೇನೋ ಬೇಕಾದ ಷ್ಟಿದೆ. 'ಬಾ ಕೂತುಕೋ' ಎಂದ ರಂಗಣ್ಣ. ಅವಳು ಬಂದು ದೂರ ಕುಳಿತಳು. "ಲಲಿತ, ನಿನ್ನೆ ಏನೋಹುಚ್ಚುತಾಗಿ ನಿನ್ನಮಾತಾಡಿಸದೆ ಹೋಗಿಬಿಟ್ಟೆ. ನೀನೇನು ತಿಳಿದುಕೊಂಡುಬಿಟ್ಟೆಯೋ ಏನೋ ?"

ಅಷ್ಟೇ ಒಳ್ಳೆಯಮಾತು ಸಾಕಾಗಿತ್ತು. ಅವಳ ದುಃಖದ ಒರತೆ ಉಕ್ಕಿಬರಲು. ಲಲಿತ ಬಿಕ್ಕಿ ಬಿಕ್ಕಿ ಅತ್ತಳು. ಏಕಾಂಗಿಯಾಗಿ, ಪ್ರಪಂಚದಲ್ಲಿ ಕ್ರೂರರೀತಿಯಿಂದ ಅಪಚರಿಸಲ್ಪಟ್ಟ ಆ ಅಬಲೆ ಆರೀತಿ ಕಂಪಿಸುವುದನ್ನು ರಂಗಣ್ಣ ಸಹಿಸದಾದ. ಅವ ಳನ್ನು ಸೆಳೆದು ಎದೆಗಪ್ಪಿಕೊಂಡು ಆಶ್ರಯವಿತ್ತ. ಅವಳೇನೋ ಅವನ್ನು ಪ್ರತಿಭಟಿ ಸುವ ಕ್ಷೀಣಪ್ರಯತ್ನ ಮಾಡಿದರೂ, ಅವನ ತೋಳಸೆರೆಯಲ್ಲಿ ಒರಗಿದಳು. ಆರೀತಿ ಇಬ್ಬರೂ ಎಷ್ಟುಹೊತ್ತಿದ್ದರೋ ಏನೊ ಆಗ ಯಾರಿಗೂ ಮಾತಾಡಲು ಮನಸ್ಸು ಬರಲಿಲ್ಲ. ಮಾತಿಲ್ಲದೆ ಒಬ್ಬರ ಹೃದಯದ ಅರಿವು ಇನ್ನೊಬ್ಬರಿಗಾಗುತ್ತಿತ್ತು.

ಲಲಿತೆ ಅವನ ತೆಕ್ಕೆಯನ್ನು ಬಿಡಿಸಿಕೊಂಡು ಹೇಳಿದಳು :

' ನಾನು ಪಾಪಿ ; ಪಾಪದ ಕೆರೆಯಲ್ಲಿ ಮುಳುಗಿಹೋಗಿದ್ದೇನೆ. ನೀವು ನನ್ನನ್ನು ಮುಟ್ಟಬೇಡಿ. ಇನ್ನುಮುಂದೆಯೂ ಇದೇ ಹೊರಲಾಗದ ಹೊರೆಯನ್ನು ಹೊರಲಾರೆ. '

' ಲಲಿತ, ನಾವೆಲ್ಲರೂ ಪಾಪಿಗಳು. ಯಾರ ಪಾಪ ಹೆಚ್ಚು, ಯಾರ ಪಾಪ ಕಡಿಮೆ ? ಅದು ಭಗವಂತನೊಬ್ಬನಿಗೇ ಗೊತ್ತು. '

ಹೊತ್ತು ಜಾರುತ್ತಿತ್ತು. ಆದರೆ ಅದರ ಅರಿವೇ ಅವರಿಗಾಗಲಿಲ್ಲ. ಯಾವುದೊ ಕಳೆದುಕೊಂಡ ನಿಧಿಯನ್ನು ಪುನಃ ಪಡೆದವರಂತೆ ಅವರಲ್ಲಿ ತೃಪ್ತಿ-ಸಮಾಧಾನ ಗಳಿದ್ದುವು.

' ಇದು ಹೇಗಾಯಿತು ಲಲಿತ ? '

' ನನ್ನ ಪ್ರಾರಬ್ಧಕರ್ಮ ! ಅದನ್ನು ಹೇಳಿಯಾದರೂ ನಿಮ್ಮನ್ನು ಬೆರಗು ಗೊಳಿಸುವುದೇಕೆ ? '

' ಹೇಳು ಲಲಿತ '

' ನಿಮಗೆ ಮನೆಗೆ ಹೋಗಲು ಹೊತ್ತಾಗುವುದಿಲ್ಲವೆ ? '

' ಹೋದರೂ ಆಯಿತು ; ಇದ್ದರೂ ಆಯಿತು. ಎರಡೂ ಒಂದೆ '

' ಅದೇನು, ಮನೆಯಲ್ಲಿ ಯಾರೂ ಇಲ್ಲವೆ ? ಎಷ್ಟು ದಿನವಾಯಿತು ? '

' ಅದೂ ಒಂದು ಕತೆಯೇ ! ನಿನ್ನ ಜೀವನ ಒಂದು ರೀತಿಯಲ್ಲಿ ಶೂನ್ಯ ವಾದರೆ ನನ್ನದು ಇನ್ನೊಂದು ರೀತಿಯಲ್ಲಿ ಆಯಿತು. ಅದನ್ನು ಹೇಳಿಕೊಳ್ಳಲು ಸಹ ನನಗೆ ಯಾರೂ ಇಲ್ಲ. '

' ಇಲ್ಲಿಯೇ ಕೆಲಸವೇ ? '

' ಏನಾದರೂ ಮೊದಲು ಹೊಟ್ಟೆಯಪಾಡು ನೋಡಿಕೋ. ನೀನು ಏನೂ ತೆಗೆದುಕೊಂಡಿಲ್ಲವೆಂಬುದು ಗೊತ್ತಾಗಿದೆ. '

' ನನಗೇನೂ ಬೇಡ ; ನಿಮಗೇನಾದರೂ ಮಾಡಿಕೊಡಲೇ ? '

' ಅದೇನು ಮಾತು ಲಲಿತ ? '

'ನಿಮಗೆ ಈ ಮನೆಯಲ್ಲಿ, ಹೀಗೆ–ಮಾತ್ರ ಒಂದು ಲೋಟ ನೀರು ಕೊಡಬಲ್ಲೆ.'

ಲಲಿತ ಮತ್ತೆ ಅಳಲು ಮೊದಲಿಟ್ಟಳು.

ರಂಗಣ್ಣ ಅವಳೊಡನೆ ಅಡಿಗೆಮನೆಗೆ ಹೋದ. ಅಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದ ಸಾಮಾನುಗಳು ಲಲಿತೆ ಅಂದಿನ ದಿನವೆಲ್ಲಾ ಉಪವಾಸವಿದ್ದುದನ್ನು ಹೇಳುತ್ತಿದ್ದವು.

ಲಲಿತೆ ತನ್ನ ಕತೆಯನ್ನೆಲ್ಲಾ ಹೇಳಿದಳು. ತಾನಿಲ್ಲಿ ಬಂದು ಸೇರಿದುದು, ತನ್ನ ತಾಯಿ-ತಮ್ಮ ಇವರುಗಳಿಗೋಸ್ಕರ ಈ ವೃತ್ತಿಯನ್ನಾಶ್ರಯಿಸಿದುದು, ತಾಯಿ

ಸತ್ತುಹೋದುದು, ತಮ್ಮ ದೊಡ್ಡವನಾಗಿ ತನ್ನ ಸಂಪಾದನೆ ದುಡಿಯುವ ಸ್ಥಿತಿಗೆ ಬಂದಮೇಲೆ ಅಕ್ಕನೊಡನೆ ಜಗಳವಾಡಿ, ಬೈದು, ಬೇರೆ ಹೋದುದು-- ಎಲ್ಲಾ ಹೇಳಿದಳು. ರಂಗಣ್ಣ ನೀರವವಾಗಿ ಕೇಳಿದ.

'ಚಂದ್ರು-ಅವನಿಗೋಸ್ಕರ ನಾನು ಎಷ್ಟು ಕಷ್ಟಪಟ್ಟೆ ? ಅವರಿಬ್ಬರಿಲ್ಲದಿದ್ದರೆ ನಾನು ಖಂಡಿತ ಈ ತರಹ ಇರುತ್ತಿರಲಿಲ್ಲ. ಆದರೆ ಅವನು ದೊಡ್ಡವನಾದಮೇಲೆ ನನ್ನನ್ನು ಅಕ್ಕ ಎಂದುಕೊಳ್ಳಲು ನಾಚಿಕೆಯಾಯಿತು. ಅವನ ಮದುವೆಯ ವಿಷಯ ಸಹ ತಿಳಿಸಲಿಲ್ಲ. ಸುಖವಾಗಿದ್ದಾನಂತೆ. ದೇವರು ಅವನಿಗೆ ಒಳ್ಳೆಯದು ಮಾಡಲಿ. ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದೆವು. ಅವನಿಗಾಗಿ ನಾನು ಮಾನ ಮಾರಿಕೊಂಡೆ. ಆದರೆ ಅವನಿಗೂ ನಾನು ಬೇಡವಾಯಿತು. ಹೊರಡುವಾಗ ಆಡಬಾರದ ಮಾತು ಆಡಿದ.'

ಲಲಿತ ಎಲ್ಲ ಹೇಳಿದಮೇಲೆ, ರಂಗಣ್ಣ :

'ಹಿಂದೆ ಕಳೆದದ್ದು ನಮ್ಮ ಕೈಮೀರಿದ್ದು. ಮುಂದೇನು?' ಎಂದು ಕೇಳಿದ.

'ಮುಂದೇನೋ ಗೊತ್ತಿಲ್ಲ. ನಿನ್ನೆಗೆ ನನ್ನೀರೀತಿಯ ಜೀವನ ಮುಕ್ತಾಯವಾಯಿತು. ನನ್ನ ಮನಸ್ಸು ಚಂಚಲವಾಗಿಲ್ಲದಿದ್ದರೆ ಇದಕ್ಕೆ ಹಿಂದೆಯೇ ಇದು ಮುಗಿಯುತ್ತಿತ್ತು. ನಾನು ಎಂದೂ ಜಿಜ್ಞಾಸೆಗೆ ತೊಡಗಲಿಲ್ಲ. ಪರಿಸ್ಥಿತಿ ಹೇಗೆ ನಡೆಯಿಸಿಕೊಂಡು ಹೋಯಿತೋ ಹಾಗೆಯೇ ಹೋಗುತ್ತಾ ಬಂದೆ. ಇನ್ನು ನನಗೆ ಜೀವಿಸಬೇಕೆಂಬಾಸೆಯಿಲ್ಲ. ಹುಟ್ಟು ಸಾವುಗಳನ್ನು ಯಾರೊಬ್ಬರಾದರೂ ಗಮನಿಸಬೇಡವೆ ? ಇದುವರೆವಿಗೆ ನನ್ನ ಸಾವನ್ನು ಗಮನಿಸುವ ಮನುಷ್ಯರೂ ಇರಲಿಲ್ಲ. ಅದಕ್ಕೇ ಸಾಯಲಿಲ್ಲ.'

'ಆ ರೀತಿ ಯೋಚಿಸಿ ಫಲವಿಲ್ಲ. ಹಿಂದೊಮ್ಮೆ ನೀನು, 'ನನ್ನನ್ನು ಕರೆದುಕೊಂಡು ಹೋಗಿ' ಎಂದು ಕೇಳಿದೆ. ಆಗ ನಾನು ಹೇಡಿಯಾದೆ. ಆಗ ನಿನ್ನನ್ನು ಕರೆತಂದಿದ್ದರೆ ಇದೆಲ್ಲಾ ಅನಾಹುತ ನಡೆಯುತ್ತಲೇ ಇರಲಿಲ್ಲ. ಆ ಅಪರಾಧದ ಜವಾಬ್ದಾರಿ ನನ್ನದು. ಅಂದು ನೀನು ಕೇಳಿದ ಪ್ರಶ್ನೆಗೆ ಇಂದು 'ಹೂಂ' ಎನ್ನುತ್ತೇನೆ, ಬರುತ್ತೀಯಾ?'

'ನರಕದಲ್ಲಿರುವಳನ್ನು ಬಿಟ್ಟು ಬರುತ್ತೀಯಾ ಎಂದು ಕೇಳುವುದಾದರೂ ಏಕೆ? ಆದರೆ ಈಗ ಕೈಮೀರಿಹೋಗಿದೆ; ಕಾಲ ಮೀರಿದೆ. ನಾನು ಎಲ್ಲಿಗೂ ಬರಲೊಲ್ಲೆ.'

'ಅದೇನು ಲಲಿತ, ಇದೇ ಜೀವನ ಮುಂದೆಯೂ ನಡೆಸಬೇಕೆಂಬಾಸೆ ಇದೆಯೇ ?'

' ಇಲ್ಲ ಭಾವ, ಈ ರೀತಿಯೂ ಇರಲಾರೆ; ನಿಮ್ಮೊಂದಿಗೆ ಬರಲೂಆರೆ.

' ಹಾಗೆಂದರೆ ? '

' ಎರಡೂ ಸಾಧ್ಯವಿಲ್ಲ.

' ಅದೇನು ಲಲಿತ ? '

' ಅಂದು ನಿಮ್ಮನ್ನು ಬೇಡಿದಾಗ ನಾನು ಪರಿಶುದ್ಧಳಾಗಿದ್ದೆ. ನನ್ನ ದೇಹದ ವಿಷಯದಲ್ಲಿ ನಾನು ಹೇಳುವುದು. ನನ್ನ ಮನಸ್ಸು ಆಗ ಕಳಂಕರಹಿತವಾಗಿತ್ತು. ಈಗ ಎರಡರಲ್ಲಿಯೂ ನಾನು ಪತಿತೆ. ಇದುವರೆಗೆ ನಾನು ತೊಡಗಿದ ಕೆಲಸದಲ್ಲಿ ಮನಸ್ಸಿರಲಿಲ್ಲವೆಂದು ಹೇಳುವುದು ಕಪಟತನವಾದೀತು. ನಾನು ಈಗ ನಿಮ್ಮೊಂದಿಗೆ ಬಂದು ನಿಮ್ಮನ್ನು ವೈಲಿಗೆ ಮಾಡಲಾರೆ. ಈಗ ನೀವಿಲ್ಲಿರುವುದೂ ಸರಿಯಲ್ಲ. ಆದರೆ ನನ್ನ ಸ್ವಾರ್ಥದಿಂದ ಅದನ್ನು ನಾನು ಬಯಸಿದ್ದೇನೆ ಅಷ್ಟೆ. '

' ಯಾವ ಪಾಪಕ್ಕೂ ಪಶ್ಚಾತ್ತಾಪದ ಪ್ರಾಯಶ್ಚಿತ್ತವಿಲ್ಲದಿಲ್ಲ. '

' ನನಗೀಗ ಪಶ್ಚಾತ್ತಾಪವಾದರೂ ಆಗಿದೆಯೆಂದು ಯಾವ ಧೈರ್ಯದಿಂದ ಹೇಳುತ್ತೀರಿ ? ನಾನಿದುವರೆಗೆ ಎಷ್ಟು ಕುಟುಂಬಗಳ ಸೌಖ್ಯವನ್ನು ಹಾಳುಮಾಡಿದ್ದೇನೆಯೋ ದೇವರೇ ಬಲ್ಲ. ಆದರೆ ನನ್ನ ಮನಸ್ಸಿನಲ್ಲಿ ದೇವರಂತೆ ಪೂಜಿಸುತ್ತಿದ ನಿಮ್ಮ ಕುಟುಂಬದ ಸೌಖ್ಯವನ್ನು ನಾನು ಹಾಳುಮಾಡಲಾರೆ. ಹಾಗೆ ಮಾಡಿದರೆ ನನಗೆ ನರಕದಲ್ಲಿಯೂ ಜಾಗ ಸಿಕ್ಕುತ್ತೋ ಇಲ್ಲವೋ ? '

' ನಿನ್ನ ಊಹೆಗೆ ಬಿಡುವೇ ಇಲ್ಲ. ನೀನು ನನ್ನೊಡನೆ ಬಂದಿದ್ದರಿಂದ ನನಗೆ ತೊಂದರೆಯೆಂದು ಯಾರು ಹೇಳಿದರು ? '

' ಇಲ್ಲ ಭಾವ, ನಾನು ಕಾಲಿಟ್ಟ ಜಾಗದಲ್ಲಿ ತೊಂದರೆ. ನನಗೆ ಆಶ್ರಯವಿತ್ತವರಿಗೆ ತೊಂದರೆ. ನನ್ನ ಜಾತಕವೇ ಕೆಟ್ಟ ಜಾತಕ. ಅಂದು ನೀವು ಹೊಳೆಯ ದಂಡೆಯಲ್ಲಿ ನನ್ನ ಏನೋ ಕೇಳಿದಿರಿ ಭಾವ. ಆ ಮಾತು ನಿಮ್ಮ ಬಾಯಿಂದ ಬಂದೀತೇ ಎಂದು ಕಾದಿದ್ದೆ. ನನ್ನ ಸ್ವಾರ್ಥದಾಸೆಯೇ ಅಂದು ಮೇಲುಗೈ ಹೊಂದಿದ್ದರೆ ನಿಮ್ಮ ಕಾಲಮೇಲೆ ಬಿದ್ದು ಹೊರಳಾಡುತ್ತಿದ್ದೆ. ಅಷ್ಟು ಸಂತೋಷವಾಯಿತು. ಆದರೆ ಮರುಕ್ಷಣ ನನ್ನಲ್ಲಿದ್ದ ಒಳ್ಳೆಯ ಬುದ್ಧಿ ಹೇಳಿತು : 'ಜಾಗ್ರತೆ, ನೀನು ಇವರನ್ನು ಮದುವೆಯಾಗಿ ಇವರನ್ನೂ ಕೆಡಿಸಬೇಡ' ಎಂದು. ನನ್ನ ಜೀವನದಲ್ಲಿ ಅದೊಂದುಸಾರಿ ಮಾತ್ರ ವಿವೇಕದಿಂದ ನಡೆದುಕೊಂಡೆ. ನೀವು ತೊಂದರೆಯಿಂದ ಪಾರಾದಿರಿ. ಈಗೇಕೆ ಮತ್ತೆ ಸಿಕ್ಕಿಕೊಳ್ಳಲು ಆತುರವಾಗಿರುವಿರಿ ಭಾವ ? '

' ಲಲಿತ, ಆ ದಿವಸ ನನಗೆ ಗೊತ್ತಾಗಲಿಲ್ಲ. ಆ ಭವಿಷ್ಯ ನಿನ್ನ ಮನಸ್ಸಿನ ಮೇಲೆ ಅಷ್ಟು ಹಿಡಿತವಿಟ್ಟದೆ ಎಂದು ತಿಳಿದಿದ್ದರೆ ಅದನ್ನು ಪರಿಹರಿಸುತ್ತಲಿದ್ದೆ. '

'ಜೋಯಿಸರ ಮಾತು ಸುಳ್ಳಾಯಿತೇ ಭಾವ?'

'ನನ್ನ ವಿಷಯದಲ್ಲಿ ಸುಳ್ಳಾಗುತ್ತಲಿತ್ತು.'

'ದೇವರ ದಯದಿಂದ ನಾನು ಯತ್ನಿಸಲಿಲ್ಲ. ಹೋಗಲಿ ಬಿಡಿ. ಅದನ್ನು ನೆನೆದು ಆಗುವುದೇನು ಈಗ?'

'ಲಲಿತ, ಆ ದಿವಸ ನಿನ್ನನ್ನು ಒಂದು ಅರ್ಥದಲ್ಲಿ ಕೇಳಿದೆ. । ಆ ಅರ್ಥ ಈಗ ಇಲ್ಲ. ನಾನು ಅದಕ್ಕೆ ಹೊರತಾಗಿದ್ದೇನೆ.'

'ಭಾವ, ನನಗೂ ಅಂತಹ ಭಾವನೆ ಇನ್ನೂ ಇದೆಯೆಂದು ನಂಬುತ್ತೀರಾ?'

'ಸಂಶಯವಿಲ್ಲ ಲಲಿತ! ನನ್ನ ತಂಗಿಯನ್ನು ಈ ಬಳೇಪೇಟೆಯ ಸಂದಿನಲ್ಲಿ ಏಕಾಂಗಿಯಾಗಿ ಬಿಟ್ಟು ನಾನು ಹೇಗೆ ಹೋಗಲಿ? ಎಂದು ಹೇಳುವುದಕ್ಕೆ ಹೇಳಿದೆ ಅಷ್ಟೆ. ನೀನು ಬರದಿದ್ದರೆ ಇಲ್ಲ. ನಾನೇ ಸಾಮಾನು ತೆಗೆದುಕೊಂಡು ಇಲ್ಲಿಗೇ ಬಂದುಬಿಡುತ್ತೇನೆ. ಈ ದಿವಸ ಮಾತ್ರ ಇಲ್ಲಿಂದ ಹೊರಡುವುದಿಲ್ಲ. ಯಾಕೆಂದರೆ ನಿನ್ನ ವಿಷಯವಾಗಿ ನನಗೆ ನಂಬಿಕೆಯಿಲ್ಲ. ಈಗ ಬಿಟ್ಟರೆ ಎಲ್ಲಿಯಾದರೂ ಓಡಿ ಹೋಗಿಬಿಟ್ಟೇಯೆ. ನಿನಗೆ ತಲೆ ಸ್ವಲ್ಪ ಕೆಟ್ಟಿದೆ ಈಗ. ಬಾಗಿಲು ಬೀಗ ಹಾಕಿಕೊಂಡು ಹೋಗಿ ನಾಳೆ ಪುನಃ ಬರುತ್ತೇನೆ.'

'ಭಾವ, ನನ್ನ ವಿಷಯದಲ್ಲಿ ನಿಮಗೇಕೆ ಇಷ್ಟು ಆಸಕ್ತಿ? ನಿಮ್ಮ ಹಟವೇ ಗೆದ್ದಂತಾಯಿತು. ಇನ್ನು ನಾನು ಸಿಕ್ಕಿಕೊಂಡಮೇಲೆ ಒಂದು ಗುಟ್ಟು ಹೇಳುತ್ತೇನೆ. ಈ ದಿವಸ ನೀವು ಬರದಿದ್ದರೆ ನನ್ನನ್ನು ನೀವು ಪುನಃ ನೋಡುತ್ತಿದ್ದಿರೋ ಇಲ್ಲವೋ. ಒಂದುಸಾರೆ ನಿಮ್ಮನ್ನು ಕಂಡು ನನ್ನ ತಪ್ಪನ್ನೆಲ್ಲಾ ನಿಮ್ಮ ಮುಂದೆ ಒಪ್ಪಿಕೊಂಡು ಹಗುರವಾದ ಮನಸ್ಸಿನಿಂದ ಸಾಯಬೇಕು ಎಂದು ಮಾತ್ರ ಆಸೆಯಿತ್ತು.'

* * * *

## ೨೩

ಸುಂದರರಾಯನ ಮನೆಯ ಔಟ್‌ಹೌಸ್ ಬಿಟ್ಟು ರಂಗಣ್ಣ ಬೇರೆ ಮನೆ ಮಾಡಿದ. ಅಲ್ಲಿರುವುದು ಅಷ್ಟು ಸರಿಯಾಗಿ ಕಾಣಿಸಲಿಲ್ಲ. ಲಲಿತೆಯ ಮನಸ್ಸಿನಲ್ಲಿ ಹಳೆಯ ನೆನಪುಗಳು ಸುಳಿಯುವುದರಿಂದ ಅವಳಿಗೆ ದುಃಖವಾದೀತೆಂದು ಅವನು ಯೋಚಿಸಿದ. ಸುಂದರರಾಯನಿಗೆ ಎಲ್ಲಾ ವಿಷಯವೂ ತಿಳಿದಿತ್ತು. ಆದರಿಂದ ಅವನು ವಿಷಾದಪಡಲಿಲ್ಲ. ತಾನಾಗಿ ಬಿಡಲಾರದವಳು ಅವಳಾಗಿ ಬೇರೆ ಹೋದರೆ ಅದೂ ಒಂದು ಅನುಕೂಲವೇ.

ರಂಗಣ್ಣನ ಹೊಸ ಮನೆ ಲಲಿತೆಯ ಪ್ರಭಾವದಿಂದ ಕಳೆಗೂಡಿತ್ತು. ಯಾವ ಸಾಮಾನು ಎಲ್ಲಿರಬೇಕೋ ಅಲ್ಲಿರುತ್ತಿತ್ತು. ಇದ್ದವು ಕೆಲವೇ ಸಾಮಾನುಗಳಾದರೂ

ಈ ಮನೆಯ ಸೌಂದರ್ಯಕ್ಕೆ ಬೇರೇನೂ ಬೇಕಿಲ್ಲವೆಂದು ಕಾಣುವಂತೆ ಮಾಡಿದ್ದಳು. ಅವಷ್ಟರಿಂದಲೇ ಅವಳು ಮಾಡುವ ಕೆಲಸಗಳಲ್ಲೆಲ್ಲಾ ಕಲೆಯಿರುತ್ತಿತ್ತು. ಅವಳ ಹಿಡಿತದಲ್ಲಿ ಸಂಸಾರ ಒಂದು ಕ್ರಮಕ್ಕೆ ಬಂದಿತು. ರಂಗಣ್ಣನ ಮನಸ್ಸಿನಲ್ಲಿ ಏನು ಬಯಕೆಯಿತ್ತೋ ಅದನ್ನು ಅವನು ಹೇಳದೇನೇ ಕಂಡುಕೊಂಡು ಪೂರ್ತಿಗೊಳಿಸುವ ಶಕ್ತಿ ಅವಳಲ್ಲಿತ್ತು. ರಂಗಣ್ಣ ಸುಪ್ರೀತನಾದ. ಅವನಿಗೆ ಯಾವ ಕೊರತೆಯೂ ಕಾಣಿಸಲಿಲ್ಲ. ' ಸಾಕು, ಸಂಸಾರ ಪೂರ್ಣವಾಯಿತು ' ಎಂದುಕೊಂಡ.

ಆದರೆ ಲಲಿತೆಗೆ ಇದರಿಂದ ತೃಪ್ತಿಯಾಗಲಿಲ್ಲ. ಈ ಸಂಸಾರಕ್ಕೆ ತಕ್ಕ ಗೃಹಿಣಿ ಇಲ್ಲದಿರುವುದು ಅವಳ ಮನಸ್ಸಿನಲ್ಲಿ ದೊಡ್ಡ ಕೊರತೆಯಾಗಿತ್ತು. ಗಂಡ–ಹೆಂಡಿರ ನಡುವೆ ಬೆಳೆದುಬಂದ ವೈಮನಸ್ಯ ಅವಳಿಗೆ ಅರ್ಥವಾಗಿತ್ತು. ಸ್ವಲ್ಪ ಚಾಕಚಕ್ಯತೆಯಿಂದ ಅವರಿಬ್ಬರಲ್ಲಿ ವಿಶ್ವಾಸವನ್ನು ಬೆಳೆಯಿಸಬಹುದು ಎಂದುಕೊಂಡಳು. ಆ ರೀತಿ ವೈಷಮ್ಯ ಬೆಳೆದುಬರುವುದಕ್ಕೆ ಕಾಮಾಕ್ಷಿಗೆ ಸರಿಯಾದ ಶಿಕ್ಷಕರಿಲ್ಲದುದೇ ಕಾರಣವೆಂದುಕೊಂಡಳು. ಒಂದುಸಾರೆ ಅವಳನ್ನು ಕರೆಯಿಸಿಕೊಂಡರೆ ಅವಳನ್ನು ಭಾವನಿಗೆ ತಕ್ಕ ಹೆಂಡತಿಯಾಗಿ ಮಾರ್ಪಡಿಸಿಯೇನು ಎಂದು ನಂಬಿದಳು. ಆದನ್ನೇ ರಂಗಣ್ಣನೊಡನೆ ಹೇಳಿದಳು.

' ಭಾವ, ಎಷ್ಟು ದಿನವಾಯ್ತು. ಕಾಮಾಕ್ಷೀನ ಕರೆಸಿಕೊಳ್ಳಬಾರದೇ ? '

' ಏತಕ್ಕೆ ? '

' ಒಳ್ಳೇ ಮಾತಾಡ್ತೀರಲ್ಲ. ಹೆಂಡತಿಯನ್ನು ಕರೆಸಿಕೊಳ್ಳುವುದೇತಕ್ಕೇ? ಮದುವೆ ಮಾಡಿಕೊಂಡದ್ದೇತಕ್ಕೆ ? ಮನೆಗೆ ಗೃಹಿಣಿ ಬೇಡವೆ ? '

' ನೀನೇ ಇದ್ದೀಯಲ್ಲಾ ಲಲಿತ! ನಿನಗಿಂತ ಇನ್ನಾವ ಗೃಹಿಣಿ ತಾನೇ ಶೋಭಿಸಿಯಾಳು ? '

ಲಲಿತ ಇಂತಹ ಮಾತನ್ನು ಕೇಳಿರಲಿಲ್ಲ. ಆದ್ದರಿಂದ ಸ್ವಲ್ಪ ನಾಚಿದಳು.

' ನಾನು ಈ ಮನೆಗೆ ದಾಸಿ. ದಾಸಿ ಗೃಹಿಣಿ ಹೇಗಾದಾಳು ? ಕಾಮಾಕ್ಷಿ ಬಂದರೆ ನಾನೂ ಸಂತೋಷವಾಗಿದ್ದೇನು. '

' ಕಾಮಾಕ್ಷಿ ಇಲ್ಲಿಗೆ ಬರುವುದು ಆಗದ ಮಾತು. ಆ ಸಂಬಂಧದ ಕತೆ ಎಂದೋ ಪೂರೈಸಿಹೋಗಿದೆ. '

' ಅದು ಹೇಗೆ ಪೂರೈಸುತ್ತೆ ಭಾವ? ಅವಳ ಗತಿ ಏನು ಎಂದು ನೀವು ಯೋಚಿಸಿದ್ದೀರಾ ? '

' ಅವಳಿಗೇನಾಗಿದೆ? ತೌರುಮನೆಯಲ್ಲಿ ಸುಖವಾಗಿದ್ದಾಳೆ

'ಎಷ್ಟು ದಿನ ಭಾವ? ಅವಳಿನ್ನೂ ತಿಳಿಯದವಳು. ಹೆಣ್ಣಿನ ಜಾಗ ಯಾವುದು ಎನ್ನುವುದು ಅವಳಿಗೆ ಗೊತ್ತಿಲ್ಲ.'

'ಗೊತ್ತಾಗಲಿ ಬಿಡು ; ಆಮೇಲೆ ನೋಡೋಣವಂತೆ.'

ಈ ಪ್ರಸ್ತಾಪ ಮುಂದುವರಿಸುವುದಕ್ಕೆ ಇದು ಸಮಯವಲ್ಲ ಎಂದು ಲಲಿತೆ ಸುಮ್ಮನಾದಳು.

† † †

ಶಂಕರಯ್ಯ ಹಾಲಿನಲ್ಲಿ ಸಂಗೀತಕಛೇರಿಗೆ ಹೋಗಿ, ಲಲಿತ ರಂಗಣ್ಣ ಹಿಂತಿರುಗುತ್ತಿದ್ದರು. ಲಲಿತೆ ಬಂದಮೇಲೆ ರಂಗಣ್ಣನ ಮನಸ್ಸು ಇಂತಹ ವಿಷಯ ಗಳಿಗೆ ತಿರುಗಿತ್ತು. ದಾರಿಯಲ್ಲಿ ಬರುತ್ತಾ ಯಾರೋ,

'ಓಹೋಹೋ! ಲಲಿತಾ, ಮಾತಾಡಿಸದೇ ಹೋಗುತ್ತೀಯಲ್ಲಾ?' ಎಂದು ಕೇಳಿದರು. ಲಲಿತೆ ಮಾತಾಡಲಿಲ್ಲ. ರಂಗಣ್ಣ ತಿರುಗಿ ನೋಡಿದ. ಸುಬ್ಬಾ ಶಾಸ್ತ್ರಿಗಳು! ಅವರ ವಿಷಯ ಲಲಿತೆಯ ಬಾಯಿಂದ ಕೇಳಿದ್ದ. ಅನೇಕಸಾರೆ ಅವರನ್ನು ನೋಡಿದ್ದರಿಂದ ಗುರುತೂ ಇತ್ತು. ಆದರೆ ಅವರೊಡನೆ ಶಿಷ್ಟಾಚಾರದ ಮಾತಾಡುವುದೂ ಅವಮಾನವೆಂದು ಭಾವಿಸಿ ಮಾತಾಡಲಿಲ್ಲ.

'ಎಲ್ಲಿದ್ದೀಯಾ ಲಲಿತಾ? ನಾನು ಬಂದವನು ನಿನ್ನನ್ನು ವಿಚಾರಿಸಿದೆ. ನಿನ್ನ ಸಮಾಚಾರವೇ ಗೊತ್ತಾಗಲಿಲ್ಲ. ಅಲ್ಲ, ವರ್ಷಗಳಾದರೂ ಕಾಗದ ಬರೆಯ ಬೇಡವೆ?' ಎಂದರು ಸುಬ್ಬಾಶಾಸ್ತ್ರಿಗಳು ಮುಗುಳುನಗೆ ಬೀರುತ್ತಾ. ಮತ್ತೆ ರಂಗಣ್ಣನನ್ನು ಗುರುತಿಸಿ,

'ಓಹೋಹೋ! ಏನಯ್ಯ ರಂಗಣ್ಣ, ಗುರುತೇ ಸಿಗಲಿಲ್ಲವಲ್ಲಯ್ಯ? ಲಲಿತ ನಿನ್ನ ಜೊತೆಗೇ ಇದ್ದಾಳೇನು? ಶೃಂಗೇರಿಯಲ್ಲಿಯೇ ತಿಳಿಯಿತು: ನೀನು ಒಬ್ಬನೆ ಇದ್ದೀಯಾ; ಹೆಂಡತೀನ ತೌರುಮನೆಯಲ್ಲೇ ಬಿಟ್ಟಿದ್ದೀಯಾ ಅಂತ. ಹೇಗೇನು ಸಮಾಚಾರ?'

ಶಾಸ್ತ್ರಿಗಳು ಲಲಿತೆಯಕಡೆ ವಾರೆನೋಟದಿಂದ ನೋಡಿ ಕಣ್ಣು ಮಿಸುಕಿ ಸಿದರು. ರಂಗಣ್ಣನಿಗೆ ಮೈಮೇಲೆ ಕೆಂಡವೆರಚಿದಂತಾಯಿತು. ಇಬ್ಬರಿಗೂ ಅವರ ಸಹವಾಸ ಅಸಹ್ಯವಾಗಿತ್ತು. ರಂಗಣ್ಣ ಒಬ್ಬನೇ ಆಗಿದ್ದರೆ ಒಂದು ಕೈ ನೋಡು ತ್ತಿದ್ದ. ಆದರೆ ಜೊತೆಯಲ್ಲಿ ಲಲಿತೆ ಇದ್ದದ್ದರಿಂದ ಹಿಂದೆ ಮುಂದೆ ನೋಡ ಬೇಕಾಯಿತು.

ರಂಗಣ್ಣ 'ಕೆಲಸವಿದೆ, ಹೋಗುತ್ತೇವೆ' ಎಂದು ಸರಸರನೆ ಹೊರಟ. ಆದರೆ ಸುಬ್ಬಾಶಾಸ್ತ್ರಿಗಳು ಬೆನ್ನು ಬಿಡದೆ 'ಪರವಾಯಿಲ್ಲ; ನನಗೂ ಏನೂ ಕೆಲಸವಿಲ್ಲ.

ನಾನೂ ಜೊತೆಗೆ ಬರುತ್ತೇನೆ. ಬಹಳ ಬೇಜಾರು ನನಗೆ ಇಲ್ಲಿ. ನಿಮ್ಮ ಮನೆ ನೋಡಿಕೊಂಡು ಬಂದರಾಯಿತು. ಪರಸ್ಥಳದಲ್ಲಿ ನಮ್ಮವರು ಸಿಕ್ಕಿದರೆ ಎಷ್ಟೋ ಸಂತೋಷ. ನಾನು ಈಗ ಒಂದು ತಿಂಗಳಿಂದ ಇಲ್ಲಿಯೇ ಇದ್ದೇನೆ. ಮಗುವಿಗೆ ಕಣ್ಣುನೋವು. ಆಸ್ಪತ್ರೆಗೆ ಸೇರಿಸಿದ್ದೇನೆ. ಚಾಮರಾಜಪೇಟೆಯಲ್ಲಿ ಜಟಕಾ ಸ್ಟಾಂಡಿದೆಯಲ್ಲಾ ಅದರ ಮೇಲುಗಡೆಗೆ..........ನಂಬರು ಮನೆಯಲ್ಲಿ ಇದ್ದೇವೆ.'

ರಂಗಣ್ಣನಿಗೆ ಸಿಟ್ಟೇರುತ್ತಿತ್ತು. ಆದರೆ ಏನುಮಾಡಲೂ ಬರುವಂತಿರಲಿಲ್ಲ. ಸುಬ್ಬಾಶಾಸ್ತ್ರಿಗಳು ಮನೆಯವರೆಗೂ ಬಂದು, ರಂಗಣ್ಣ ಮನೆಯೊಳಕ್ಕೆ ಕರೆಯದ್ದ ರಿಂದ ಹಾಗೆಯೇ ಹೊರಟುಹೋದರು. ಆಗಲೂ ನಸುನಗುತ್ತಲೇ ಇದ್ದರು. ಅವರಿಗೆ ಮಾನಾಪಮಾನಗಳೆರಡೂ ಸಮನಾಗಿದ್ದುವು.

ರಂಗಣ್ಣ ಕಾರ್ಖಾನೆಯಿಂದ ಅರ್ಧದಿವಸ ರಜಾ ತೆಗೆದುಕೊಂಡು ಮುಂಚಿತ ವಾಗಿಯೇ ಮನೆಗೆ ಬಂದ. ಮನೆಯ ಬಾಗಿಲು ತೆರೆದಿತ್ತು. ಮನೆಯೊಳಗಿನಿಂದ ಮಾತುಕತೆಗಳು ಜೋರಾಗಿ ಕೇಳಿಬರುತ್ತಿದ್ದುವು. ರಂಗಣ್ಣ ಬಾಗಿಲಹತ್ತಿರ ತುಸು ಅನುಮಾನಿಸಿದ. ಲಲಿತ ಹೆದರಿದ ಧ್ವನಿಯಲ್ಲಿ ಹೇಳುತ್ತಿದ್ದಳು :

'ನೀವಿಲ್ಲಿಂದ ಹೊರಟುಹೋಗಿ. ನನ್ನ ಜೀವನವನ್ನು ಹಾಳುಮಾಡಿದಿರಿ. ಈಗ ನಾನು ಸುಖವನ್ನು ಕಾಣುವ ಹೊತ್ತಿಗೆ ಮತ್ತೆ ಹಾಳುಮಾಡಲು ಶನಿಯಾಗಿ ವಕ್ರಿಸಿದ್ದೀರಲ್ಲಾ !'

'ಹಿಂದಿನ ಕತೆ ಬೇಡ ಲಲಿತ. ಆಗ ಅನೇಕ ಕಾರಣಗಳಿಂದ ಬರಲಾಗ ಲಿಲ್ಲ. ನಾನು ಬಂದಿದ್ದರೆ ಅಲ್ಲೆಲ್ಲಾ ಅನಾಯಕವಾಗಿ ಹೋಗುತ್ತಿತ್ತು. ಆದರೂ ನಿನಗೆ ಅನೇಕ ಕಾಗದ ಬರೆದೆ. ನಿನಗೆ ಒಂದೂ ತಲಪಲಿಲ್ಲವೆಂದು ತೋರುತ್ತದೆ.'

'ಸರಿ, ಒಳ್ಳೆಯದಾಯಿತು. ನೀವು ಸಹಾಯ ಮಾಡಲಿಲ್ಲ ಎಂದು ನಿಮ್ಮನ್ನು ಕೇಳಿದವರು ಬೇಕಲ್ಲ? ಅದ್ಯಾಕೆ ಈಗ? ನೀವು ಹೊರಡಿ ಅಷ್ಟೆ.'

'ಲಲಿತ, ಈಗ ಎಲ್ಲಾ ತಹಬಂದಿಗೆ ಬಂದಿದೆ. ನನಗೆ ಹಳ್ಳಿ ಬೇಜಾರಾಗಿದೆ. ಇಲ್ಲಿಯೇ ಒಂದು ಮನೆ ಕೊಂಡುಕೊಂಡು ಇದ್ದುಬಿಡೋಣ ಎಂದು ಮಾಡಿದ್ದೇನೆ. ಹುಡುಗನೂ ಓದಬೇಕಂತೆ. ಎರಡೂ ಆದಹಾಗಾಯಿತು. ನೀನು ಬಂದು ನನ್ನೊಂದಿಗೆ ಇದ್ದುಬಿಡು. ನಿನಗೇನೂ ಕಡಿಮೆಯಾಗದಂತೆ ನೋಡಿ ಕೊಳ್ಳುತ್ತೇನೆ.'

'ನನಗೇನೂ ಬೇಡ. ನನಗೋಸ್ಕರ ತಾವೇನೂ ತೊಂದರೆ ತೆಗೆದುಕೊಳ್ಳ ಬೇಕಾಗಿಲ್ಲ. ನನಗೆ ಎಲ್ಲಾ ಸುಖವಾಗಿದೆ. ನನ್ನ ಪಾಡಿಗೆ ನನ್ನ ಬಿಟ್ಟುಬಿಟ್ಟರೆ ಬಹಳ ಉಪಕಾರ ಮಾಡಿದಂತಾಗುತ್ತದೆ.'

' ಏನು ಸುಖ ? ಈ ರಂಗಣ್ಣನಿಗೆ ಅವನಿಗೇ ತಿನ್ನಲು ಗತಿಯಿಲ್ಲ. ಹೆಂಡತಿಯನ್ನು ಸಹ ಸಾಕಲಾರದೇ ತೌರಿನಲ್ಲಿ ಬಿಟ್ಟಿದ್ದಾನೆ. ನಿನಗೇನು ಮಾಡಿಯಾನು?'

' ನಿಮ್ಮನ್ನು ಕೇಳಿಕೊಳ್ಳುತ್ತೇನೆ. ಭಾವನವರ ವಿಷಯ ಏನೂ ಮಾತಾಡಬೇಡಿ. '

' ಓಹೋಹೋ! ಇದೆಷ್ಟು ದಿವಸದಿಂದ ನಿನಗವನು ಭಾವ? ಸರಿ, ಈಗ ಅರ್ಥವಾಯಿತು. ಈ ಸಂಪಾದನೆ ಬಿಟ್ಟು ಬರಲಿಷ್ಟವಿಲ್ಲ ಎನ್ನು. ನಿನ್ನ ದುಡಿತದಿಂದ ಅವನ ಜೀವನ ಸಾಗಬೇಕಾಗಿದೆ. ಕೊನೆಗೆ ನಿನಗೆ ಭಿಕ್ಷಾನ್ನದ ಪಾತ್ರೆಯೇ ಗತಿ. ನನ್ನೊಂದಿಗೆ ಬಾ. ನೀನು ಜೀವದಿಂದಿರುವತನಕ ಯಾವುದಕ್ಕೂ ಕೊರತೆಯಿಲ್ಲ. ಒಡವೆ ವಸ್ತ್ರ ಏನು ಬೇಕು?

' ನನಗೇನೂ ಬೇಕಾಗಿಲ್ಲ. ನೀವು ಬಂದು ಈ ರೀತಿ ಪೀಡಿಸುವುದರಿಂದ ಅವರೆಲ್ಲಾದರೂ ಕಂಡು ತಪ್ಪು ತಿಳಿದುಕೊಳ್ಳುವುದಕ್ಕೆ ಮಾತ್ರ ದಾರಿಯಾಗುತ್ತದೆ. ಈಗಿನ ನನ್ನ ಸುಖಕ್ಕೂ ಕಲ್ಲು ಬಿದ್ದೀತು. ನನ್ನ ಬದುಕಿನ ಕೊನೆಯ ದಿನಗಳನ್ನಾದರೂ ಪಾಪದ ಸಂಪರ್ಕವಿಲ್ಲದೇ ಕಳೆಯುವಂತಾಗಲಿ. '

' ಓಹೋಹೋ! ಲಲಿತೆ ಈಗ ಪತಿವ್ರತೆ. ಸೀತಾ, ಅರುಂಧತಿಯರ ಪಂಕ್ತಿಗೆ ಸೇರತಕ್ಕವಳು. ಪರವಾಯಿಲ್ಲ ಲಲಿತಾ, ಸೂಳೆಯರ ವಿದ್ಯೆ ಪೂರಾ ಕಲಿತಿದ್ದೀ. ನಿಜವಾಗಿಯೂ ನೀನು ಹುಟ್ಟುಸೂಳೆಯೇ. ಇದೆಲ್ಲಾ ದ್ರಾವಿಡ ಪ್ರಾಣಾಯಾಮವೇಕೆ? ಏನು ಬೇಕು ಹೇಳು..........'

' ನೀವಿಲ್ಲಿಂದ ಈಕ್ಷಣವೇ ತೊಲಗುವುದು ಬೇಕು ' ಎಂದು ಕೂಗಿದ ರಂಗಣ್ಣ—ಅವರ ಮುಂದೆ ಹೋಗಿ ನಿಂತು.

ಸುಬ್ಬಾಶಾಸ್ತ್ರಿಗಳು ಅವನು ಅಕಸ್ಮಾತ್ ಎದುರುಬಂದಿದ್ದಕ್ಕೂ, ಅವನ ಉಗ್ರ ರೂಪಕ್ಕೂ ಹೆದರಿದರು. ಅದನ್ನು ತೋರಿಸಿಕೊಳ್ಳಲೊಲ್ಲದೆ,

' ಇದೇಕೆ ಅಷ್ಟು ಆಟೋಪ ರಂಗಣ್ಣ ? ಲಲಿತೆಯನ್ನು ನೋಡಿಕೊಂಡು ಹೋಗೋಣ ಎಂದು ಬಂದಿದ್ದೆ. ಇನ್ನೇನು ಹೊರಡುತ್ತೇನೆ ' ಎಂದರು.

' ಹೊರಡಿ, ಈ ಕ್ಷಣ '

' ಅದೇನು ಅಂತಹ ಪ್ರಮಾದವಯ್ಯಾ ನಾನಿಲ್ಲಿರುವುದು? ಲಲಿತೆಯ–ನನ್ನ ಸಂಬಂಧ ಬಹಳ ಹಳೆಯದು. ಅವಳು ನನಗೆ ಬೇಕಾದವಳು. ಹಿಂದೆ ಅವಳಿಗೆ ಆಶ್ರಯ ಕೊಟ್ಟವನು ನಾನೇ. ಅವಳ ಯೋಗಕ್ಷೇಮ ವಿಚಾರಿಸುವುದು ನನ್ನ ಕರ್ತವ್ಯ. '

' ಮನೆಹಾಳ ಪಿಶಾಚಿ! ಮತ್ತೆ ಉಸಿರೆತ್ತೀಯೆ! ಈ ಕ್ಷಣ ಹೊರಡದಿದ್ದರೆ ಕತ್ತುಹಿಡಿದು ತಳ್ಳಬೇಕಾದೀತು. '

ಸುಬ್ಬಾಶಾಸ್ತ್ರಿಗಳು ನಿಧಾನವಾಗಿ—ಆದರೂ ನಡುಗುವ ಕಾಲುಗಳಿಂದ ಬಾಗಿಲು ದಾಟಿ ಹೇಳಿದರು : ' ರಂಗಣ್ಣ, ನಿನಗೂ ಲಲಿತೆ ಟೋಪಿ ಹಾಕುತ್ತಾಳೆ. ನಂಬಿಕೋ. ಸೂಳೆಯರು ಎಂದಾದರೂ ಒಬ್ಬರನ್ನೇ ನಂಬಿಕೊಂಡು ಇರುತ್ತಾರೇನಯ್ಯ ? '

ರಂಗಣ್ಣ ರಭಸದಿಂದ ಅವರೆಡೆಗೆ ನುಗ್ಗಿದ. ಆದರೆ ಲಲಿತಾ ಬಲವಾಗಿ ಅವನನ್ನು ಹಿಡಿದುಕೊಂಡು ತಡೆದಳು.

* * * *

ರಂಗಣ್ಣನ ಕಾರ್ಖಾನೆಯ ವಾತಾವರಣ ಬಿಸಿಯೇರುತ್ತಿತ್ತು. ಜನರು ತೀರಾ ಅತೃಪ್ತಿ ತೋರಿಸುತ್ತ ನಡೆದಿದ್ದರು. ಕೇವಲ ಸಣ್ಣ ವಿಷಯಗಳಲ್ಲಿ ಸಹ ಕೂಲಿಕಾರರ ಹಿತವನ್ನು ಅಲಕ್ಷಿಸಿ ಆಡಳಿತಗಾರರು ನಡೆಯುತ್ತಿದ್ದರು. ಯಾವುವನ್ನು ಕೇಳಿದರೂ ' ಶಿಸ್ತು, ಶಿಸ್ತು ! ' ಎಂಬ ಮಾತುಗಳೇ ಕೇಳಿಬರುತ್ತಿದ್ದುವು.

ಬೆಳಗಾಗ ರೈಲು ಏಳು ಗಂಟೆಗೇ ಕಾರ್ಖಾನೆ ತಲುಪುವುದು. ಕಾರ್ಖಾನೆಯ ಹಗಲು ಷಿಫ್ಟಿನವೇಳೆ ಎಂಟರಿಂದ ನಾಲ್ಕು ಗಂಟೆ. ಮೂರು ಗಂಟೆಗೆ ರೈಲೊಂದು ಬರುತ್ತದೆ. ಒಂದೂವರೆಗಂಟೆಗೆ ಪುನಃ ರೈಲು ಕಾರ್ಖಾನೆ ತಲುಪುತ್ತದೆ. ಅದರಲ್ಲಿಯೇ ಸಂಜೆಯ ಷಿಫ್ಟಿನವರು ಬಂದು ಕಾದಿರುತ್ತಾರೆ. ಅವರ ಕಾಲ ಸಂಜೆ ನಾಲ್ಕರಿಂದ ನಡುರಾತ್ರಿ. ಮೂರುಗಂಟೆಗೆ ರೈಲು ಬಿಟ್ಟರೆ, ಪುನಃ ರೈಲು ಬೆಂಗಳೂರು ಕಡೆ ವಾಪಸು ಬರುವುದು ರಾತ್ರಿ ಹತ್ತು ಗಂಟೆ. ನಾಲ್ಕುಗಂಟೆಗೆ ಕೆಲಸ ಮುಗಿಸಿದವರು ಹತ್ತುಗಂಟೆಯವರೆಗೆ ಅನ್ನ ನೀರಿಲ್ಲದೆ ಕಾದಿರಬೇಕು. ಅದಕ್ಕೆ ಕೂಲಿಯವರು ' ಹಗಲುಷಿಫ್ಟನ್ನು ಏಳರಿಂದ ಮೂರುಗಂಟೆಯವರೆಗೆ ಬದಲಾಯಿಸಿ. ಮೂರರಿಂದ ಸಂಜೆಯವರು ಕೆಲಸ ಮಾಡುತ್ತೇವೆ. ಹಗಲಿನವರು ಮೂರುಗಂಟೆಗೆ ಹಿಂತಿರುಗುತ್ತೇವೆ ' ಎಂದು ಕೇಳಿಕೊಂಡರು. ಅದಕ್ಕೆ ಆಡಳಿತಗಾರರು ಹೇಳಿದ ಉತ್ತರವೆಂದರೆ ' ಇದು ಅಮೇರಿಕದಲ್ಲಿ ಅನುಸರಿಸುವ ವೇಳೆ. ಅದಕ್ಕೆ ವಿರುದ್ಧವಾಗಿ ನಡೆಯುವುದು ಆಗದು. '

' ಶತಮಾನಗಳ ಹಿಂದೂರಕ್ತವಿರುವ ಈ ಜನರಿಗೆ ಅಧಿಕಾರಮದದಿಂದ ತಾವು ಬಿಳಿಯರೇ ಎಂಬ ಮದವೇರಿತ್ತು.

ಕಾರ್ಖಾನೆಯಲ್ಲಿ ರಾತ್ರಿಯವೇಳೆ ಎಷ್ಟೋ ದಿವಸ ಕೆಲಸವಿರುತ್ತಿರಲಿಲ್ಲ. ಆದರೆ ಆಗ ಜನರು ಸ್ವಲ್ಪವೂ ತೂಕಡಿಸದೆ ಎಂಟುಗಂಟೆಗಳ ಕಾಲ ಕಳೆಯಬೇಕು. ಕಾರಣ ಶಿಸ್ತು ! ಜನರಿಗೆ ಸ್ವಲ್ಪ ಸಲುಗೆ ಕೊಟ್ಟರೆ ಶಿಸ್ತು ತಪ್ಪಿಹೋಗುತ್ತದೆ.

ಮನುಷ್ಯಪ್ರಾಣಿ ತನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡು, ಈ ಅಧಿಕಾರಿಗಳ ಕೈಕೆಳಗೆ ಒಂದು ಜವಾಬ್ದಾರಿಯಿಲ್ಲದ ಪಶುವಾಗಿತ್ತು.

ಹೀಗೇಕೆ ಮನುಷ್ಯ ಕಡುತರವಾದ ನಿಯಮಗಳಿಗೆ ತಲೆಬಾಗಬೇಕು? ಸ್ವಲ್ಪ ಹೆಚ್ಚು, ಸ್ವಲ್ಪ ಕಡಿಮೆ ಕೆಲಸವಾದರೆ ಸಾಲದೆ? ಪ್ರತಿಯೊಬ್ಬನೂ ಯೋಚನಾ ಶಕ್ತಿಯುಳ್ಳವನು, ಜವಾಬ್ದಾರಿಯುಳ್ಳ ಪೌರ ಎಂಬ ಭಾವನೆಯೇಕೆ ಬರಲಾರದು, ಈ ಉಳ್ಳವರ ತಲೆಯಲ್ಲಿ? ಪ್ರತಿಯೊಬ್ಬನೂ ಅಪ್ರಮಾಣಿಕ, ಕಳ್ಳ, ಕೆಲಸಕ್ಕೆ ತಲೆ ತಪ್ಪಿಸಿಕೊಳ್ಳುವವನು ಎಂಬ ಮೂಲಭಾವನೆಯಿಂದ ಆರಂಭಿಸಿ ಅವನಮನಸ್ಸಿನಲ್ಲಿ ಇಲ್ಲದ ಕೆಟ್ಟ ಯೋಚನೆಯನ್ನು ಅಧಿಕಾರಿ ವರ್ಗದವರೇ ತುಂಬಿ, ಅದು ಬಲಿತು ಬಂದಾಗ ಅವರನ್ನೇಕೆ ಶಿಕ್ಷಿಸಬೇಕು? ಈ ಮಾನವತಾ ರಹಿತವಾದ ವಾತಾವರಣಕ್ಕೆ ಯಾವುದು ಮೂಲ ಕಾರಣ? ಮನುಷ್ಯ ಇನ್ನೊಬ್ಬನ ದುಡಿಮೆಯಿಂದ ಜೀವಿಸ ಬೇಕೆನ್ನುವ ನೀಚ ಸ್ವಾರ್ಥವೇ?ಅದಕ್ಕೆ ಆಳಾದವನು ಕಲ್ಪಿಸುವ ಪ್ರತಿಕ್ರಿಯೆಯೇ?

ಎಂತಹ ಬಾಳು ಇಲ್ಲಿಯ ಜೀತಗಾರರದು? ಅವರಿಗೇನಿದೆ ಸುಖ? ಅವರೂ ಮನುಷ್ಯರಲ್ಲವೆ? ಒಂದು ಯಂತ್ರ ಕೆಟ್ಟುಹೋಗುವುದೆಂದು ಅದಕ್ಕೆ ಉಣ್ಣೆಯ ಬಟ್ಟೆ ಹೊದಿಸುತ್ತಾರೆ. ರಾಸಾಯನಿಕ ದ್ರವ್ಯದಿಂದ ತುಕ್ಕು ಹಿಡಿಯುವುದೆಂದು, ಅದನ್ನು ಮುಚ್ಚಲು ನೂರಾರು ರೂಪಾಯಿ ತೆರುತ್ತಾರೆ. ಒಂದು ಹನಿ ಆಸಿಡ್ ಬಿದ್ದರೆ ಸೋಡಾದಿಂದ ತೊಳೆಯುತ್ತಾರೆ. ಮನುಷ್ಯನ ದೇಹ ಜೋಪಾನವಾಗಿಡಲು ಏನು ಮಾಡಿದ್ದಾರೆ ಇವರು? ಪ್ರತಿ ನಿಮಿಷ ಅವನ ದೇಹ ಒಂದಲ್ಲ ಒಂದು ಕಡೆ ತೂತಾಗುತ್ತಿದೆ. ಅದಕ್ಕೆ ಒಂದು ಬೂಟ್ಸು, ರಬ್ಬರಿನ ಮೇಲುಹೊದಿಕೆ ಕೊಡಲು ಮಿತವ್ಯಯ ಅಡ್ಡಬರುತ್ತದೆ. ದಿನವೂ ಸ್ವಲ್ಪಸ್ವಲ್ಪವೇ ವಿಷದ ಗಾಳಿ ಕುಡಿದು, ಅವನು ನಶಿಸುತ್ತಿದ್ದಾನೆ. ಕಾರ್ಖಾನೆಯಲ್ಲಿ ಒಂದೇನಾದರೂ ಅನಾಹುತವಾದರೆ ಕಾರ್ಖಾನೆಯ ನಿಯಮದಂತೆ ಆತನಿಗೆ ಆಸ್ಪತ್ರೆಯಲ್ಲಿರುವತನಕ ಅರ್ಧ ಸಂಬಳ--ಅದೇ ಪ್ರತಿಫಲ. ಕಾರ್ಖಾನೆಯ ನಿಯಮ ವಾರಕ್ಕೊಂದು ದಿವಸ ಕೂಲಿಗಾರರಿಗೆ ವಿಶ್ರಾಂತಿ ಕೊಡಬೇಕು ಎಂದು. ಆದರೆ ಅಂದು ಕೂಲಿ ಯನ್ನು ಕೊಡಬೇಕು ಎಂದಿಲ್ಲ.

ರಂಗಣ್ಣನಿಗೆ ತರುಣಕವಿಯೊಬ್ಬ ಗೀಚಿದ್ದ ಪಂಕ್ತಿಗಳ ನೆನಪಾಗುವುದು.

ಕೂಸು ಹುಟ್ಟುವ ಮೊದಲೇ  
ತಾಯ ಪ್ರಾಣವ ಹೀರಿ,  
ಬಯಕೆ ಹುಟ್ಟುವ ಮೊದಲೇ  
ಅದಕೆ ಕಟ್ಟಿದೆ ಗೋರಿ.

ಎದೆಮುಗುಳು ವಿಕಸಿತವಾಗಿ
ಹೊಂಬಿಸಿಲ ಕಾಣುವ ಮುನ್ನ
ನೆಲೆದಪ್ಪಿ, ಕೆಳಗುರುಳಿ
ಬಿಸಿಲ ಬೇಗೆಗೆ ಬಾಡಿ
ಬಾಳ ಕೊನೆ ಮೊದಲೆಲ್ಲ
ಕೂಳ ದುಡಿವುದೆ ಎಂದು
ಜೀವನದಗ್ನಿ ಕುಂಡದಿ ಬೆಂದು
ಸುಡುಗಾಡ ಸೇರುವುದೆಂದು ?
ಉಂಡವನು ತೇಗಿದನು
ಇಲ್ಲದವ ಕೂಗಿದನು
ಕೂಗ ಕೇಳುವರಾರು ?
ಹಸಿವ ತಣಿಸುವರಾರು ?
ಸುಖಲೋಲ ದೇವನಿಗೆ
ಮೊರೆಯಿಡಲು ಫಲವಿಲ್ಲ.
ಸಿರಿ ತುಂಬಿ ಹರಿವಲ್ಲಿ
ದಯೆಯ ಸೊಲ್ಲೇ ಇಲ್ಲ.
ಜೊನ್ನ ಸವಿಯನು ಸವಿದು
ಕುಣಿಕುಣಿವ ಸಮಯದಲಿ
ಮೃತ್ಯುಬರವನು ಬಯಸಿ
ಪ್ರಾಣದ ಹರಕೆಯ ಸಲಿಸಿ
ಈ ಬಾಳು ಬಾಳಲ್ಲ,
ಬದುಕುವುದು ಸುಖವಿಲ್ಲ.
ಜಗ ದುಃಖ ಸಾರ
ಬದುಕುವುದವಿಚಾರ
ಹುಡಿಯೊಳಗೆ ಹೊರಳಾಡಿ
ತಲೆ ಸಿಡಿದು ಕಿಡಿಯಾಗಿ
ಈ ಪೆಣೆಸಾಟಗಳು ಹೊಡೆದಾಟಗಳು
ಯಾವ ಸಾಮ್ರಾಜ್ಯಸಾಧನೆಗಾಗಿ
ಹಗಲಿರುಳು ಚೀರಾಟ
ಮಗನೊಡನೆ ಹೋರಾಟ

ಕಿವಿಗೆಡುವ ಕೂಗಾಟ
ನರಳಾಟ, ಎಲ್ಲ ದೊಂಬರ ಕೂಟ.
ಏತಕೋಸುಗ ಎಂದು
ಕೇಳಿ ನಾಚಿಕೆಪಡಲಿ
ತುತ್ತು ಕೂಳಿಂಗೆ ಹೆತ್ತ
ತಾಯ ಅಮೃತ ಕುಂಭಗಳಿಂಗೆ
ಹೆತ್ತವಳು ಹೆತ್ತಳು
ಸುಧೆಯ ಸರಿ ಹರಿಸಿದಳು.
ಕಾಳರಕ್ಕಸರು ಕೆಲರು
ತಮ್ಮದಿರ ಕೊಂದರು.
ಹುಟ್ಟುತಾನೇ ಸಾವು
ಹೊಸಲೋಕ ಹೊಸಬಾಳು
ಕಾಣದುದು ಲೇಸೆಂದು
ಕಣ್ಣೀರ ಕರೆಯುತ್ತ
ಕೂಳ ನೆನಸುತ್ತ
ಬದುಕಿ ಫಲವೇನಂತೆ
ಬಾಳು ಹುಚ್ಚರ ಸಂತೆ
ಸಾವು ತಾನೇ ಸಗ್ಗ.

§ §

ಗೋಳ ಕೇಳಿದಿರೇನು,
ಕೇಳಿ ಮಲೆತಿಹರೇನು?

ಇದು ಅಲ್ಲಿಯ ಕೂಲಿಕಾರರ ಗೋಳಕರೆಯಾಗಿತ್ತು.

ಯುದ್ಧ ನಡೆಯುತ್ತಿತ್ತು. ಸಾಮಾನುಗಳು ಬೆಲೆಯಲ್ಲಿ ಒಂದಕ್ಕೆ ಹತ್ತಾಗಿದ್ದುವು. ಕಾರ್ಖಾನೆ ಲಕ್ಷಗಟ್ಟಲೆ ಹಣ ಸಂಪಾದಿಸಿತು. ಬಂಡವಾಳ ಹಾಕಿದವರು ವರ್ಷಕ್ಕೆ ಶೇಕಡಾ ಐವತ್ತರಂತೆ ವರ್ಷವರ್ಷವೂ ಲಾಭ ಸಂಪಾದಿಸಿದರು. ಆದರೆ ಅಲ್ಲಿ ದುಡಿದ ಕೂಲಿಯವರಿಗೆ ಬಿಡಿಕಾಸೂ ಸಿಕ್ಕಲಿಲ್ಲ. ಮೊದಲಿನ ಸಂಬಳದಲ್ಲಿಯೇ ಎಲುಬಿನ ಹಂದರದೊಳಗೆ ಪ್ರಾಣ ನಿಲ್ಲಿಸಿಕೊಳ್ಳುವ ಪ್ರಯತ್ನ ಅವರು ಆ ದುಷ್ಕಾಲದಲ್ಲಿ ಮಾಡಬೇಕಾಯಿತು.

ಈ ತರಹ ಜೀವಿಸುತ್ತಿದ್ದ ಜನರು ಜೀವನಕ್ಕೆ ಸಾಲದೇ ಸಾಲ ಮಾಡ

ಬೇಕಾಗುತ್ತಿತ್ತು. ಯಾವ ಆಧಾರವೂ ಇಲ್ಲದೆ ಇವರಿಗೆ ಪಠಾಣರ ಹೊರತು ಬೇರೆ ಯಾರೂ ಸಾಲ ಕೊಡುತ್ತಿರಲಿಲ್ಲ. ಪಠಾಣರು ಕೊಡುತ್ತಿದ್ದ ಸಾಲಕ್ಕೆ ಬಡ್ಡಿ ನೂರಕ್ಕೆ ನೂರು. ಇದನ್ನು ತಪ್ಪಿಸುವುದಕ್ಕೋಸ್ಕರ ರಂಗಣ್ಣ ಒಂದು 'ಸಹಕಾರ ನಿಧಿ' ಆರಂಭಿಸಿದ. ಪ್ರತಿಯೊಬ್ಬನೂ ಒಂದು ದಿನದ ಸಂಬಳ ಪ್ರತಿ ತಿಂಗಳು ಆ ನಿಧಿಗೆ ಕೊಡಬೇಕು. ಅದರಿಂದ ಕಡಿಮೆ ಬಡ್ಡಿಯಲ್ಲಿ ಬೇಕಾದವರಿಗೆ ಸಾಲ ಕೊಡಬೇಕು. ಆದರೆ ಇದು ಸರಿಯಾಗಿ ನಡೆಯಲೇ ಇಲ್ಲ. ಸಾಲ ತೆಗೆದು ಕೊಂಡವರು ಅಸಲಿಗೇ ಮೋಸ ಮಾಡಿದರು. ಅಧಿಕಾರಿಗಳು ಕಾರ್ಖಾನೆಯ ನಿಯಮದಂತೆ ಇಂತಹ ಖಾಸಗಿ ಸಂಘಗಳನ್ನು ನಡೆಸುವುದು ಕೂಡದು ಎಂದು ಜನರನ್ನು ಹೆದರಿಸಿದರು. ಅದರಿಂದ ಉಪಕೃತಗರಾದವರು, ಇದು ರಂಗಣ್ಣ ಕೂಲಿ ಯವರಿಂದ ದುಡ್ಡು ಸುಲಿಯಲು ಮಾಡಿದ ಉಪಾಯ ಎಂದು ಅಧಿಕಾರಿಗಳಲ್ಲಿ ಚಾಡಿ ಹೇಳಿದರು. ಅಧಿಕಾರಿಗಳ ತತ್ವಕ್ಕೆ ವಿರುದ್ಧವಾಗಿ ರಂಗಣ್ಣ ನಡೆದು ಅವರ ಅಸಂತುಷ್ಟಿಗೆ ಪಾತ್ರನಾದ. 'ಕೈಕೆಳಗಿನ ಜನರು ನೆಮ್ಮದಿಯಾಗಿರಕೂಡದು. ಅವರಿಗೆ ಕಷ್ಟಗಳಿರುವತನಕ ಅವರ ಬುದ್ಧಿಯೆಲ್ಲಾ ಅಲ್ಲಿಯೇ ವೆಚ್ಚವಾಗುತ್ತದೆ. ಬೇರೆ ಏನೂ ಯೋಚಿಸಲು ಸಹ ಅವರಿಗೆ ಪುರಸೊತ್ತಿರುವುದಿಲ್ಲ. ಅವರಿಗೆ ಈ ತೊಂದರೆಗಳು ಕಳೆದರೆ ತಮ್ಮ ಹಕ್ಕುಬಾಧ್ಯತೆಗಳಿಗೆ ಹೊಡೆದಾಡಿಯಾರು ಎನ್ನು ವುದು ಬಂಡವಾಳಗಾರರ ತತ್ವ. ಆದ್ದರಿಂದ ಅವರು ಮನಃಪೂರ್ವಕವಾಗಿ ಜನರ ಆವಶ್ಯಕತೆಗಳು ಪೂರೈಸದಂತೆ ನೋಡಿಕೊಳ್ಳುತ್ತಿದ್ದರು. ಅಲ್ಲಿಯವರೆಗೆ ಆ ಆವಶ್ಯಕತೆಗಳನ್ನು ಹೊಂದಿಸಿಕೊಳ್ಳುವುದರಲ್ಲಿಯೇ ಜನರು ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸುತ್ತಿದ್ದುದರಿಂದ ಅವರು ಸುರಕ್ಷಿತವಾಗಿರಬಹುದಾಗಿತ್ತು.

ಕೆಲಸಗಾರರ ಅಪ್ರಮಾಣೀಕತೆಯನ್ನು ನೋಡಿ ರಂಗಣ್ಣನಿಗೆ ಅವರು ಈ ರೀತಿಯ ದುರ್ದೆಶೆಯಲ್ಲಿಯೇ ಇರಲು ಯೋಗ್ಯರು, ಅರ್ಹರು ಎನ್ನಿಸುವುದು. ಅವರ ಒಲವು ಕೆಟ್ಟ ಮಾತುಗಳನ್ನಾಡಿ ಅಧಿಕಾರ ದರ್ಪ ತೋರಿಸುವವರ ಮೇಲೆಯೇ. ರಂಗಣ್ಣ ಪ್ರತಿಯೊಬ್ಬನನ್ನೂ ಗೌರವದಿಂದ ಕಾಣುತ್ತಿದ್ದ. ಏನೋ ದುರಾದೃಷ್ಟ ದಿಂದ ಅವರು ಕೆಳಗಿದ್ದಾರೆ. ಸರಿಯಾದ ಪ್ರೋತ್ಸಾಹ ಸಿಕ್ಕಿದ್ದರೆ ಅವರಲ್ಲಿಯೂ ಎಷ್ಟು ಜನ ಮೇಧಾವಿಗಳು ಮುಂದೆ ಬರುತ್ತಿದ್ದರೋ ಏನೋ? ಒಂದು ಸಮಾಜದ ಪಕ್ಷಪಾತಕ್ಕೋಸ್ಕರ ವ್ಯಕ್ತಿಯನ್ನೇಕೆ ಹೀನವಾಗಿ ಕಾಣಬೇಕು? ಅವರಿಗೆ ಅದಷ್ಟು ಸ್ವಾತಂತ್ರ್ಯ ಅವನು ಕೊಡುತ್ತಿದ್ದ. ಆದರೆ ಅವರು ಸಣ್ಣ ಪುಟ್ಟ ಕೆಲಸಗಳಲ್ಲಿ ಸಹ ತಲೆತಪ್ಪಿಸಿಕೊಳ್ಳುತ್ತಿದ್ದರು--ಅವುಗಳು ಅವನ ಸ್ವಂತದ್ದಾಗಿದ್ದರೆ. ಬೇರೆ ಯವರು ಏನೇ ಹೇಳಲಿ ತಾನು ಮುಂದು ನಾನು ಮುಂದು ಎಂದು ನುಗ್ಗು ತ್ತಿದ್ದರು. ಇಂತಹವರಿಗೆ ಏನು ಮಾಡುವುದೂ ವ್ಯರ್ಥ. ಕೃತಜ್ಞತೆಯ ಲವ

ಲೇಶವೂ ಇಲ್ಲಿ ದೊರೆಯಲಾರದು ಎಂದು ನಿರುತ್ಸಾಹಹೊಂದುತ್ತಿದ್ದ. ಅದು ಸ್ವಲ್ಪಕಾಲ ಮಾತ್ರ. ಆಮೇಲೆ ಇದು ಮೌಢ್ಯದ ಫಲ. ಅವರಿಗೆ ಒಳಿತು ಕೆಡುಕುಗಳ ಅರಿವೇ ಇಲ್ಲ ಎಂದುಕೊಂಡು ಸುಮ್ಮನಾಗುತ್ತಿದ್ದ.

† † †

೨೪

ಲಲಿತ ಕಾಮಾಕ್ಷಿಗೆ ಕಾಗದ ಬರೆದಳು :

'ತಂಗಿ, ನೀನು ತೌರುಮನೆಯಲ್ಲಿ ಎಷ್ಟುದಿನ ಅಂತ ಇರುವುದು? ತಪ್ಪು ಯಾರದೇ ಇರಲಿ, ಕಾರಣವೇನೇ ಇರಲಿ, ಅದನ್ನು ಸರಿಹೊಂದಿಸಿಕೊಂಡು ನಡೆಯಬೇಕಾದ್ದು ನಿನ್ನ ಕರ್ತವ್ಯ. ನೀನೇ ಹೀಗೆ ಮುನಿದು ತೌರಿನಲ್ಲಿದ್ದುಬಿಟ್ಟರೆ ನಿನ್ನ ಗಂಡನೇ ಸೋತು ಬರುತ್ತಾರೆಯೆ? ಆದ್ದರಿಂದ ಕೂಡಲೇ ಹೊರಟುಬಾ. ಎಲ್ಲವನ್ನೂ ಸರಿಹೋಗಿಸುವ ಭಾರ ನನ್ನದು. ನೀನು ಬಂದಮೇಲೆ ನನ್ನ ಪರಿಚಯವೂ ಆಗುವುದು.

ನಿನ್ನ ಹಿತಾಕಾಂಕ್ಷಿ,
ಲಲಿತ.'

ಕಾಮಾಕ್ಷಿಗೆ ತೌರು ಹಿತವಾಗಿರಲಿಲ್ಲ. ಅತ್ತಿಗೆಯರಿಗೆ ಒಂದೆರಡು ಮಕ್ಕಳಾದಮೇಲೆ ಮನೆಯ ಕೆಲಸ ಹೆಚ್ಚಿತು. 'ಇವಳನ್ನು ಗಂಡ ಬಿಟ್ಟುಬಿಟ್ಟಿದ್ದಾನೆ' ಎಂಬ ಭಾವನೆಯಿಂದ ಅಸಡ್ಡೆಯಾಗಿ ಕಾಣಲು ಮೊದಲುಮಾಡಿದರು. ಅವಳೇನೇಮಾಡಲಿ ಅದರಲ್ಲಿ ತಪ್ಪು ಸಿಕ್ಕುತ್ತಿತ್ತು. 'ಕಂಡವರ ಮಕ್ಕಳಿಗೆ ಬಳೆ ತೊಡಿಸಿದರೆ ಬಳೆಗೇಡು, ಭತ್ತಗೇಡು' ಎಂಬ ಗಾದೆಯಂತೆ ಮಾಡಿದ್ದೆಲ್ಲಾ ವ್ಯರ್ಥವಾಗುತ್ತಿತ್ತು. ಹಿಂದೆ ತನಗೊಂದು ಮನೆಯಿತ್ತು. ಯಾವ ದುರಾದೃಷ್ಟದಿಂದಲೋ ಸಂಸಾರ ಕುದುರಲಿಲ್ಲ. ತನ್ನ ತಪ್ಪೂ ಇತ್ತು. ತಾನು ಅದನ್ನು ಆಗ ತಿದ್ದಿಕೊಳ್ಳಲು ಪ್ರಯತ್ನಿಸಲಿಲ್ಲ. ಎಷ್ಟೇ ಕಷ್ಟವಾಗಿರಲಿ, ತನ್ನ ಮನೆಯಲ್ಲಿರುವುದರ ಸರಿಸಮಾನ ಈ ತೌರುಮನೆಯ ಹಂಗುಕೂಳಲ್ಲ. ಇನ್ನೊಮ್ಮೆ ಅವಕಾಶ ಸಿಕ್ಕಿದರೆ ಅದರ ಸದುಪಯೋಗ ಪಡೆಯುತ್ತೇನೆ' ಎಂದು ಹಂಬಲಿಸಿದಳು. ಆ ಹೊತ್ತಿಗೆ ಲಲಿತೆಯ ಕಾಗದ ಬಂದಿತು. ಬರೆದವಳು ಅಪರಿಚಿತೆಯಾದ ಹೆಂಗಸು ಎನ್ನುವುದರಿಂದ ಮನಸ್ಸಿನಲ್ಲಿ ಸ್ವಲ್ಪ ಸಂಶಯವೇನೋ ಉಂಟಾಯಿತು. ಆದರೆ ತನ್ನ ಗಂಡನ ಗುಣದಲ್ಲಿ ಅವಳಿಗೆ ಪೂರ್ಣ ನಂಬಿಕೆ. ತಾನು ಹೊರಡುತ್ತೇನೆಂದು ಅಣ್ಣಂದಿರಿಗೆ ಹೇಳಿದಳು. ಗಂಡನೇ ಬಂದು ಕರೆದುಕೊಂಡು ಹೋಗಲಿ ಎಂದವರ ಅಭಿಪ್ರಾಯ. ಅದನ್ನು ಮನ್ನಿಸದೆ ಅವಳು ತೌರಿಗೆ ನಮಸ್ಕಾರ ಹಾಕಿ ಹೊರಟುಬಿಟ್ಟಳು.

ರಂಗಣ್ಣ ಕಾರ್ಖಾನೆಯಿಂದ ಬಂದಾಗ ಲಲಿತ ನಡುಮನೆಯಲ್ಲಿ ಕೆಲಸ ಮಾಡುತ್ತಿದ್ದಳು. ಒಳಗೆ ಯಾರೋ ಇದ್ದಂತೆ ತೋರಿತು. ರಂಗಣ್ಣ ಸ್ವಲ್ಪ ಸಂಕೋಚಪಟ್ಟ--ಲಲಿತೆಯ ಸ್ನೇಹಿತರು ಯಾರಾದರೂ ನೆರೆಯ ಹೆಂಗಸರು ಬಂದಿದ್ದಾರೋ ಎಂದು. ಲಲಿತ ಹೇಳಿದಳು :

'ಕಾಮಾಕ್ಷಿ ಬಂದಿದ್ದಾಳೆ.'

'ಏಕೆ ಬಂದಿದ್ದಾಳೆ ಅವಳು ?' ಎಂದು ಕೇಳುವಂತೆ ರಂಗಣ್ಣ ಅವಳಕಡೆ ನೋಡಿದ. ಅವಳ ಬರವು ತನಗೆ ಪ್ರಿಯವಾಗಿಲ್ಲ ಎಂದು ಹೇಳುತ್ತಿತ್ತು ಅವನ ಮುಖ. ಅದನ್ನು ಅರ್ಥಮಾಡಿಕೊಂಡು ಲಲಿತೆ :

'ನಾನೇ ಬರಲು ಕಾಗದ ಬರೆದಿದ್ದೆ. ಶಂಕರಮಠದಲ್ಲಿ ಯಾರೋ ಹೆಂಗಸರು ಶೃಂಗೇರಿಯಿಂದ ಬರುತ್ತಿದ್ದರಂತೆ. ಅವರ ಜೊತೆ ಬಂದಳು. ಅವರು ಅವಳನ್ನು ಇಲ್ಲಿಗೆ ಕರೆದುಕೊಂಡು ಬಂದು ಬಿಟ್ಟು ಹೊರಟುಹೋದರು' ಎಂದಳು.

'ಅದು ಒಳಿತಾಗಲಿಲ್ಲ. ನನ್ನ ಕೇಳಿದ್ದರೆ ಚೆನ್ನಾಗಿತ್ತು.'

ಬಾಯಲ್ಲಿ ಹಾಗೆ ಹೇಳಿದರೂ ಲಲಿತೆ ಮಾಡಿದ್ದಕ್ಕೆ ಪ್ರತಿ ಹೇಳುವ ಸಾಮರ್ಥ್ಯ ತನಗಿಲ್ಲವೆಂದು ಅವನ ಧ್ವನಿಯೇ ಒಪ್ಪಿಕೊಳ್ಳುತ್ತಿತ್ತು.

'ನನ್ನ ತಪ್ಪನ್ನು ಕ್ಷಮಿಸಿ ಭಾವ. ಆದರೆ ಇದು ಅವಳ ಮನೆಯೂ ಹೌದು. ಅವಳ ನ್ಯಾಯವಾದ ಜಾಗದಲ್ಲಿ ಅವಳಿರಬೇಕು.'

'ಅವಳವರೇ ಅವಳನ್ನಿಟ್ಟುಕೊಳ್ಳುತ್ತಿದ್ದರಲ್ಲ.'

'ಆಗ ಏನೋ ಅವಿವೇಕವಾಯಿತು. ಇನ್ನೂ ತಿಳುವಳಿಕೆಯಿಲ್ಲದ ಹುಡುಗಿ ಆಗ. ಆ ತಪ್ಪನ್ನು ಮರೆತುಬಿಡಿ.'

'ಲಲಿತಾ, ಅವಳು ನನಗೆ ಸರಿಯಾಗಿ ಎಂದೂ ಇರಲಾರಳು. ಅದು ಅವಳ ತಪ್ಪೇನೂ ಅಲ್ಲ. ನನ್ನ ಮನಸ್ಸು ಅಸಾಧ್ಯವಾದುದನ್ನು ಅಪೇಕ್ಷಿಸುತ್ತದೆ.'

'ಅದನ್ನು ನಾನು ನೋಡಿಕೊಳ್ಳುತ್ತೇನೆ. ನೀವು ನಿಷ್ಪಕ್ಷಪಾತದೃಷ್ಟಿಯಿಂದ ಅವಳ ಗುಣಾವಗುಣಗಳನ್ನು ತಿಳಿಯುವ ಪ್ರಯತ್ನ ಮಾತ್ರ ಮಾಡಬೇಕು.'

'ಏನು ಮಾಡುತ್ತೀಯೋ ಮಾಡು, ನಾನು ಏನು ಹೇಳಬಲ್ಲೆ ?'

ತನ್ನ ಸುಖದುಃಖಗಳನ್ನು ಯಾರಿಗಾದರೂ ಒಪ್ಪಿಸಿ ನಿಶ್ಚಿಂತೆಯಿಂದಿರುವುದು ಅವನಿಗೆ ಬೇಕಾಗಿತ್ತು. ಮನೆಯ ಹೊರಗೆ ಮನಸ್ಸನ್ನು ಕಡೆಯುವ ವಿಷಯಗಳು ಬೇಕಾದಷ್ಟಿದ್ದುವು. ಆ ಹೊಣೆಯನ್ನು ಹೊರಲು ಲಲಿತೆ ಮುಂದೆ ಬಂದಿದ್ದಳು.

ಲಲಿತ ಒಳಗೆ ಹೋದಳು. ಕಾಮಾಕ್ಷಿ ಬಂದು ಗಂಡನಿಗೆ ನಮಸ್ಕರಿಸಿದಳು. ರಂಗಣ್ಣನ ಮುಖದಲ್ಲಿ ಸಮಾಧಾನ ಅಸಮಾಧಾನ ಯಾವುದೂ ಕಾಣಬರುತ್ತಿರಲಿಲ್ಲ.

ಲಲಿತೆ, ಕಾಮಾಕ್ಷಿಗೆ ತನ್ನ ಮತ್ತು ರಂಗಣ್ಣನ ಸಂಬಂಧ ಹೇಳಿದಳು. ಎಲ್ಲವನ್ನೂ ಹೇಳಲಿಲ್ಲ. ಅದನ್ನು ಹೇಳುವುದರಿಂದ ಕಾಮಾಕ್ಷಿ ತನ್ನ ವಿಷಯದಲ್ಲಿ ತಪ್ಪು ತಿಳಿದುಕೊಳ್ಳುವ ಸಂಭವವಿತ್ತು. ಮನೆಗೆಲಸಗಳಲ್ಲಿ ಎಲ್ಲವನ್ನೂ ಲಲಿತೆ ಮಾಡುತ್ತಿದ್ದಳು. ಆದರೆ ಅಡಿಗೆಯ ಗೋಜಿಗೆ ಹೋಗುತ್ತಿರಲಿಲ್ಲ. ಕಾಮಾಕ್ಷಿಯಂತಹ ಮಡಿ ಮೈಲಿಗೆಗಳ ಗಲಾಟೆಯಲ್ಲಿ ಬೆಳೆದ ಹೆಂಗಸು ಮುಂದೆ ತನ್ನ ಮೇಲೆ ಕೋಪಿಸಿಕೊಂಡಾಳು ಎಂಬ ಶಂಕೆಯಿಂದ ದೂರವಿರುತ್ತಿದ್ದಳು.

ಕಾಮಾಕ್ಷಿಗೆ ಲಲಿತೆ ನಿಜವಾಗಿಯೂ ಅಕ್ಕನಾದಳು. ಗಂಡ ಬಂದಾಗ ಅವನೊಡನೆ ಯಾವರೀತಿ ನಡೆದುಕೊಳ್ಳಬೇಕು, ಮಾತಿನಲ್ಲಿ ಯಾವರೀತಿಯ ಮಾಧುರ್ಯಗಳಿರಬೇಕು, ಹಾವಭಾವಗಳಲ್ಲಿ ಯಾವರೀತಿಯ ಆಕರ್ಷಣೆಯಿರಬೇಕು ಎಂಬುದನ್ನು ದಿನವೂ ಒತ್ತಿಒತ್ತಿ ಪಾಠಮಾಡಿಸಿದಳು.

'ನೋಡು ತಂಗಿ, ಕುರುಳು ಹಣೆಯಮೇಲೆ ಸ್ವಲ್ಪ ಚದುರಿರಬೇಕು. ಬೈತಲೆ ಸ್ವಲ್ಪ ಓರೆಯಾಗಿರಬೇಕು. ಹುಬ್ಬಿನಮೇಲೆ ಕೊಂಚವೇಕೊಂಚ ಕಾಡಿಗೆ ಹಚ್ಚಬೇಕು. ಕೆನ್ನೆಗೆ ಸ್ವಲ್ಪ ಅರಿಸಿನ ಹಚ್ಚಬೇಕು' ಎಂದು ಪ್ರತಿಯೊಂದನ್ನೂ ಹೇಳುವಳು. ಕಾಮಾಕ್ಷಿಗೆ ಇದೆಲ್ಲಾ ಬೇಸರ. 'ಇದೆಂತಹ ಥಳಕು, ಸೂಳೆಯರ ವಿದ್ಯೆ' ಎಂದು ಮನಸ್ಸಿನಲ್ಲಿ ಜಿಗುಪ್ಸೆ. ಅದನ್ನು ಹೊರಗೆ ತೋರಿಸಿಕೊಳ್ಳಲಾರಳು. ಹಿಂದಿನ ರಗಳೆ ಪುನಃ ತಲೆಹಾಕೀತೆಂಬ ಭಯ.

ಕಾಮಾಕ್ಷಿಯಲ್ಲಾಗುತ್ತಿದ್ದ ಬದಲಾವಣೆ ರಂಗಣ್ಣನಿಗೆ ಕಾಣದಿರಲಿಲ್ಲ. ಆದರೆ ಇದರ ಕೈವಾಡ ಲಲಿತೆಯದು ಎಂದು ತಿಳಿದು ಅದರಲ್ಲಿ ಒಂದು ಕೃತ್ರಿಮ ಅಸಹಜತೆ ಕಾಣುತ್ತಿತ್ತು. ಅದರ ಕರ್ತೃವಿನ ಮೆಚ್ಚಿಕೆಯೇ ಜಾಸ್ತಿಯಾಗುವುದು. ಲಲಿತೆಯ ನೆನಪು ಬಂದು ಅವಳನ್ನೇ ಹುಡುಕಿಕೊಂಡು ಹೋಗುವನು.

ಸಂಗೀತ ಎಂದರೆ ಅವನಿಗೆ ಪ್ರಾಣ. ಮನೆಗೆ ಬಂದೊಡನೆಯೇ ತಿಂಡಿ ತೀರ್ಥವಿಲ್ಲದಿದ್ದರೂ ಪರವಾಯಿಲ್ಲ. ಲಲಿತೆ ವೀಣೆಯಮೇಲೆ ಒಂದು ಕೃತಿ ಬಾರಿಸಬೇಕು. ಪ್ರಖ್ಯಾತರ ಸಂಗೀತಕಛೇರಿಯಾದರೆ ಅವನು ಹೋಗುವನು. ಜೊತೆಗೆ ಲಲಿತೆ, ಕಾಮಾಕ್ಷಿಯರನ್ನೂ ಕರೆದುಕೊಂಡು ಹೋಗುವನು. ತನ್ನ ತಿಂಗಳ ಬಡ್ಜೆಟ್ಟನ್ನು ಸರಿದೂಗಿಸಲು ತನ್ನ ತಿಂಡಿಯಲ್ಲೋ, ಬಟ್ಟೆಯಲ್ಲೋ ಖೋತಾ ಹಾಕುವನು. ಅಂದಿನ ದಿನವೆಲ್ಲಾ ಲಲಿತೆಯೊಡನೆ ಆ ಸಂಗೀತ

ಕಛೇರಿಯ ಪ್ರಸ್ತಾಪವೇ. ‘ ತೋಡಿ ಹೀಗಿತ್ತು, ಕಲ್ಯಾಣಿ ಆಲಾಪನೆ ಸೊಗಸಿತ್ತು ’ ಇದರ ಚರ್ಚೆಯೇ. ‘ ಲಲಿತ, ನೋಡು. ಆ ರಾಗ ವೀಣೆಯಮೇಲೆ ಬಾರಿಸು. ಆ ಪಿಟೀಲಿನಿಂದ ಬಂದ ಝುಮುಕು ಇದರಲ್ಲಿಯೂ ಬರಬೇಕು ನೋಡು’ ಎನ್ನುವನು. ಕಾಮಾಕ್ಷಿಗೆ ಈ ಪ್ರಪಂಚ ತೀರಾ ಹೊಸದು. ಅವಳು ಗುಮ್ಮನಂತಿರುವಳು.

ರಂಗಣ್ಣನ ಈ ಸಂಗೀತದ ಗೀಳನ್ನು ಕಂಡ ಲಲಿತೆ ಕಾಮಾಕ್ಷಿಗೆ ಸಂಗೀತ ಕಲಿಸಲು ಪ್ರಾರಂಭಿಸಿದಳು. ಆದರೆ ಕಾಮಾಕ್ಷಿ ಈ ವಯಸ್ಸಿನಲ್ಲಿ ವೈಬಗ್ಗಿಸಿ ಸಂಗೀತ ಕಲಿಯಲಾರಳು. ಈಗ ‘ ಸರಿ, ರೀ, ಗಾಮ’ ಎಂದು ಅಭ್ಯಾಸ ಮಾಡಲು ನಾಚಿಕೆ.

‘ ಇದರಲ್ಲಿ ನಾಚಿಕೆ ಹೇಸಿಗೆ ನೋಡುತ್ತ ಕುಳಿತರೆ ಆಗುವುದಿಲ್ಲ ’ ಎಂದು ಲಲಿತೆ ಅವಳನ್ನು ಹುರಿದುಂಬಿಸುವಳು. ಕಾಮಾಕ್ಷಿ ಮನಸ್ಸಿನಲ್ಲಿಯೇ ಈ ನಿರ್ಬಂಧವನ್ನು ಸಹಿಸದೆ ಬೈದುಕೊಳ್ಳುವಳು.

† † †

ಕಾರ್ಖಾನೆಯಿಂದ ಬಂದವನು ಏನೂ ಮಾತಾಡದೆ ರಂಗಣ್ಣ ಮಲಗಿಕೊಂಡ. ಮಲಗಿಕೊಳ್ಳುವುದೇನೋ ಸಾಮಾನ್ಯ ರೂಢಿ. ಅಲ್ಲಿ ಎಂಟು ಗಂಟೆ ಕಾಲ ನಿಂತಿರಬೇಕು. ರೈಲಿನಲ್ಲಿ ಬರಬೇಕು. ರೈಲ್ವೇಸ್ಟೇಷನ್ನಿನಿಂದ ನಾಲ್ಕು ಮೈಲಿ ನಡೆಯಬೇಕು. ಆದರೆ ಮಾತಿಲ್ಲದೆ ಇರುವುದು ವಿಶೇಷವಾಗಿತ್ತು. ಕಾರ್ಖಾನೆಯ ವಿಷಯ ಅವನು ಮನೆಯಲ್ಲಿ ಹೇಳುತ್ತಿರಲಿಲ್ಲ. ಅಲ್ಲಿಯ ಹೊಲಸು ಗಾಳಿಯನ್ನು ಮನೆಯಲ್ಲೂ ಏಕೆ ತುಂಬಬೇಕು? ಆದರೆ ಈ ದಿನ ಏನೋ ವಿಶೇಷವಿರಬೇಕೆಂದು ಊಹಿಸಿ ಲಲಿತೆ ಕೇಳಿದಳು :

‘ ಏನು ಹೆಚ್ಚಿನದೇನಾದರೂ ನಡೆಯಿತೆ? ಹೇಳಿ. ’

ರಂಗಣ್ಣನಿಗೆ ಯಾರಾದರೊಬ್ಬರೊಡನೆ ತನ್ನ ದುಃಖವನ್ನು ಹೇಳಿಕೊಳ್ಳಬೇಕಾಗಿತ್ತು.

‘ ಮೂರ್ತಿ ನಿನಗೆ ಗೊತ್ತಲ್ಲ, ಲಲಿತ. ಒಂದೆರಡುಸಾರಿ ನಮ್ಮ ಮನೆಗೆ ಬಂದಿದ್ದಾಗ ನೀನು ನೋಡಿರಬೇಕು. ನಮ್ಮ ಮನೆಯಲ್ಲಿ ಅವನು ಮಾಡಿದ ಊಟ ತಿಂಡಿಗಳಿಗೆ ಲೆಕ್ಕವಿಲ್ಲ. ಕಾರ್ಖಾನೆಯಲ್ಲಿ ಅವನೂ ನಾನೂ ಒಂದೇ ದರ್ಜೆಯವರು. ಅದಲ್ಲಿಯೂ ಅವನು ನನ್ನ ಕೆಳಗಿನವನಾಗಿದ್ದ. ಏನೋ ಅಧಿಕಾರಿಗಳ ಕೃಪಾದೃಷ್ಟಿ ಅವನಮೇಲೆ ಬಿದ್ದಿತು. ಅವನು ಕೆಲಸದಲ್ಲಿ ಅಷ್ಟಕ್ಕಷ್ಟೇ ಆಗಿದ್ದರೂ ಅವನನ್ನು ನನಗೂ ಮೇಲೆ ತಂದರು. ಅದಕ್ಕೆ ಕಾರಣ

ಜನ ಏನೇನೋ ಹೇಳುತ್ತಾರೆ. ಅದು ನಮಗ್ಯಾಕೆ? ಮುಖ್ಯ ಒಂದು ಕಾರಣ ವಿತ್ತು. ನಮ್ಮ ಮ್ಯಾನೇಜರಿಗೆ ನನ್ನ ಮೇಲೆ ದ್ವೇಷ. ಕೂಲಿಕಾರರಲ್ಲಿ ಅಶಾಂತಿ ಹೆಚ್ಚಿಸುತ್ತಿದ್ದೇನೆಂದು. ಅವರು ಯಾವುದೊಂದಕ್ಕಾದರೂ ನನ್ನ ಕೇಳುತ್ತಾರೆ. ನ್ಯಾಯವಾದದ್ದು ನಾನು ಹೇಳುತ್ತೇನೆ. ಅವರಿಗೆ ಮೋಸಮಾಡುವುದು ಕಷ್ಟ ವಾಗುತ್ತದೆ. ನಮ್ಮಲ್ಲಿ ಕೂಲಿಕಾರರ ಸಂಘವೊಂದಿದೆ. ಸರ್ಕಾರದವರು ಅಂತಹ ಸಂಘವಿರಬೇಕು--ಕೂಲಿಕಾರರ ಹಿತ ರಕ್ಷಿಸಲು ಎಂಬ ನಿರ್ಬಂಧ ಹಾಕಿದ್ದರಿಂದ ಅದನ್ನು ಸ್ಥಾಪಿಸಬೇಕಾಯಿತು. ಅದರಲ್ಲಿ ಮ್ಯಾನೇಜರರ ನಚ್ಚಿನ ಕಿಂಕರರೇ ಇರಬೇಕೆಂದು ಅವರ ಇಷ್ಟ. ಅದರಿಂದ ಸಂಘವನ್ನು ತಟಸ್ಥವಾಗಿ ಇಟ್ಟಿರ ಬಹುದು. ಆದ್ದರಿಂದ ಗುಟ್ಟಾಗಿ ಯಾರಿಗೂ ತಿಳಿಸದೇ, ಸ್ವಲ್ಪವೂ ಪ್ರಾಮಾಣಿಕತೆ ಯಿಂದ ಕೆಲಸ ಮಾಡುವವರನ್ನು ಅದಕ್ಕೆ ಸೇರಿಸದೇ, ತಮ್ಮದೇ ಆದ ಕಮಿಟಿ ಯನ್ನು ಚುನಾಯಿಸಿಕೊಂಡರು. ಎಲುಬಿಲ್ಲದವನೊಬ್ಬ ಸೆಕ್ರೆಟರಿ. ಅಂತಹವನೇ ಇನ್ನೊಬ್ಬ ಪ್ರೆಸಿಡೆಂಟು. ಕೆಲವರು ನನ್ನನ್ನು ಕೇಳಿದರು--ಏನು ಮಾಡುವುದು ಎಂದು. ನಾನದಕ್ಕೆ ಸರ್ಕಾರಕ್ಕೆ ಬರೆದು ತಿಳಿಸಿ ಈ ಗುಪ್ತ ಸಂಧಾನವನ್ನು ಎಂದೆ. ಮ್ಯಾನೇಜರರ ಗುಟ್ಟು ಹೊರಬಿತ್ತು. ಗಲಾಟೆಯಾಯಿತು. ಅವ ಮಾನವಾಯಿತು. ಇದರ ಸೇಡನ್ನು ತೀರಿಸಿಕೊಳ್ಳಲು ಮೂರ್ತಿಯನ್ನು ನನ್ನ ಮೇಲಿನವನನ್ನಾಗಿ ಮಾಡಿದರು. ಈಗ ಮೂರ್ತಿ ಬದಲಾಯಿಸಿಬಿಟ್ಟಿದ್ದಾನೆ. ನನ್ನೊಡನೆ ಮಾತಾಡಲು ಸಹ ಅವನಿಗೆ ಅಗೌರವ. ಬಹಳ ಕೀಳಾಗಿ ನಡೆದು ಕೊಳ್ಳುತ್ತಾನೆ. ತನ್ನ ಅಯೋಗ್ಯತೆಯ ಅರಿವಿನಿಂದಾದ ಸ್ವೇಚ್ಛ ಮನೋವೃತ್ತಿಯೋ ಏನೋ, ನನ್ನನ್ನು ಅವಮಾನಗೊಳಿಸುವುದರಲ್ಲಿ ಸಂತೋಷಗೊಳ್ಳುತ್ತಾನೆ. ಈ ದಿವಸ ನಮ್ಮ ಕಾರ್ಖಾನೆ ಲಾರಿ ಬಂದಿತು. ಅದರಲ್ಲಿ ನಾವು ಬಂದೆವು. ಅವನಿಗೆ ನನ್ನ ಜೊತೆಯಲ್ಲಿ ಕೂರಲು ಸಹ ಹೇಸಿಗೆ. ನನ್ನ ಕಡೆ ಕಣ್ಣೆತ್ತಿ ನೋಡದೆ ಮುಂದಿನ ಸೀಟಿನಲ್ಲಿ ಹೋಗಿ ಕುಳಿತ-ಸೆಟೆಗೊಂಡು. ಅದೇ ವಿಷಯ ಮನಸ್ಸಿಗೆ ನೋವಾಗಿದೆ.'

'ನೀವೇಕೆ ಇಷ್ಟು ನೊಂದುಕೊಳ್ಳುತ್ತೀರಿ? ಯಾರ ಸೇವೆಯನ್ನೋ ಮಾಡ ಬೇಕು. ಯಾರಾದರೇನು?

'ಅಯೋಗ್ಯರ ಕೈಕೆಳಗೆ ಕೆಲಸ ಮಾಡಲು ರಕ್ತ ಕುದಿಯುತ್ತದೆ. ಅಂಥವರ ಕೈಗೆ ಸಿಕ್ಕಿ ಒಂದು ಸಂಘವೇ ಮುಳುಗಿಹೋಗುತ್ತಿದೆಯಲ್ಲಾ ಎಂದು ವ್ಯಸನ ವಾಗುತ್ತದೆ.'

'ನೀವು ಮಾಡುವ ಕೆಲಸ ಒಂದು ದೇಶಸೇವೆಯೋ ಅಲ್ಲ ಈಶಸೇವೆಯೋ ಆಗಿದ್ದರೆ ಈ ತಾರತಮ್ಯ ಸರಿ. ಇಂತಹ ಅನರ್ಹರನ್ನು ಚುನಾಯಿಸಿದ್ದರಿಂದ

ಒಂದು ಸದುದ್ದೇಶವೇ ಕೆಟ್ಟುಹೋದೀತಲ್ಲಾ ಎಂದು ಆಗ ಬೇಸರವಾಗುತ್ತದೆ. ಈಗ ಆದದ್ದೇನು? ಯಾವುದು ಏನಾದರೆ ನಿಮಗೇನಂತೆ? ನಿಮಗೆ ಕೊಡುವ ದುಡ್ಡಿಗೆ ತಕ್ಕಷ್ಟು ನೀವು ದುಡಿಯುತ್ತೀರಿ. ಅವರು ಅಪೇಕ್ಷಿಸುವುದು ಅಷ್ಟೆ. ಅದಷ್ಟನ್ನು ಕಣ್ಣು ಮುಚ್ಚಿಕೊಂಡು ಮಾಡಿದರಾಯಿತು.'

'ಹೌದು ಲಲಿತ. ಇದೆಲ್ಲದರಿಂದ ನಿರ್ಲಿಪ್ತನಾಗಿರುವುದು ಸಾಧ್ಯವೆ?'

'ಅದೇ ಸಂಸ್ಕೃತಿಯ ಕುರುಹು. ನೀವು ಮಾಡುವ ಕೆಲಸ ಮಾಡಿದರಾಯಿತು. ಫಲಿತಾಂಶ ಏನಾದರೇನು? ಮುಂದಿನ ಮನೆಯವರು ಡೆಪ್ಯುಟಿ ಕಮಿಷನರು. ಆದರೊತ್ತಿನ ಮನೆಯವರು ಲಕ್ಷಾಧೀಶರು. ಅದಕ್ಕೆ ನಾವು ಹೊಣೆಯೆ? ಅವರದಕ್ಕೆ ಅರ್ಹರಲ್ಲದಿರಬಹುದು. ನಾವದನ್ನು ಯೋಚಿಸುತ್ತಾ ಕುಳಿತರೆ ಕೊನೆಯೆಲ್ಲಿ? ಹೇಳಿಕೇಳಿ ಈ ದುಡ್ಡಿನ ಮಾನದಿಂದ ಮನುಷ್ಯನನ್ನಳೆಯಲಾಗುವುದಿಲ್ಲ. ಮನುಷ್ಯನ ಶಕ್ತಿ, ಅಶಕ್ತಿ, ಭಾಗ್ಯ, ದೌರ್ಭಾಗ್ಯ, ಸುಖ ದುಃಖಗಳಲ್ಲಿ ಅದೇ ಕೊನೆಯ ಮಾತಲ್ಲ.'

'ಹೋಗಲಿ, ಏನೋ ಬೇಸರವಾಯಿತು. ನೀನು ಹೇಳಿದಂತೆ ಅದನ್ನು ನೋಡಿಯೂ ನೋಡದಿರುವುದು ಬುದ್ಧಿವಂತಿಕೆ.'

ಅವನೀಗ ನಿರ್ಲಿಪ್ತ ಮನುಷ್ಯ. ಸುಖ, ಶಾಂತಿ, ಆನಂದಗಳು ಮಾತ್ರ ಮನುಷ್ಯನ ಜೀವಿತ ಗುರಿಯಾದರೆ, ಈ ಆರ್ಥಿಕ ಉನ್ನತಿಯಿಂದ ಮಾತ್ರವೇ ಅದು ದೊರೆಯುವುದು ಎಂದು ಹೇಳಲಾಗುವುದಿಲ್ಲ. ಪ್ರಪಂಚವನ್ನು ತಾನು ಕಂಡಿದ್ದಕ್ಕಿಂತ ಉತ್ತಮವಾಗಿ ಮಾಡಿ ಹೋಗುವ ಮಹತ್ವಾಕಾಂಕ್ಷೆಯೇ ಸರಿ ಎಂದುಕೊಂಡ ಅವನು. ಆದರೆ ಆ ದಾರಿಯಲ್ಲಿನ್ನೂ ತಾನು ಕಾಲಿಟ್ಟಿಲ್ಲ. ತನ್ನ ಜೀವನವೆಲ್ಲಾ ಅನ್ನವನ್ನು ದುಡಿಯುವುದರಲ್ಲೇ ಆಗಿದೆ ಎಂಬ ವಿಚಾರ ಅತ್ಯಂತ ವಿಷಾದವೆನ್ನಿಸಿತು. ತನ್ನ ಜೀವನವನ್ನೂ ದುಡಿದು, ಪರರಿಗೂ ಉಪಕಾರಿಯಾಗಿರಬೇಕಾದರೆ, ತನ್ನ ಹಳ್ಳಿಯೇ ಸರಿಯಾದ ಜಾಗ ಎಂಬ ಯೋಚನೆ ಅಂದಿನಿಂದ ಅವನ ತಲೆಯನ್ನು ಹೊಕ್ಕಿತು.

* * * *

ಲಲಿತೆ ಕಾಮಾಕ್ಷಿಯನ್ನು ಕೇಳಿದಳು:

'ತಂಗಿ, ಆ ಕರವಸ್ತ್ರಕ್ಕೆ ಅಂಚಿನ ಎಳೆ ಇನ್ನೂ ಎಳೆದಿಲ್ಲ. ಭಾವ ನೋಡು ಹರಕು ಕರವಸ್ತ್ರವನ್ನೇ ಉಪಯೋಗಿಸುತ್ತ ಎಷ್ಟು ದಿನವಾಯಿತು? ಬೇಗ ಮುಗಿಸಿ ಕೊಡಬಾರದೇ?'

' ನನಗೆ ಪುರಸೊತ್ತೇ ಆಗೋಲ್ಲಮ್ಮ. ನೀನೇ ಹಾಕಿಬಿಡು

' ಅದೇನು ಸುಲಭವೇ. ಅದಲ್ಲ ನಾನು ಹೇಳಿದ್ದು. ನಾನು ಮಾಡುವು ದಕ್ಕೂ ನೀನು ಮಾಡುವುದಕ್ಕೂ ವ್ಯತ್ಯಾಸವಿಲ್ಲವೆ?'

' ನೀವೇ ಮಾಡಿದರೆ ಇನ್ನೂ ಚೆನ್ನಾಗಿರುತ್ತದೆ.'

' ಅದರಲ್ಲಿ ಚೆನ್ನವೇನು ಬಂತು? ನೀನು ಎಳೆಹಾಕಿದ್ದು ಎಂದರೆ ಭಾವನಿಗೆ ಹಿತವಾಗುತ್ತದೆ.'

' ಅದು ಸುಳ್ಳೇ. ನೀವು ಎಳೆಹಾಕಿದ್ದಾದರೆ ಅವರಿಗಿನ್ನೂ ಸಂತೋಷ.'

ಕಾಮಾಕ್ಷಿ ಆಡಿದ ವ್ಯಂಗ್ಯೋಕ್ತಿಯಲ್ಲಿ ನಿಜವಿಲ್ಲದಿರಲಿಲ್ಲ. ಲಲಿತ ಮಾಡಿದ ಕೆಲಸ ಹಿತವಾಗುತ್ತಿದ್ದಷ್ಟು ಕಾಮಾಕ್ಷಿ ಮಾಡಿದ ಕೆಲಸ ಹಿತವಾಗುತ್ತಿರಲಿಲ್ಲ. ಅದನ್ನು ಕಾಮಾಕ್ಷಿ ತಪ್ಪಾಗಿ ಅರ್ಥಮಾಡಿಕೊಂಡಳೇ ಹೊರತು, ಲಲಿತೆಯಷ್ಟು ಶ್ರದ್ಧೆಯಿಂದ ತಾನು ಕೆಲಸ ಮಾಡುವುದಿಲ್ಲವೆಂಬುದನ್ನು ತಿಳಿಯಲಿಲ್ಲ. ತಾನೇಕೆ ಗಂಡನ ಒಲವು ದ್ವೇಷಗಳನ್ನು ಅಷ್ಟು ಅನುಸರಿಸಿ ನಡೆಯಬೇಕು? ಅವರೇ ಏಕೆ ತನ್ನನ್ನು ಸ್ವಲ್ಪವಾದರೂ ಅನುಸರಿಸಿ ಹೋಗಬಾರದು?

' ಅವರ ಮನಸ್ಸು ಒಲಿಸುವುದೇ ಯಾವಾಗಲೂ ನನ್ನ ಗುರಿಯೆಂದು ಹೇಳು ತ್ತೀರಿ. ಅವರೂ ಏಕೆ ಸ್ವಲ್ಪ ಉದಾರಿಗಳಾಗಿರಬಾರದು?'

' ನಿನಗೇನು ಕಡಿಮೆ ಮಾಡಿದ್ದಾರೆ ಭಾವ?'

' ನನ್ನ ದೌರ್ಬಲ್ಯವನ್ನು ಕಂಡೂ ಅವರು ನನ್ನಿಂದ ಆಗದುದನ್ನು ಏಕೆ ಅಪೇಕ್ಷಿಸುತ್ತಾರೆ?'

' ಅದು ಅವರ ಅಪೇಕ್ಷೆಯಲ್ಲ ತಂಗಿ. ಪ್ರತಿಯೊಬ್ಬ ಗಂಡಸಿನ ಅಪೇಕ್ಷೆ. ಗಂಡಸು ಒಂದರ್ಧ. ಹೆಣ್ಣು ಮತ್ತೊಂದರ್ಧ. ಎರಡೂ ಸೇರಿದರೇ ಪೂರ್ಣತೆ. ಆ ಗಂಡಿನಲ್ಲಿಲ್ಲದ ಗುಣಗಳನ್ನು, ಶಕ್ತಿಯನ್ನು ಹೆಣ್ಣು ತುಂಬಿಕೊಡಬೇಕು. ಗಂಡಿ ನದು ವ್ಯವಹಾರದ ಪ್ರಪಂಚ. ಅದನ್ನದು ನೋಡಿಕೊಳ್ಳುತ್ತದೆ. ಹೆಣ್ಣಿನದು ಮನೆಯ ಪ್ರಪಂಚ. ಅದನ್ನದು ನೋಡಿಕೊಳ್ಳಬೇಕು. ಆಗ ಮಾತ್ರ ಸಂಧಾನ ದಲ್ಲಿ ಸಾಮರಸ್ಯ.'

' ಹೆಣ್ಣಿಗೆ ಸ್ವಲ್ಪವೂ ಸ್ವಾತಂತ್ರ್ಯವೇ ಇಲ್ಲವೆ?'

' ಇಲ್ಲವೆಂದವರ್ಯಾರು? ಸ್ವಾತಂತ್ರ್ಯ ಎಂದರೆ ಸ್ವಚ್ಛಂದ ವೃತ್ತಿಯಲ್ಲ. ಆ ಸ್ವಾತಂತ್ರ್ಯ ಪಡೆಯಲು ಹೆಣ್ಣು ತ್ಯಾಗ ಮಾಡಬೇಕು. ಮೊದಲಿನ ಮೆಟ್ಟಲು ಆತ್ಮಾರ್ಪಣೆ. ಆಕೆ ಆತ್ಮಾರ್ಪಣೆ ಮಾಡಿ ಸರ್ವಸ್ವವನ್ನೂ ಗಂಡನ ಕಾಲಬಳಿಯಲ್ಲಿ

ಅರ್ಪಿಸಿಬಿಟ್ಟಾಗ ಆಕೆ ಸಂಪೂರ್ಣವಾಗಿ ಸುಪುತ್ರಳು. ಅದೇ ಸಂಸಾರದ ಸೊಗಸು. ಇಲ್ಲಿ ರಾಣಿಯಾಗಿರಲು ಗುಲಾಮಳಾಗಿರಬೇಕು. ಅದಿಲ್ಲದೆ ಸಮಾನಾಧಿಕಾರ ಎಂದು ಕೂಗಿಕೊಳ್ಳುವುದು ಸಮಾಜವನ್ನು ನರಕವನ್ನಾಗಿ ಮಾಡುವುದಕ್ಕೆ.'

'ಇದು ಗಂಡಸಿಗೂ ಅನ್ವಯಿಸುವುದಿಲ್ಲವೆ?'

'ಅನ್ವಯಿಸದೇ ಏನು? ನಿನ್ನ ಪಾಲಿನ ಕರ್ತವ್ಯ ನೀನು ಮಾಡು. ಆಗ ಸರಿಹೋಗದಿದ್ದರೆ ನಿನ್ನದಲ್ಲ ತಪ್ಪು.'

ಕಾಮಾಕ್ಷಿಗೆ ಇದು ಎಷ್ಟೆಂದರೂ ತಲೆಗೇ ಹತ್ತದು.

* * * *

ರಂಗಣ್ಣನ ತಲೆಗೆ ಹತ್ತಿದ ಹಳ್ಳಿಯ ಹುಚ್ಚು ಅತಿಯಾಗಿ ಬೆಳೆಯುತ್ತ ಬಂದಿತು. ತನ್ನ ಪ್ರತಿಯೊಂದು ನಿಮಿಷವೂ ವ್ಯರ್ಥವಾಗುತ್ತಿದೆ. ಜೀವನ ಬಹಳ ಬೇಗ ಕಳೆದುಹೋಗುವುದು. ಅದರಲ್ಲಿಯ ಅಮೂಲ್ಯ ದಿನಗಳನ್ನು ತಾನು ಪೋಲುಮಾಡುತ್ತಿದ್ದೇನೆ ಎನ್ನಿಸತೊಡಗಿತು. ತನ್ನ ಹಳ್ಳಿಯಲ್ಲಿಯೇ ಇದ್ದು ಅಲ್ಲಿಯ ಜನರಿಗಾಗಿ ದುಡಿಯಬೇಕು. ಅದರಲ್ಲಿ ಜಾಗೃತಿಯುಂಟುಮಾಡಬೇಕು. ಅವರಲ್ಲಿ ಸಂಘಟನೆಯನ್ನುಂಟುಮಾಡಬೇಕು. ಅವರ ಹಲವು ಮೌಢ್ಯಾಚಾರಗಳನ್ನು ಸಡಲಿಸಬೇಕು. ಇದು ಮಾತ್ರ ತನ್ನ ಜೀವನದ ಗುರಿ ಎಂದು ತಿಳಿದನು. ಅದಕ್ಕಿಂತ ಹೆಚ್ಚು ಮಾಡಲು ಸಾಧ್ಯವಿರಲಿಲ್ಲ. ಅವನ ಹಳ್ಳಿಯ ಸಂಬಂಧವೇ ತೊಡೆದುಹೋಗುವ ಸ್ಥಿತಿಯಲ್ಲಿತ್ತು. ತನ್ನವರೆಲ್ಲಾ ಅಪರಿಚಿತರಾಗುತ್ತ ಬಂದಿದ್ದರು. ಇಲ್ಲಿಯ ಜನರು ಅವನನ್ನು ತಮ್ಮೊಡನೆ ಸೇರಿಸಿರಲಿಲ್ಲ. ಇಲ್ಲಿಯವರು ಗುಂಪಾಗಿ ವಾಸಿಸುತ್ತಿದ್ದರೂ ಕೆಸುವಿನ ಎಲೆಯಮೇಲಿನ ನೀರಿನ ಹನಿಯಂತೆ ಪರಸ್ಪರ ಅಂಟದಿದ್ದರು. ಒಂದೇ ಮನೆಯಲ್ಲಿ ಹತ್ತು ಸಂಸಾರ ಹತ್ತುವರ್ಷ ಒಟ್ಟಿಗೇ ಕಳೆದರೂ ಒಬ್ಬರ ಗುರುತು ಇನ್ನೊಬ್ಬರಿಗಿಲ್ಲ. ಅವರವರ ತಲೆಗೆ ಅವರವರ ಕೈ. ಈ ಸಂಸ್ಕೃತಿ, ಈ ಸ್ವಾರ್ಥ ಅಂತಹ ಮೆಚ್ಚತಕ್ಕದ್ದಲ್ಲ. ಹಳ್ಳಿಯಲ್ಲಿ ಜಗಳಗಳೂ, ಮನಸ್ತಾಪಗಳೂ ವಿಪರೀತ. ಅದೇನಿದ್ದರೂ ಒಂದು ಕುಟುಂಬದೊಳಗಿನ ಒಡಕಿನಂತೆ. ಪ್ರೀತಿಯಿಲ್ಲದಿದ್ದರೆ ದ್ವೇಷವೆಲ್ಲಿ?

ಈ ಹುಚ್ಚು ಹಗಲಿರುಳೂ ಅವನನ್ನು ಕಾಡತೊಡಗಿತು. ರಾತ್ರಿಯೆಲ್ಲಾ ಸ್ವಪ್ನ. ಒಂದು ಸಣ್ಣ ಮನೆ. ಮುಂದೆ ಸ್ವಲ್ಪ ಗದ್ದೆ. ಹಿಂದೆ ಸ್ವಲ್ಪ ತೋಟ. ಮನೆಯಮುಂದೆ ಮೊಲ್ಲೆ, ಮಲ್ಲಿಗೆ, ಜಾಜಿ, ಗುಲಾಬಿ, ಸಂಪಿಗೆ ಹೂಗಳರಳಿ ಘಮಘಮಿಸುತ್ತಿವೆ. ಹಿಂದೆ ಕಿತ್ತಿಳೆ, ಚಕ್ಕೋತ, ಮಾದಲ, ಹಲಸು, ಮಾವು-ಬೇಕುಬೇಕಾದ ಹಣ್ಣುಗಳು. ಹಿತ್ತಿಲಲ್ಲಿ ಬೇಕಾದಷ್ಟು ತರಕಾರಿ. ಕೊಟ್ಟಿಗೆ ತುಂಬಾ

ಹಸು ಕರುಗಳು. ಉಮರನಂಥವನು ಇದಕ್ಕಿಂತ ಮಿಗಿಲಾಗಿ ಏನು ಬಯಸಿಯಾನು? ಪ್ರತ್ಯಕ್ಷ ನೋಡಿದ್ದಕ್ಕಿಂತ ಹೆಚ್ಚಾಗಿ ಅವುಗಳ ವಿವರ ಅವನ ಮನಸ್ಸಿನ ಮುಂದೆ ಹಾದುಹೋಗುವುವು.

ಸುಂದರವಾದ ಗುಡ್ಡ. ತಪ್ಪಲೆಲ್ಲಾ ಹಸಿರಿನಿಂದ ತುಂಬಿದೆ. ಮಧ್ಯೆ ಒಂದು ಸಂಪಿಗೆಯ ಕಟ್ಟೆ. ಹುಲ್ಲಿನ ಮಧ್ಯೆ ಪುಟ್ಟಪುಟ್ಟ ನಕ್ಷತ್ರದಂತಹ ಹೂಗಳು. ಸುತ್ತಲೂ ನಿಬಿಡವಾದ ಕಾಡು. ಕಾಡಿನಿಂದ ಬರುತ್ತಿರುವ ಪಕ್ಷಿಗಳ ಸ್ವರಮೇಳ. ಹಸಿರು ಹುಲ್ಲನ್ನು ಹಸುಗಳು ತೃಪ್ತಿಯಿಂದ ಮೇಯುತ್ತಿವೆ. ಎಳೆಗರುಗಳು ಚಿಮ್ಮಿ ನೆಗೆಯುತ್ತಿವೆ. ಕಟ್ಟೆಯಮೇಲೆ ತಾನು, ಪಕ್ಕದಲ್ಲಿ ಲಲಿತೆ ವೀಣೆ ನುಡಿಸುತ್ತಿದ್ದಾಳೆ. ಆ ಪ್ರದೇಶವೆಲ್ಲಾ ಆ ವೀಣೆಯ ಮೃದುಮಧುರ ಸಂಗೀತದಿಂದ ತುಂಬಿತುಳುಕುತ್ತಿದೆ. ಗಾಳಿಯೂ ಹಾಡುತ್ತಿದೆ. ಮರಗಿಡಗಳು ತಲೆದೂಗುತ್ತಿವೆ. ಶ್ರೀಕೃಷ್ಣ ಇಂತಹದೇ ಸೌಖ್ಯವನ್ನು ಸವಿದಿರಬೇಕು. ಅದು ತನ್ನಂತಹವರ ಪಾಲಿಗೆ ಬಂದೀತೇನು? ಬರದೇ ಏನು? ಸನ್ನಿವೇಶಕ್ಕೆ ಕೊರತೆಯಿಲ್ಲ. ಆದರೆ ಆ ಸುಖಾಸ್ವಾದನೆಯ ಸಂಸ್ಕೃತಿ ನಮಗಿನ್ನೂ ಬಂದಿಲ್ಲ. ನಮ್ಮ ಸಂಸ್ಕೃತಿ ಕೃಷ್ಣರಾಜಸಾಗರದ ಬಣ್ಣದ ದೀಪಗಳನ್ನೂ ತೂಬುಗಳಲ್ಲಿ ಹರಿಯುವ ನೀರನ್ನೂ ಮೆಚ್ಚುವ ಮಟ್ಟದಲ್ಲಿದೆ. ಸ್ವಲ್ಪದೂರ ಮುಂದೆ ಹೋಗಿ ಕಾವೇರಿಯ ಗಂಭೀರ ಪ್ರವಾಹವನ್ನು ಮೆಚ್ಚುವ ಅಂತಸ್ಸಿನಲ್ಲಿಲ್ಲ.

ಆದರೆ ಈ ಪಾರಿಯನ್ನು ಬಿಟ್ಟು ಕೂಡಲೇ ಹೊರಟುಬಿಡುವಂತಿಲ್ಲ. ಅಲ್ಲಿ ನೆಲಸಲು ತಕ್ಕ ಸಿದ್ಧತೆಗಳನ್ನು ಮಾಡಬೇಕು. ಇಷ್ಟು ವರ್ಷಗಳಿಂದ ಇದ್ದ ಜಾಗವನ್ನು ಇದ್ದಕ್ಕಿದ್ದಂತೆ ಬಿಟ್ಟುಹೋಗಲು ಮನಸ್ಸು ಬಾರದು. ಲಲಿತೆ ಬರುತ್ತಾಳೋ ಇಲ್ಲವೋ? ತಾನು ಕಟ್ಟಿ, ಅನ್ನಿಸಿಕೊಂಡು ಬಂದ ಜಾಗಕ್ಕೆ ಪುನಃ ಹೋಗಲಿಷ್ಟಪಡುತ್ತಾಳೋ ಇಲ್ಲವೋ? ಅವಳ ಗಂಡನ ಮನೆಯವರು ಯಾರಾರು ಇದ್ದಾರೆಯೋ? ಅವರೆಲ್ಲಾ ಇನ್ನು ಏನೇನು ಗಲಾಟೆ ಎಬ್ಬಿಸುತ್ತಾರೆಯೋ? ಹಾಗೆಲ್ಲ ಒಬ್ಬರನ್ನು ಅವರ ಪಾಡಿಗೆ ಬಿಟ್ಟುಬಿಡುವಂತಹವರೇ ಅವರು? ಲಲಿತೆಯನ್ನು ಕೇಳಿದರೆ ಅವಳು ಯಾವುದೂ ನಿರ್ಧರವಾಗಿ ಉತ್ತರ ಹೇಳುವುದಿಲ್ಲ. 'ನಿಮ್ಮ ಇಷ್ಟ ಹೇಗೋ ನನ್ನದೂ ಹಾಗೆಯೇ' ಎನ್ನುತ್ತಾಳೆ. ಆದರಲ್ಲಿ ಎಷ್ಟು ತನ್ನನ್ನು ತೃಪ್ತಿಗೊಳಿಸಲು ಹೇಳುವುದೋ, ಎಷ್ಟು ಮನಃಪೂರ್ವಕವಾಗಿಯೇ ಹೇಳುವುದೋ ತಿಳಿಯುವುದು ಹೇಗೆ?

೨೫

ಸಂಜೆಯ ಸರದಿ. ಬೆಳಿಗ್ಗೆ ಹನ್ನೊಂದುಗಂಟೆಗೆ ಮನೆಗೆ ಬರಬೇಕಾಗಿದ್ದ ರಂಗಣ್ಣ ಹನ್ನೆರಡೂವರೆ ಗಂಟೆಗೆ ಬಂದ. ಹೊತ್ತಾಗಿ ಬರುವುದೇನೂ ಹೊಸದಲ್ಲ. ರೈಲು ಹೊತ್ತಿಗೆ ಸರಿಯಾಗಿ ಬರುತ್ತಿದ್ದ ದಿನವೇ ಕಡಿಮೆ. ಸ್ನಾನ ಮಾಡಿದ ಶಾಸ್ತ್ರ ಮಾಡಿ, ಒಂದು ತುತ್ತು ಅನ್ನ ತಿಂದು ರೈಲಿಗೆ ಓಡಬೇಕಾಗಿತ್ತು. ಮನೆಗೆ ಬಂದು ಹಾಜರಾತಿ ಕೊಟ್ಟು ಹೋಗದಿದ್ದರೆ ಮನೆಯವರು ಯೋಚಿಸುತ್ತಾರೆಂದು ಮನೆಗೆ ಓಡಿಬರಬೇಕಾಗಿತ್ತು. ವಿಶ್ವೇಶ್ವರಶಾಸ್ತ್ರಿ ಎಂಬ ಹರಿಕಥೆ ದಾಸ ವಿಶ್ವೇಶ್ವರಪುರದಲ್ಲೊಮ್ಮೆ ಹರಿಕಥೆ ಮಾಡುತ್ತಾ ಉಪಕಥೆಯನ್ನು ವಿಸ್ತರಿಸುವ ಸಂದರ್ಭದಲ್ಲಿ ಹೇಳಿದ್ದ :

'ಬೆಂಗಳೂರಿನಲ್ಲಿ ಗಂಡಸರು ಮನೆಯಿಂದ ಹೊರಟರೆ ಅವರು ಬರುವ ತನಕ ಹೆಂಡಿರು ಮಾಂಗಲ್ಯವನ್ನು ತೆಗೆದು ಗೂಟಕ್ಕೆ ತಗುಲುಹಾಕಿರಬೇಕು. ಅವರು ತಿರುಗಿ ಬಂದಮೇಲೆಯೇ ಹಾಕಿಕೊಳ್ಳಬೇಕು. ಯಾವ ಹೊತ್ತಿನಲ್ಲಿ ಅವರಿಗೆ ಏನಾಗುತ್ತದೆಯೋ ಸ್ವಲ್ಪವೂ ನಂಬಿಕೆಯಿಲ್ಲ.'

ಯುದ್ಧ ಆರಂಭವಾದಮೇಲಂತೂ ಇದು ಇನ್ನೂ ವಿಷಮಿಸಿತ್ತು. ಯಾವ ಹೊತ್ತಿನಲ್ಲಿ ಮಿಲಿಟರಿ ಲಾರಿ ಮೈಮೇಲೆ ಹೋಗಿ, ಮನುಷ್ಯನಿಗೆ ಸ್ವರ್ಗಕ್ಕೆ (ಇಲ್ಲ ನರಕಕ್ಕೆ) ಟಿಕೇಟು ಕೊಡುವುದೋ ಹೇಗೆ ಹೇಳುವುದು ? ಮಿಲಿಟರಿ ಲಾರಿಗೆ ಸಿಕ್ಕಿ ಸಾಯುವುದಕ್ಕೇನೋ ಪುಣ್ಯ ಮಾಡಿರಬೇಕು. ಹಿಂದಿನವರು 'ಅನಾಯಾಸೇನ ಮರಣಂ' ಎಂದು ಕೋರಿದ್ದರು. ಇದು ಅಂತಹದೇ. ಒಂದೇ ಒಂದು ಕ್ಷಣ. ಕೆಳಗೆ ಸಿಕ್ಕವನ ಗುರುತು ಸಹ ಸಿಗುವುದಿಲ್ಲ. ಗುರುತು ಸಿಕ್ಕಿದರಷ್ಟೆ ಅವನು ಸತ್ತ ವಿಷಯ ಮನೆಯವರಿಗೆ ತಿಳಿಯುವುದು? ಅವನೆಲ್ಲೋ ಊರುಬಿಟ್ಟು ಓಡಿ ಹೋದನೆಂದು ಮನೆಯವರು ಕತೆ ಕಲ್ಪಿಸಿ ಇದ್ದಿದ್ದರಲ್ಲಿ ಸಮಾಧಾನ ಹೊಂದುವರು.

ಇದೊಂದೇ ಅಲ್ಲ; ಕಾರ್ಖಾನೆಯಲ್ಲಿ ಏನಾಗುವುದೋ ಹೇಳುವುದು ಹೇಗೆ? ಮೊನ್ನೆ ನಡೆದ ಘಟನೆಯ ಬಿಸಿ ಇನ್ನೂ ಆರಿರಲಿಲ್ಲ. ಮುನಿಸ್ವಾಮಿಯೆಂಬ ಕೆಲಸಗಾರ ಒಂದು ಮಿಷನ್ನು ಒರೆಸುತ್ತಿದ್ದ. ಅದು ದೊಡ್ಡದೊಡ್ಡ ವಸ್ತುಗಳನ್ನು ಸಣ್ಣಗೆ ಕತ್ತರಿಸುವ ಯಂತ್ರ. ಆಫೀಸರೊಬ್ಬ ಅವನು ಒರೆಸುತ್ತಿದ್ದುದನ್ನು ನೋಡದೆ ಯಂತ್ರವನ್ನು 'ಸ್ಟಾರ್ಟ್' ಮಾಡಿಬಿಟ್ಟ. ಅವನಿಗೆ ಯಂತ್ರದ ವಿಷಯ ಗೊತ್ತಿದ್ದುದು ಎರಡೇ. ಒಂದು ಸ್ಟಾರ್ಟ್ ಮಾಡುವುದು, ಇನ್ನೊಂದು ಸ್ಟಾಪ್ ಮಾಡುವುದು. ಅದಕ್ಕೆ ಎರಡು ಗುಂಡಿಗಳು. ತಿಳಿಯುವಂತೆ ಇದ್ದುವು. ಚಕಚಕ ಎಂದಿತು ಯಂತ್ರ. ಪುಡಿಮಾಡಲು ಏನೂ ಅದಕ್ಕೆ ಇರಲಿಲ್ಲ. ಕತ್ತರಿಸುವ

ವಸ್ತುವನ್ನು ಯಂತ್ರದೊಳಕ್ಕೆ ತಳ್ಳುವ ಸ್ಥಳದಲ್ಲಿ ಮುನಿಸ್ವಾಮಿ ಇದ್ದ. ಯಂತ್ರ ಹಸಿದ ಹುಲಿಯಂತೆ ಅವನನ್ನೇ ನುಂಗಿತು. 'ಕಟಕಟ, ಚಕಚಕ, ಕಟಕಟ' ಯಂತ್ರ ಶಬ್ದ ಮಾಡಿತು. ಕತ್ತರಿಸಿದ ವಸ್ತು ಬೀಳುವ ಜಾಗದಲ್ಲಿ ಬಿದ್ದದ್ದು ಎಲುಬಿನ ಚೂರು, ಮಾಂಸದ ಮುದ್ದೆ, ರಕ್ತದ ಕೆನ್ನೀರು. ಯಾರೋ 'ಅಯ್ಯೋ ಮುನಿಸ್ವಾಮಿ, ಮುನಿಸ್ವಾಮಿ' ಎಂದು ಕೂಗಿಕೊಂಡರು. ಆಗ ಆಫೀಸರಿಗೆ ತಾವು ಮುನಿಸ್ವಾಮಿಯನ್ನು ಯಂತ್ರ ಒರೆಸುವ ಕೆಲಸಕ್ಕೆ ನಿಯಮಿಸಿದ್ದುದು ನೆನಪಾಗಿ ಇನ್ನೊಂದು ಗುಂಡಿಯನ್ನು ಒತ್ತಿದರು. ಯಂತ್ರ ಸಾವಧಾನವಾಗಿ ನಿಂತಿತು. ಆದರೆ ಮುನಿಸ್ವಾಮಿಯ ಪತ್ತೆಯೇ ಇರಲಿಲ್ಲ.

ಯಥಾಪ್ರಕಾರ ಮಹಜರಾಯಿತು. ಮುನಿಸ್ವಾಮಿಯೇ ಅಜಾಗರೂಕತೆಯಿಂದ ಯಂತ್ರದೊಳಕ್ಕೆ ನುಗ್ಗಿಬಿಟ್ಟ ಎಂದು ವರದಿಯಾಯಿತು. ಯಥಾಪ್ರಕಾರ ಕೂಲಿಕಾರರ ಸಂಘ ಅಧಿಕಾರಿಗಳ ಅಪ್ಪಣೆಯಂತೆ ಯಾವ ಗಲಭೆಯನ್ನೂ ಮಾಡದೆ ಸುಮ್ಮನಿದ್ದಿತು. ತನ್ನ ತಪ್ಪಿನಿಂದ ಪ್ರಾಣ ಕಳೆದುಕೊಂಡನೆಂದು ನಿರ್ಧರಿಸಲ್ಪಟ್ಟ ಮುನಿಸ್ವಾಮಿ ಸತ್ತಮೇಲೆಯೂ ಅಧಿಕಾರಿಗಳ ಬೈಗುಳನ್ನು ಸ್ವೀಕರಿಸಿದ. ಅವನ ಹೆಂಡಿರುಮಕ್ಕಳಿಗೆ ಏನೂ ಕೊಡಬೇಕಾಗಿಲ್ಲವೆಂದು ತೀರ್ಪು ಕಾನೂನು ಕೊಟ್ಟಿತು.

ಅಂತಹುದೇ ಇನ್ನೊಂದು ಈ ದಿನ ನಡೆದಿತ್ತು. ಪರಿಸ್ಥಿತಿ ಹೀಗಿರುವಾಗ ಮನೆಗೆ ಬರದಿರುವುದು ಹೇಗೆ ?

'ಈ ದಿವಸ ರೈಲು ಹೊತ್ತಾಯಿತೇ?' ಎಂದಿನ ಪ್ರಶ್ನೆ.

ಉತ್ತರ ಎಂದಿನದಲ್ಲ. 'ರೈಲು ಸರಿಯಾಗಿಯೇ ಬಂದಿತು. ಆದರೆ ರೈಲಿಳಿದವನು ಆಸ್ಪತ್ರೆಗೆ ಹೋದೆ.'

'ಯಾಕೆ?'

'ಆಸ್ಪತ್ರೆಗೆ ನಮ್ಮವನೊಬ್ಬನನ್ನು ಸೇರಿಸಿದ್ದಾರೆ. ಅವನು ಹೇಗಿದ್ದಾನೋ ನೋಡಿಕೊಂಡು ಬರೋಣ ಅಂತ ಹೋಗಿದ್ದೆ.'

'ಹೇಗಿದ್ದಾನೆ? ಏನಾಗಿತ್ತು ಅವನಿಗೆ?'

'ಊಟ ಮಾಡುವಾಗ ಹೇಳುವಂತಹದಲ್ಲ. ಆದರೂ ಊಟವಾದಮೇಲೆ ಹೊತ್ತೆಲ್ಲಿದೆ? ಸೈಯದ್ ಹುಸೇನ್ ಎಂಬುವನೊಬ್ಬ ಕೂಲಿ. ನಮ್ಮ ಕಾರ್ಖಾನೆಯಲ್ಲಿ. ಎಂತಹ ಗಟ್ಟಿಯಾಳು ಅಂತೀಯಾ ಅವನು? ಹತ್ತುಮಣದ ಮೂಟೆ ಹೆಗಲಮೇಲೆ ಸಲೀಸಾಗಿ ಎಳೆದುಹಾಕುವ ಆಳು. ಅವನಿಗೇನು ಲಿಪಿ ತೀರಿ ಬಂದಿತ್ತೋ ಇವತ್ತು ಕೆಲಸಕ್ಕೆ ಬಂದ. ಆಫೀಸರು ಅವನನ್ನು ಕರೆದು ಹೇಳಿದರು:

'ಲೋ, ಈ ಪೈಪ್‌ಲೈನ್ ಬಿಚ್ಚು.'

ಆ ಕೊಳವಿಗಳೊಳಗೆ ಸುಡುತ್ತಿರುವ ರಾಸಾಯನಿಕ ದ್ರವ್ಯ ಹರಿಯುತ್ತಿತ್ತು. ಅದರ ಹತ್ತಿರ ಯಾವ ಕೆಲಸ ಮಾಡಬೇಕಾದರೂ, ಕಾರ್ಖಾನೆಯ ನಿಯಮದಂತೆ ಕಣ್ಣಿಗೆ ಕನ್ನಡಕ, ಕೈಗೆ ರಬ್ಬರಿನ ಕೈಚೀಲ, ಕಾಲಿಗೆ ರಬ್ಬರಿನ ಬೂಟ್ಸು, ಮೈಗೆಲ್ಲಾ ರಬ್ಬರಿನ ಅಂಗಿ ಹಾಕಿಕೊಂಡೇ ಕೆಲಸ ಮಾಡಬೇಕಿತ್ತು. ಆದರೆ ಯುದ್ಧದ ದೆಸೆಯಿಂದ ರಬ್ಬರಿನ ಸಾಮಾನು ಒಂದಕ್ಕೆ ಹತ್ತರಷ್ಟಾಗಿತ್ತು. ಅವನ್ನೆಲ್ಲಾ ಉಪಯೋಗಿಸಿದರೆ ಬಂಡವಾಳಗಾರರ ಲಾಭ ನೂರಕ್ಕೆ ಐವತ್ತರಷ್ಟು ಬರದೇ ಕಡಿಮೆಯಾಗುವ ಸಂಭವವಿತ್ತು. ಆಡಳಿತಗಾರರು ಕಡ್ಡಾಯಪಡಿಸುತ್ತಿದ್ದ ಮಿತವ್ಯಯ ಒಂದುಕಡೆ. ಈ ಆಫೀಸರುಗಳು ಮೇಲಿನವರ ಮೆಚ್ಚಿಕೆ ಪಡೆಯಲು ಒತ್ತಾಯಪಡಿಸುತ್ತಿದ್ದ ಮಿತವ್ಯಯ ಒಂದುಕಡೆ. ಇವೆರಡರಿಂದಾಗಿ ಹುಸೇನನಿಗೆ ಮೈ ಚರ್ಮವನ್ನು ಬಿಟ್ಟು ಬೇರಾವ ರಕ್ಷಣೆಯೂ ಇರಲಿಲ್ಲ. ಮುಂದೆ ಗೊತ್ತೇಇದೆ. ಪೈಪನ್ನು ಕಳಚುತ್ತಿದ್ದಾಗ ಆ ಆಫೀಸರು ಸರಿಯಾದ ಮುಂಜಾಗ್ರತೆ ತೆಗೆದುಕೊಳ್ಳದ್ದರಿಂದ ಹುಸೇನನಿಗೆ ಸುಡುವ ರಾಸಾಯನಿಕ ದ್ರವ್ಯದ ಸ್ನಾನವಾಯಿತು. ತಲೆಯಿಂದ ಕಾಲಿನವರೆಗಿನ ಚರ್ಮವೆಲ್ಲಾ ಕರಗಿ ಕಳಚಿಹೋಯಿತು. ಇದಾದ ಒಂದು ಗಂಟೆಯಮೇಲೆ ಅರ್ಧಪ್ರಾಣನಾಗಿದ್ದ ಅವನನ್ನು ಆಸ್ಪತ್ರೆಗೆ ಸಾಗಿಸಿದರು.'

'ಅಯ್ಯೋ ಪಾಪ! ಈಗ ಹೇಗಿದ್ದಾನೆ?'

'ಇರುವುದು ಹೇಗೆ? ಮೈಮೇಲಿನ ಪ್ರಜ್ಞೆಯೇ ಇಲ್ಲ. ಆ ಉರಿಗೆ ಕೂಗಿಕೊಳ್ಳುತ್ತಾನೆ. ಆ ಸುಟ್ಟ ಗಾಯಕ್ಕೆ ಗಂಟೆಗೊಂದು ಸಲ ಕಾಡ್‌ಲಿವರ್ ಎಣ್ಣೆ ಹಚ್ಚಬೇಕು. ಅಷ್ಟು ಖರ್ಚು ಮಾಡಲು ಆಸ್ಪತ್ರೆಯವರಿಗಿಷ್ಟವಿಲ್ಲ. ಕಾರ್ಖಾನೆಯವರು ಕೊಡುವುದಿಲ್ಲವೆಂದರು. ನಾವೇ ಸೇರಿ ಚಂದಾ ಹಾಕಿ, ಎಣ್ಣೆ ತೆಗೆದುಕೊಂಡುಹೋಗಿ ಕೊಟ್ಟುಬಂದೆವು.'

'ಬದುಕಿಯಾನೇ?'

'ಬದುಕುವುದು ಅನುಮಾನವೇ? ಆದರೆ ಸಾಯುವವರೆಗಾದರೂ ಸ್ವಲ್ಪ ಉರಿ ಕಡಿಮೆಯಾಗಲಿ ಎಂದು ನಮ್ಮ ಪ್ರಯತ್ನ.'

'ಅವನು ಸತ್ತರೆ ಏನಾದರೂ ಕೊಡುತ್ತಾರೆಯೇ ಅವನ ಹೆಂಡಿರು ಮಕ್ಕಳಿಗೆ ಕಾರ್ಖಾನೆಯವರು?'

'ಗೊತ್ತೇಇದೆ ಅವರ ಬುದ್ಧಿವಂತಿಕೆ. ಹುಸೇನ್ ಸತ್ತಿದ್ದು ಸ್ವಂತ ಅಜಾಗರೂಕತೆಯಿಂದ ಎಂದು ಆಗಲೇ ರಿಪೋರ್ಟು ಹೋಗಿಬಿಟ್ಟಿದೆ. ಆ ಅವಿವೇಕಿ ಆಫೀಸರನ್ನು ಕೇಳುವವರಿಲ್ಲ. ಈಗ ಹುಸೇನನಿಗೆ ಜೀವವಿರುವತನಕ ಅರ್ಧ ಸಂಬಳ ಕೊಡುವುದೇ ದೊಡ್ಡ ಕೊಡುಗೈಯ ದಾನ ಎಂದವರ ಅಭಿಪ್ರಾಯ.'

'ಎಂತಹ ಕಟುಕರೂ ಇರುತ್ತಾರಪ್ಪ! ಜೀವ ಎನ್ನುವುದು–ಅದು ಯಾರದ್ದು ಬೇಕಾದರೂ ಆಗಲಿ–ಇಷ್ಟು ಕಸಕ್ಕೆ ಕಡೆಯೆ?'

'ಈ ಪಾಪದಲ್ಲಿ ಒಂದು ಭಾಗ ಇದನ್ನು ನೋಡಿ ಸಹಿಸಿರುವ ನಮಗೂ ಬರುವುದಿಲ್ಲವೆ? ಕರ್ತೃವಿಗೆ ಎಷ್ಟು ಪಾಪವೋ ಅದನ್ನು ನೋಡಿ ಉಸಿರೆತ್ತದೆ ಸುಮ್ಮನಿರುವ ಪ್ರೇಕ್ಷಕನಿಗೂ ಅಷ್ಟೇ ಪಾಪ. ಈ ಖೂನಿಗೆ ಸ್ವಲ್ಪವೂ ಪ್ರತಿಭಟನೆ ಬೇಡವೆ?'

'ಹೋಗಲಿ ಭಾವ. ಈ ಪಾಪದ ಕೂಳಾದರೂ ನಾವೇಕೆ ತಿನ್ನಬೇಕು? ಬಿಟ್ಟುಬಿಡಿ ಕಾರ್ಖಾನೆಯ ಕೆಲಸವನ್ನು. ಎಲ್ಲಿಯೋ ಹಾಯಾಗಿ ಇದ್ದುಬಿಡೋಣ'

'ಹಾಗೆ ಬಿಟ್ಟುಬಿಟ್ಟರೆ ಏನು ಬಂತು ಭಾಗ್ಯ ಲಲಿತ? ನನ್ನ ಸುಖ ಮಾತ್ರ ನಾನು ನೋಡಿಕೊಂಡಿದ್ದಾಯಿತು. ಇಷ್ಟು ದಿವಸ ಇವರ ಮಧ್ಯೆ ಇದ್ದು ಇದನ್ನೆಲ್ಲಾ ನೋಡಿ ತಲೆತಪ್ಪಿಸಿಕೊಂಡುಬಿಡಲೆ? ಏನಾದರೂ ಮಾಡಬೇಕು?'

'ಏನು ಮಾಡುತ್ತೀರಿ?'

'ಕೆಲಸಗಾರರೆಲ್ಲಾ ಸೇರಿ ಮುಷ್ಕರ ಹೂಡಬೇಕು. ಕೂಲಿಕಾರರ ಜೀವಕ್ಕೆ ಬೆಲೆ ಇದೆ ಎನ್ನುವುದು ಅಧಿಕಾರಿಗಳಿಗೆ ಮನದಟ್ಟಾಗಬೇಕು. ಮೂಢ, ಮೂರ್ಖರಾದ ಆಫೀಸರುಗಳನ್ನು ಒದ್ದೋಡಿಸಬೇಕು. ನಿನ್ನೆಯಿಂದ ಅದಕ್ಕೆ ಪ್ರಯತ್ನಿಸುತ್ತಿದ್ದೇನೆ. ನೋಡು, ನಿಜ; ಗಂಟೆ ಹೊಡೆಯಿತು, ಹೊತ್ತಾಯಿತು.'

ಷರಾಯಿ ಮೇಲೇರಿಸಿಕೊಂಡು, ತುಂಬಿಟ್ಟ ಊಟವನ್ನು ಕೈಯಲ್ಲಿ ತೆಗೆದುಕೊಂಡು ರಂಗಣ್ಣ ಒಂದೇ ಉಸಿರಿನಲ್ಲಿ ಓಡಿದ.

ಲಲಿತ ಹೇಳಿದಳು 'ನೋಡು ತಂಗಿ, ಭಾವ ಎಷ್ಟು ಕಷ್ಟಪಡುತ್ತಿದ್ದಾರೆ? ಊಟ ಸಹ ಸರಿಯಾಗಿ ಮಾಡಲಿಲ್ಲ. ಇನ್ನೊಬ್ಬರಿಗೋಸ್ಕರ ಎಷ್ಟು ವ್ಯಥೆಪಡುತ್ತಾನೆ? ಇಂತಹ ದೊಡ್ಡಜೀವಿ ಬಸವಳಿದು ಮನೆಗೆ ಬಂದಾಗ ಅವನಿಗೆ ಸ್ವಲ್ಪವಾದರೂ ಸುಖ, ಸಮಾಧಾನಗಳನ್ನು ಕೊಡುವುದಕ್ಕಿಂತ ಇನ್ನೇನು ಬೇಕು ನಮಗೆ? ಗಂಡಸಿನ ಸರಿಸಮನಾಗಿ ದುಡಿಯುವುದಕ್ಕಿಂತ ಇದು ಯಾವುದರಲ್ಲಿ ಕಡಿಮೆ?'

ರಂಗಣ್ಣ ಬೀದಿಯ ಕೊನೆಗೆ ಹೋಗಿ ತಿರುಗಿ ಮರೆಯಾಗುವತನಕ ಇಬ್ಬರೂ ನೋಡುತ್ತ ನಿಂತಿದ್ದರು. ಕಾಮಾಕ್ಷಿಯ ಕಣ್ಣಿನಲ್ಲಿ ನೀರು ಹನಿಸಿತ್ತು. ತಿರುಗಿ ಬಂದು ಎಲೆಯಮುಂದೆ ಕುಳಿತರೆ ಒಂದು ತುತ್ತು ಅನ್ನವೂ ಗಂಟಲಲ್ಲಿ ಇಳಿಯಲಿಲ್ಲ.

ಮರುದಿವಸ ಮಧ್ಯಾಹ್ನ ರಂಗಣ್ಣ ಮನೆಗೆ ಬಂದ.

'ಏನಾಯಿತು?' ಕೇಳಿದವಳು ಲಲಿತೆ.

'ಏನೂ ಆಗಿಲ್ಲ. ನಮ್ಮ ಪ್ರಯತ್ನದ ಸುದ್ದಿ ಅಧಿಕಾರಿಗಳಿಗೆ ತಿಳಿದು ಹೋಯಿತು. ಅವರು ಕೆಲವರನ್ನು ದಂಡಿಸಿದರು. ಕೆಲವರಿಗೆ ಹೆಚ್ಚಿನ ಸಂಬಳದ ಆಸೆ ತೋರಿಸಿದರು. ಮೊನ್ನೆ ಇದ್ದ ಉತ್ಸಾಹ ನಿನ್ನೆ ಇರಲಿಲ್ಲ. ಈ ದಿನ ಅದು ಬತ್ತಿಯೇಹೋಯಿತು. ಬೇಕಿದ್ದರೆ ನಾನೊಬ್ಬ ಮುಷ್ಕರ ಹೂಡಬೇಕು. ಅದ ರಿಂದೇನಾಯಿತು?'

'ಈ ತರಹೆಯ ಪರಿಸ್ಥಿತಿ ಎಲ್ಲಿಯೂ ಯಾವಾಗಲೂ ಇರುತ್ತದೆಯೆಂದು ಕಾಣುತ್ತದೆ. ಅದಕ್ಕೇನು ಮಾಡಬೇಕು?'

'ಈ ಶತಮಾನಗಳ ದಾಸ್ಯ ಮನುಷ್ಯನನ್ನು ಇಷ್ಟು ಹೀನಸ್ಥಿತಿಗಿಳಿಸಿದೆ. ಅಧು ಒಂದುದಿನದಲ್ಲಿ ಹೇಗೆ ತೊಲಗೀತು? ಜನ ತಮ್ಮ ಶಕ್ತಿಯನ್ನೇ ಅರಿತು ನಡೆಯುವ ದಿನ ಎಂದು ಬರುತ್ತದೆಯೋ ಪರಮಾತ್ಮನೇ ಬಲ್ಲ.'

ತೀರ ಮರವೆಯ ಪ್ರಕೃತಿಯ ಜನ ಇಂತಹ ಪ್ರಮಾದಗಳನ್ನು ಬೇಗನೆ ಮರೆತರು. ಸೈಯದ್ ಹುಸೇನನು ನರಳಿ ನರಳಿ ಅಲ್ಲಾನ ಪಾದಾರವಿಂದ ಗಳನ್ನು ಸೇರಿದ. ಸೈಯದ್ ಹುಸೇನನಾದಮೇಲೆ ಗಫಾರ್‌ಖಾನನು ಅಂತಹದೇ ಮತ್ತೊಂದು ಶುದ್ಧಿಸ್ನಾನ ಮಾಡಿದ. ಅವನೂ ಪಠಾಣರಕ್ತದವನು. ಗಡಿನಾಡಿ ನವರಂತೆಯೇ ಕಟ್ಟುಮಸ್ತಾದ, ಕಡಿದರೆ ನಾಲ್ಕು ಜನವಾಗಬಹುದಾದ ಆಳು. ಅವನನ್ನು ನೋಡುವುದೇ ಒಂದು ಆನಂದ. ಅಂತಹ ಸ್ಫುರದ್ರೂಪಿ, ಶಕ್ತಿವಂತ. ಇಲ್ಲಿ ಶುದ್ಧಿಸ್ನಾನ ಮಾಡಿದವನು ಆಸ್ಪತ್ರೆಯಲ್ಲಿ ಆರು ತಿಂಗಳು ನರಳಿದ. ಪುನಃ ಅವನಿಗೆ ಕಾಡ್‌ಲಿವರ್ ಎಣ್ಣೆಗೆ ಚಂದಾ ಎತ್ತಬೇಕಾಯಿತು. ಆದರೆ ಅಲ್ಲಾ ಅವನಮೇಲೆ ಕೃಪೆ ಮಾಡಲಿಲ್ಲ. ಸಾಯದೆ ಬದುಕಿದ. ಬದುಕಿ ಸತ್ತ. ಈಗ ಅವನನ್ನು ನೋಡಿದರೆ ಮಕ್ಕಳು ಕಿರಿಚಿಕೊಳ್ಳುತ್ತವೆ. ಸೊಟ್ಟಗಾದ ಮುಖ. ಸುಟ್ಟು ಇದ್ದಲಿನಂತಾಗಿದೆ. ಮೈಯ ಚಿನ್ನದ ಚರ್ಮದ ಬದಲು ಸುಕ್ಕುಸುಕ್ಕಾದ ಕರಿಯ ತೊಗಲು ಬೆಳೆದುಬಂದಿದೆ. ಕೈಯೊಂದು ನರ ಹಿಡಿದು ಸರಿಯಾಗಿ ಆಡಿ ಸಲು ಬರುವಂತಿಲ್ಲ. ಹೊಸದಾಗಿ ಬೆಳೆದ ಚರ್ಮ ಸರಿಯಾದ ಮರ್ದನವಿಲ್ಲದೆ ಬಿಗಿಹಿಡಿದಿದೆ. ನೆಟ್ಟಗೆ ತಲೆಯೆತ್ತಿ ನಡೆಯಲಾರ. ಬರಿಯ ಅಸ್ತಿಪಂಜರ ಮಾತ್ರ ಉಳಿದಿದೆ. ಸುಟ್ಟ ಹುಣ್ಣು ಇನ್ನೂ ಪೂರಾ ಮಾಗಿಲ್ಲ. ಮಾಗಿದ ಹುಣ್ಣು ಪುನಃ ಕರಗಿಕೊಂಡು ಬರುತ್ತಿದೆ. ಈ ನಡೆನೆಣವನ್ನು ಕಂಡರೆ ಅಸಹ್ಯವೂ ದುಃಖವೂ ಆಗುತ್ತದೆ. ಈ ದೊಡ್ಡದೇಹದ ಮನುಷ್ಯನಿಗೆ ಎಷ್ಟು ಆಸೆ ಆಕಾಂಕ್ಷೆಗಳಿದ್ದುವೋ?

ಅವೆಲ್ಲಾ ಈಗೆಲ್ಲಿ? ಯಾರಿಂದ? ಯಾತಕ್ಕೋಸ್ಕರ ಈ ದುರ್ದೆಶೆ? ಈ ಪಾಪಿಗೆ ಒಂದಾಣೆಯ ಶಂಖಪಾಷಾಣ ತಂದು ಗುಟ್ಟಾಗಿ ತಿನ್ನಿಸಿ ಪುಣ್ಯ ಕಟ್ಟಿಕೊಳ್ಳೋಣ ಎಂದು ಎಷ್ಟೋ ಜನರಿಗೆ ಅನ್ನಿಸಿದೆ. ಅವನಿಗಿಂತ ಮುನಿಸ್ವಾಮಿ, ಸೈಯದ್ ಹುಸೇನರು ಪುಣ್ಯ ಪಡೆದಿದ್ದರು. ಅವನನ್ನು ಕಾರ್ಖಾನೆಯವರು ಕೆಲಸಕ್ಕೆ ಸೇರಿಸಲಾರರು. ಏಕೆಂದರೆ ಅವನೀಗ ಹತ್ತುಮಣದ ಮೂಟೆಯನ್ನು ಬೆನ್ನಮೇಲೆ ಎಳೆಯಲಾರ. ಅವನನ್ನೀಗ ಕೆಲಸಕ್ಕೆ ಸೇರಿಸಿಕೊಂಡು ಬೆವರು ಹರಿಯುವಷ್ಟು ಕೆಲಸ ತೆಗೆಯದಿದ್ದಲ್ಲಿ ಉಳಿದವರಿಗೆ ಕೆಟ್ಟ ಮೇಲ್ಪಂಕ್ತಿಯಾದೀತು! ಸೋಮಾರಿಗಳು ಬೇಕೆಂತಲೇ ಅಪಾಯಕ್ಕೆ ಸಿಕ್ಕಿಕೊಂಡು ಕೆಲಸದಿಂದ ತಪ್ಪಿಸಿಕೊಂಡಾರು!

ಈ ವಿಚಾರಗಳನ್ನು ಬಯಲಿಗೆಳೆಯುವುದಕ್ಕೆ ವಿಶ್ವಪ್ರಯತ್ನ ಮಾಡಿಯಾಯಿತು. ಆದರೆ ಪ್ರಯೋಜನವೇನೂ ಆಗಲಿಲ್ಲ. ನೊಂದವರ, ನರಳುವವರ ಸಂಖ್ಯೆ ಏರುತ್ತಾಬಂದಿತು. ಪ್ರತ್ಯಕ್ಷವಾಗಿ ಅಪಾಯಕ್ಕೆ ಸಿಕ್ಕಿಕೊಳ್ಳದವರೂ ಸಹ, ಅಲ್ಲಿಯ ವಿಷದ ಗಾಳಿಯನ್ನು ಕುಡಿಕುಡಿದು, ಬೆಂಕಿಯ ಸೆಖೆಯಲ್ಲಿ ಹೊತ್ತಿಹೊತ್ತಿ ಸಣ್ಣಗಾಗುತ್ತಾಬಂದರು. ಯಾವುವೋ ಗ್ರಹಗಳು ಉಚ್ಛಸ್ಥಾನದಲ್ಲಿದ್ದಾಗ ಹೊಸದಾಗಿ ಬಂದ ದಯಾಳು ಅಧ್ಯಕ್ಷರೊಬ್ಬರು ಕೆಲಸದವರಿಗೆ ಮುಫತ್ತಾಗಿ ಪುಷ್ಟಿಕರವಾದ ಆಹಾರ ಕೊಡಬೇಕೆಂದು ಸಲಹೆ ಮಾಡಿದರು. ಆದರೆ ಈ ಸಲಹೆ ನೀರಿನಲ್ಲಿ ಮಾಡಿದ ಹೋಮದಂತಾಯಿತು.

* * * *

'ತಂಗಿ ಇಷ್ಟುಬೇಗ ಎದ್ದುಬಿಟ್ಟರೆ ಹೇಗೆ? ಇನ್ನೂ ಸ್ವರ ಹಾಡುವಾಗ ತಪ್ಪುತ್ತಿರುವಿ. ಸ್ವಲ್ಪ ಕಷ್ಟಪಟ್ಟು ಅಭ್ಯಾಸ ಮಾಡಬೇಕಮ್ಮಾ.'

'ನನಗೆ ತಲೆ ನೋಯುತ್ತಿದೆ. ನನ್ನ ಕೈಯಿಂದಾಗದು.'

'ಹಾಗೆಂದರೆ ಹೇಗೆ, ಕಷ್ಟಪಡದಿದ್ದರೆ ಹೇಗಾಗುತ್ತದೆ?'

'ಸುಮ್ಮನೆ ಕಷ್ಟಪಟ್ಟು ಯಾವ ಪುರುಷಾರ್ಥ?'

'ಪುರುಷಾರ್ಥ ಇಲ್ಲ ಅಂತೀಯಾ? ದೇವರನ್ನು ಒಲಿಸಲು ಸಾಧನೆ ಮಾಡಬೇಕು. ಸಾಧನೆಗೆ ದೇಹವನ್ನು ದಂಡಿಸಬೇಕು.'

'ದೇವರು ಎಂದೂ ಒಲಿಯದಿದ್ದರೆ, ಸುಮ್ಮನೆ ಮೈ ನೋಯಿಸಿಕೊಳ್ಳಬೇಕೇಕೆ?'

'ಒಲಿಯುವುದಿಲ್ಲ ಅಂದರೇನು? ನಮಗಿನ್ನೂ ಅರ್ಹತೆಯಿಲ್ಲ ಅಂತ ಅರ್ಥ ಅಷ್ಟೆ.'

'ದೇವರ ಮನಸ್ಸು ನಮ್ಮ ಕಡೆ ಇದ್ದರೆ? ಅವರ ಮನಸ್ಸು ಇನ್ನೊಂದೆಡೆ ಸೆರೆಯಾಗಿ ಹೋಗಿಬಿಟ್ಟಿದ್ದರೆ?'

'ಅದನ್ನು ನೀನು ನಂಬುತ್ತೀಯಾ ತಂಗಿ?'

'ನಾನು ಅದನ್ನು ಕಂಡು ಯುಗವಾಗಿಹೋಗಿದೆ. ಮೆಚ್ಚಿದವರಿಗೆ ಮರಣ ಸುಖ. ಅವರು ಯಾವುದನ್ನೂ ನೋಡುವುದಿಲ್ಲ. ಮೆಚ್ಚಲಾರದವರ ಮುಂದೆ ತಲೆ ಚಚ್ಚಿಕೊಂಡು ಮಾಡುವುದೇನು? ನನ್ನ ಜನ್ಮ ಇಷ್ಟೆ.'

ಕಾಮಾಕ್ಷಿ ಮುಖ ಚಿಕ್ಕದು ಮಾಡಿಕೊಂಡಳು. ಒಡನೆಯೇ ಅಳು ಬಂದು ಬಿಟ್ಟಿತು. ಅಲ್ಲಿಂದ ಎದ್ದು ಹೊರಟುಹೋದಳು.

ಲಲಿತ ಸುಮ್ಮನೇ ಯೋಚಿಸುತ್ತ ಕುಳಿತಳು. ಹಿಂದೆ ಎಷ್ಟೋಸಾರಿ ಕಾಮಾಕ್ಷಿ ಈ ತರಹ ಯೋಚಿಸಿಯಾಳೆಂಬ ಸಂಶಯ ಹುಟ್ಟಿತ್ತು. ಆದರೆ ಅದಕ್ಕೆ ಅಷ್ಟು ಗಮನ ಕೊಟ್ಟಿರಲಿಲ್ಲ. ತನ್ನ ಉದ್ದೇಶ ಒಳ್ಳೆಯದಾದ್ದರಿಂದ, ಕಾಮಾಕ್ಷಿ ಆ ರೀತಿ ತಿಳಿಯಲಾರಳು. ಸುಮ್ಮನೇ ತಾನೇ ಇಲ್ಲದ್ದನ್ನು ಕಲ್ಪಿಸಿಕೊಳ್ಳು ತ್ತಿದ್ದೇನೆ ಎಂದು ಸಮಾಧಾನ ತಾಳಿದ್ದಳು. ಈಗ ಎಂದಿನಿಂದಲೂ ಕಾಮಾಕ್ಷಿ ಇದೇ ಭಾವನೆಯನ್ನೇ ಇಟ್ಟುಕೊಂಡಿದ್ದಳೆಂಬುದು ನಿಜವಾಯಿತು. ಅವಳಾಡಿದ ಪ್ರತಿ ಮಾತನ್ನೂ ಈ ಹಿನ್ನೆಲೆಯ ಮುಂದೆ ತಂದು ಹೊಸ ದೃಷ್ಟಿಯಿಂದ ಲಲಿತೆ ನೋಡಿದಳು. ಕಾಮಾಕ್ಷಿಯ ವರ್ತನೆಯಲ್ಲಿ ಅಂದಿಗೂ ಇಂದಿಗೂ ಬದ ಲಾವಣೆಯೇ ಕಾಣಲಿಲ್ಲ. ತಾನು ಇದನ್ನು ನೋಡಿಯೂ ತಿಳಿಯದೇ ಎಂತಹ ಮೂರ್ಖಳಾದೆ? ಪಾಪದ ಹುಡುಗಿ! ಈ ತರಹ ಭಾವನೆಯನ್ನಿಟ್ಟುಕೊಂಡು ಅದನ್ನು ಪ್ರಕಟಿಸದೆ ಇಷ್ಟು ದಿವಸಗಳೂ ಎಷ್ಟು ಯಾತನೆ ಪಟ್ಟಿರಬಹುದು? ತನ್ನ ಪ್ರತಿ ಮಾತನ್ನೂ, ಪ್ರತಿ ಕೆಲಸವನ್ನೂ ಈ ದೃಷ್ಟಿಯಿಂದ ನೋಡಿದ್ದರೆ, ಈ ಭಾವನೆಗೆ ಉತ್ತೇಜನ ಕೊಡುವಂತಹುದು ಎಷ್ಟು ದೊರೆತಿರಬಹುದು? ಎಲ್ಲವೂ ತನ್ನ ಕಲ್ಪನೆಯಂತೆಯೇ ಸುಗಮವಾಗಿ ನಡೆಯುವುದೆಂದು ನಂಬಿದ ತಾನೆಂತಹ ಹುಚ್ಚಳು! ಥೂ! ತಾನು ನಡೆದ ನೆಲ ಕೆಸರಾಗುತ್ತದೆ. ಉಸಿರೆಳೆದ ಗಾಳಿ ವಿಷ ವಾಗುತ್ತದೆ. ಲಲಿತೆ ಕಾಮಾಕ್ಷಿಯನ್ನು ಮನಸಾರ ಪ್ರೀತಿಸುತ್ತಿದ್ದಳು. ಅಂತ ಹವಳು ತನ್ನನ್ನು ತನ್ನ ದಾರಿಯಲ್ಲಿನ ಮುಳ್ಳು ಎಂದು ತಿಳಿದದ್ದು, ಅದಕ್ಕೆ ತಕ್ಕಷ್ಟು ನ್ಯಾಯವಿದ್ದದ್ದು ಲಲಿತೆಯನ್ನು ತಳಮಳಗೊಳಿಸಿತು. ತಾನು ಎಷ್ಟೇ ಒಳ್ಳೆಯವಳೆಂದು ತಿಳಿದುಕೊಳ್ಳಲಿ, ತನ್ನ ಚರಿತ್ರೆ ವಿರುದ್ಧವಾಗಿ ಸಾಕ್ಷಿ ಹೇಳಲು ಪ್ರತಿ ಹಂತದಲ್ಲಿಯೂ ಅನುವಾಗಿತ್ತು.

ಲಲಿತೆ ಎದ್ದು ಕಾಮಾಕ್ಷಿಯನ್ನು ಹುಡುಕಿಕೊಂಡು ಹೋದಳು. ಕಾಮಾಕ್ಷಿ ಚಾಪೆಯೊಂದರಮೇಲೆ ಬಿದ್ದುಕೊಂಡಿದ್ದಳು.

'ತಂಗೀ, ನನ್ನಲ್ಲಿ ನಿನಗೆ ಸ್ವಲ್ಪವೂ ನಂಬಿಕೆಯಿಲ್ಲವೆ?'—ಅದೇಕೆ ಆ ಪ್ರಶ್ನೆ! ಕಾಮಾಕ್ಷಿ ಮಾತಾಡಲಿಲ್ಲ. ಉಕ್ಕಿ ಬರುತ್ತಿದ್ದ ಅಳುವನ್ನು ತಡೆಯುವ ಪ್ರಯತ್ನದಲ್ಲಿ ಅವಳ ದೇಹವೆಲ್ಲವೂ ನಡುಗುತ್ತಲಿತ್ತು. ಲಲಿತೆ ಅವಳ ತಲೆಯನ್ನು ಮೆತ್ತಗೆ ಸವರುತ್ತಾ ಹೇಳಿದಳು :

'ತಂಗೀ, ನಿನ್ನ ಸಂಶಯಕ್ಕೆ ಕಾರಣಗಳಿರಬಹುದು. ಆದರೆ ನನ್ನ ಮನಸ್ಸಾಕ್ಷಿಯಾಗಿ ಹೇಳುತ್ತೇನೆ. ನನ್ನ ಮತ್ತು ಭಾವನ ನಡುವೆ ಅಣ್ಣತಂಗಿಯರಿಗಿಂತ ಬೇರೆ ಯಾವ ಸಂಬಂಧವೂ ಇಲ್ಲ. ನೀನು ನಂಬಿದರೆ ನಂಬು, ಬಿಟ್ಟರೆ ಬಿಡು. ನನ್ನ ಮನಸ್ಸನ್ನು ನಿನಗೆ ಬಿಚ್ಚಿ ತೋರಿಸಬಹುದಾಗಿದ್ದರೆ ಅದು ನಿನಗೆ ಗೊತ್ತಾಗುತ್ತಿತ್ತು. ನಿನ್ನ ಶ್ರೇಯಸ್ಸು ಹೊರತು ನನಗೆ ಬೇರೆ ಯಾವ ಅಪೇಕ್ಷೆಯೂ ಇಲ್ಲ ಎನ್ನುವುದು ನಿನಗೇ ತಿಳಿಯುತ್ತಿತ್ತು. ಒಬ್ಬ ಗಂಡುಸು ಒಬ್ಬ ಹೆಂಗಸಿನ ಮಧ್ಯೆ ಶುದ್ಧ ಸ್ನೇಹವಿರಕೂಡದೇ?'

ಲಲಿತೆಯ ಕಣ್ಣೀರು ಕಾಮಾಕ್ಷಿಯನ್ನು ತೋಯಿಸಿತು. ಆದರೆ ಬರಿಯ ಮಾತುಗಳು ಹೆಂಗಸಿನ ಅಸೂಯೆಯನ್ನು ಎಂದಾದರೂ ಹೋಗಲಾಡಿಸಿಯಾವೆ?'

ಲಲಿತೆ ಪುನಃ ಹೇಳಿದಳು :

'ನನ್ನ ಇರವು ನಿಮ್ಮಿಬ್ಬರ ಶ್ರೇಯಸ್ಸಿಗೆ ಅಡ್ಡಬರುವುದೆಂದು ತಿಳಿದ ಕ್ಷಣ ನಾನು ಸಾಯುವುದಕ್ಕೂ ಸಿದ್ಧಳಿದ್ದೇನೆ.'

ಸಂಜೆ ರಂಗಣ್ಣ ಲಲಿತೆಯನ್ನು 'ಒಂದು ಕೃತಿ ಬಾರಿಸು ಲಲಿತ' ಎಂದ.

'ತಂಗಿ ಬಾರಿಸುತ್ತಾಳೆ. ನನಗೇಕೋ ಮೈಯಲ್ಲಿ ಚನ್ನಾಗಿಲ್ಲ.'

'ಲಲಿತಾ, ಈಚೆಗೇಕೋ ನೀನು ನನ್ನ ಕಂಡರೆ ದೂರ ಸರಿಯುತ್ತಿರುವಿ.'

'ನೀವು ಕಾಮಾಕ್ಷಿಯನ್ನೇಕೆ ಆದರದಿಂದ ಕಾಣುವುದಿಲ್ಲ?'

'ಆದರದಿಂದ ಕಾಣದೇ ಏನು? ಅವಳು ಸಂತೋಷಪಡಲೆಂದು ಎಷ್ಟು ಜಾಗರೂಕತೆಯಿಂದ ನಡೆದುಕೊಳ್ಳುತ್ತಿದ್ದೇನೆ.'

'ಹೆಂಡತಿಯೊಡನೆ ಅಷ್ಟು ಜಾಗರೂಕತೆಯಿಂದ ನಡೆದುಕೊಳ್ಳಬೇಕೇಕೆ? ಅದು ನೀವು ಮನಃಪೂರ್ವಕವಾಗಿ ಪ್ರೀತಿಸದಿರುವುದರಿಂದ.'

'ನಾನೇನು ಮಾಡಲಿ ಲಲಿತ? ಅವಳಲ್ಲಿ ವಿಶ್ವಾಸವಿದೆ. ಅವಳನ್ನು ಕಂಡರೆ ಸಹಾನುಭೂತಿಯೂ ಉಂಟಾಗುತ್ತದೆ. ಆದರೆ ಅವಳಲ್ಲಿಯೇ ಪ್ರೀತಿಯನ್ನು ಪೂರಾ ಎರಕಹೊಯ್ಯಲಾರೆ.'

'ಅವಳ ತಪ್ಪೇನು?'

' ಅವಳದೇನೂ ತಪ್ಪಿಲ್ಲ. ನನ್ನದೇ ತಪ್ಪು. ಆದರೆ ನಾನೇನು ಮಾಡಲಿ? ಪ್ರೀತಿ ಬಲವಂತದಿಂದ ಬಂದೀತೇನು ? '

' ನೀವು ತಿಳಿದಿರುವುದೂ ತಪ್ಪು. ಪ್ರೀತಿ ಒಂದು ಮನಸ್ಸಿನ ವ್ಯಾಪಾರ. ಹೃದಯದಲ್ಲಿ ನಾನು ಇಂತಹ ವಸ್ತುವನ್ನು ಪ್ರೀತಿಸುತ್ತೇನೆ ಎಂದು ಹತ್ತುಸಾರೆ ಹೇಳಿಕೊಳ್ಳಿ. ಪ್ರೀತಿ ಹುಟ್ಟಿತೆಂದೇ ತಿಳಿಯಿರಿ. ಅದು ಒಂದು ರೀತಿಯ ಆತ್ಮ ವಂಚನೆ. ಆದರ್ಶಪ್ರೇಮ ಎನ್ನುವುದು ಸುಳ್ಳು. ಮನುಷ್ಯ ಪ್ರಯತ್ನಿಸಿದರೆ ಯಾರನ್ನಾದರೂ ಪ್ರೀತಿಸಲು ಸಾಧ್ಯ. '

' ನೀನು ಹೇಳುವುದೂ ನಿಜವಿರಬಹುದು. ನಾನೂ ಪ್ರೀತಿಸಲು ಪ್ರಯತ್ನಿಸುತ್ತಿದ್ದೇನೆ. ಆದರೆ ಅದಕ್ಕೆ ಕಾಲಾವಕಾಶ ಬೇಡವೆ? ಇಂತಹ ಪ್ರಯತ್ನಗಳಿಗೆ ನನ್ನ ಈ ಕಷ್ಟತರವಾದ ಜೀವನದಲ್ಲಿ ಅವಕಾಶವಾದರೂ ಎಲ್ಲಿ ? '

' ಹಾಗಾದರೆ ನೀವು ನನ್ನನ್ನು ಪ್ರೀತಿಸುತ್ತೀರಾ ? '

' ಅದು ಕೇಳುವ ಪ್ರಶ್ನೆಯೇ ಅಲ್ಲ. '

' ಅದೇಕೆ? '

' ನಿನ್ನನ್ನು ಪ್ರೀತಿಸುವುದಕ್ಕೂ ಅವಳನ್ನು ಪ್ರೀತಿಸುವುದಕ್ಕೂ ವ್ಯತ್ಯಾಸವಿಲ್ಲವೆ? ನಿನ್ನಂತೆ ಅವಳಿದಾಳೇನು ? '

' ಅದಕ್ಕೇನು ಮಾಡಲು ಬರುತ್ತದೆ? ನೀವು ತಂಗಿಯನ್ನು ಪೂರ್ಣವಾಗಿ ಪರೀಕ್ಷಿಸಿ ನೋಡಿಲ್ಲ. ಅವಳು ನನಗಿಂತ ಉತ್ತಮಳೇ. ಒಂದುವೇಳೆ ನೀವು ಹೇಳಿದಂತೆ ಆದರೂ ನಿಮ್ಮ ಕೈಯಲ್ಲಿ ಐದು ಬೆರಳೂ ಸಮನಾಗಿವೆಯೇ ? '

' ಅವಳನ್ನು ದೂಷಿಸುವುದಕ್ಕೆ ನಾನು ಹೇಳಲಿಲ್ಲ. ಅಪರಾಧ ಪೂರಾ ನನ್ನದೇ. ಆದರೆ ಒಂದು ಕಣಿವೆಯಲ್ಲಿ ಹರಿಯುತ್ತಿರುವ ಹುಚ್ಚುಹೊಳೆಯನ್ನು ತಿರುಗಿಸಲು ಭಗೀರಥಪ್ರಯತ್ನ ಬೇಕು. '

ಲಲಿತೆ ವೀಣೆಯನ್ನು ತಂದು ಸಂಗೀತ ಪ್ರಾರಂಭಿಸಿದಳು. ಕಾಮಾಕ್ಷಿಯೂ ಜೊತೆಗೆ ಬಂದು ಕುಳಿತಳು. ಒಂದಾದಮೇಲೊಂದು ಕೃತಿಗಳು ಇಂದಿನಂತೆ ಅವಳೆಂದೂ ಬಾರಿಸಿರಲಿಲ್ಲ. ಅವಳಿಗೇನೋ ಆವೇಶ ಬಂದಿತ್ತು. ದೇಹದಮೇಲೆ ಎಚ್ಚರವೇ ಇರಲಿಲ್ಲ. ಕಾಮಾಕ್ಷಿಗೆ ಅವಳನ್ನು ಕಂಡು ಅಸೂಯೆಯಾಯಿತು. ಇವಳಷ್ಟು ಚನ್ನಾಗಿ ವೀಣೆ ಬಾರಿಸಲು ತನಗೂ ಬಂದಿದ್ದರೆ? ಆ ಸಂಗೀತದ ಹೊನಲಿನಲ್ಲಿ ಅವಳೂ ತೇಲಿಹೋದಳು. ಲಲಿತೆಯನ್ನಪ್ಪಿಕೊಂಡು, ' ಅಕ್ಕಾ, ನಾನು ಹೇಳಿದ ಮಾತು ತಪ್ಪಾಯಿತು. ನಿನ್ನ ಮುಂದೆ ನಾನೆಷ್ಟರವಳು? ನನಗೂ ಒಂದು ಪಾಲು ಬಂದರೆ ಸಾಕು ' ಎನ್ನಬೇಕೆನ್ನಿಸಿತು. ರಂಗಣ್ಣ ಸಂಗೀತ

ದಲ್ಲಿ ಲೀನವಾಗಿ ಹೋದ. ಆದರೆ ಇಂದಿನ ರಸದೌತಣದಲ್ಲಿಯೂ ಅವನಿಗೆ ಕಹಿಯ ಅನುಭವವಾಯಿತು. ಮನಸ್ಸು ಏಕೋ ಅಳುಕಿತು. ಇಂದೇಕೆ ಲಲಿತೆ ಇಷ್ಟು ಉತ್ಸಾಹದಿಂದ, ಪರವಶತೆಯಿಂದ ಸಂಗೀತ ನುಡಿಸುತ್ತಿದ್ದಾಳೆ? ಏನಾಗಿದೆ ಅವಳಿಗೆ?

'ನೀವೇ ಪಾಲಿಂಚುರಾ, ನಿನ್ನೆ ನಮ್ಮಿನಾನುರಾ'
ಸಾಮಾನ್ಯವಾಗಿ ಇದನ್ನು ಲಲಿತೆ ಹಾಡುತ್ತಿರಲಿಲ್ಲ. ಇಂದು ಹಾಡುವಾಗ ಅವಳ ಧ್ವನಿಯಲ್ಲಿ ಕಾತರತೆಯಿತ್ತು. ಅವಳ ಕಣ್ಣಲ್ಲಿ ನೀರು ಸುರಿಯುತ್ತಿತ್ತು. ಅದು ಸಂಗೀತವಲ್ಲ. ಅವಳ ಹೃದಯಾಂತರಾಳದಿಂದ ಬಂದ ಕೂಗು ಎನ್ನುವಂತಿತ್ತು. ಏನು ಹುಚ್ಚು ತನಗೆ! ರಂಗಣ್ಣನಿಗೆ ನಾಚಿಕೆಯಾಯಿತು. ಅವಳನ್ನು ಕಾಪಾಡಲು ತಾನೆಷ್ಟರವನು? ಜಗದೀಶನಲ್ಲಿ ಅವಳು ಮೊರೆಯಿಡುತ್ತಿದ್ದುದನ್ನು ಅಪಾರ್ಥ ಮಾಡಿಕೊಂಡವನು ತಾನು.

ಸಂಗೀತ ಮುಗಿಯಿತು. ವೀಣೆಯನ್ನು ಕೆಳಗಿಟ್ಟು ಲಲಿತೆ ನಗುನಗುತ್ತಾ 'ತೃಪ್ತಿಯಾಯಿತೇ?' ಎಂದು ಕೇಳಿದಳು.

'ಇದೇ ಸಂಗೀತ ಕೇಳುತ್ತಿರುವಾಗ, ಅದೇ ಆನಂದದಿಂದ ಹೃದಯ ತುಂಬಿರುವಾಗ ಪ್ರಾಣ ಹೋದರೆ ಅದೆಂತಹ ಭಾಗ್ಯ!' ಎಂದ ರಂಗಣ್ಣ.

ಮರುದಿವಸ ರಂಗಣ್ಣ ಮನೆಗೆ ಬಂದವನು ಲಲಿತೆಯನ್ನು ಕಾಣದೇ 'ಲಲಿತೆ ಯೆಲ್ಲಿ?' ಎಂದು ಕೇಳಿದ. ಕಾಮಾಕ್ಷಿ 'ಸಂಜೆಯಹೊತ್ತಿಗೆ ಎಲ್ಲೋ ಈಗ ಬರುತ್ತೇನೆಂದು ಹೊರಟುಹೋದವರು ಇನ್ನೂ ಬಂದಿಲ್ಲ' ಎಂದು ಹೇಳಿದಳು. ರಂಗಣ್ಣನ ಮನಸ್ಸು ಗಾಬರಿಗೊಂಡಿತು. ಅವಳು ಹಾಗೆ ಎಂದೂ ಹೋಗುತ್ತಿರ ಲಿಲ್ಲ. ಈ ದಿವಸ ಏಕೆ ಒಬ್ಬಳೇ ಹೋದಳು? ರಾತ್ರಿ ಹೆಚ್ಚುತ್ತ ಬಂದಿತು. ಲಲಿತೆ ಬರಲಿಲ್ಲ. ರಂಗಣ್ಣ ಹೊರಗೆ ಹೊರಟು ಅಲ್ಲಿ ಇಲ್ಲಿ ಸುತ್ತಾಡಿದ. ಲಲಿತೆ ಯಾರ ಮನೆಗೂ ಹೋಗುತ್ತಿರಲಿಲ್ಲವಾದ್ದರಿಂದ ಅವಳನ್ನು ಎಲ್ಲಿ ಹುಡುಕುವುದು? ಅವಳಿಗೆ ಮನೆಯವರನ್ನು ಬಿಟ್ಟು ಬೇರೆ ಯಾರೂ ಸ್ನೇಹಿತರಿರಲಿಲ್ಲ. ಮತ್ತೆ ಮನೆಗೆ ಬಂದ. ಆ ರಾತ್ರಿಯೆಲ್ಲಾ ನಿದ್ದೆಯೇ ಇಲ್ಲದೆ ಕಳೆದ.

ಮರುದಿವಸ ಕೆಲಸಕ್ಕೆ ಹೋಗಲಿಲ್ಲ. ಲಲಿತೆ ಮೊದಲಿದ್ದ ಸ್ಥಳದಲ್ಲೆಲ್ಲಾ ವಿಚಾರಿಸಿದ. ಎಲ್ಲಿಯೂ ಅವಳ ಸುಳಿವು ಹತ್ತಲಿಲ್ಲ. ಮನೆಗೆ ಬಂದು ಹೆಂಡತಿ ಯನ್ನು 'ಏನಾದರೂ ಜಗಳವಾಡಿದೆಯಾ?' ಎಂದು ಕೇಳಿದ. ಕಾಮಾಕ್ಷಿ 'ಏನೂ ಇಲ್ಲ'ವೆಂದಳು. ಅವನು ಹೆಂಡತಿಯ ಮಾತನ್ನು ನಂಬಲಿಲ್ಲ. ಮತ್ತೆ ಹೊರಗೆ ಹುಡುಕಲು ಹೊರಟ. ಲಲಿತೆ ತನ್ನನ್ನು ಬಿಟ್ಟು ಹೊರಟುಹೋದಳೆ?

ಏಕೆ ಹೋದಳು? ಇಲ್ಲಿ ಬೇಜಾರಾಯಿತೆ? ಮತ್ತೆ ಮೊದಲಿನ ಜೀವನದ ಮೇಲೆ ಆಸೆ ಹುಟ್ಟಿತೆ? ಥೂ, ಎಂತಹ ನೀಚಕಲ್ಪನೆ? ಅವಳನ್ನಿಷ್ಟುದಿನ ಪರೀಕ್ಷಿಸಿಯೂ ಅಂತಹ ವಿಕಲ್ಪವೆ? ಅವನ ಮನಸ್ಸಿನಲ್ಲಿ ನೂರಾರು ಯೋಚನೆಗಳು ಅಂದೋಳನ ವೆಬ್ಬಿಸಿದುವು. ನಿನ್ನಿನ ಸಂಗೀತ! ಆಹಾ, ನಿನ್ನೆ ಮನಸ್ಸಿನಲ್ಲಿ ಕಿರುಕುಳಕೊಡು ತ್ತಿದ್ದ ಅಸ್ಪಷ್ಟಭಾವನೆ ಇಂದು ರೂಪುಗೊಂಡಿತು. ನಿನ್ನಿನದೇ ಅವಳ ಚರಮ ಗೀತವೇನು?

ಮತ್ತೆ ಮನೆಗೆ ಬಂದ. ಊಟ ಬೇಕಿರಲಿಲ್ಲ. ಅಂಚೆಯವನು ಒಂದು ಕಾಗದ ತಂದುಕೊಟ್ಟ. ಲಲಿತೆಯ ಬರಹ. ಮನಸ್ಸು ಸ್ವಲ್ಪ ಧೈರ್ಯಗೊಂಡಿತು. ಏನು ಬರೆದಿದ್ದಾಳೆ?

'ಭಾವ, ನಿಮಗೆ ತಿಳಿಸದೆ ಹೊರಟಿದ್ದಕ್ಕೆ ಕ್ಷಮೆಯನ್ನಾದರೂ ಯಾವ ಬಾಯಲ್ಲಿ ಬೇಡಲಿ? ನನ್ನ ಹಿಂದಿನ ಪಾಪದ ಜೊತೆಗೆ ಇದನ್ನೂ ಸೇರಿಸಿದ್ದೇನೆ ನಿಮಗೆ ನನ್ನಿಂದ ದುಃಖವೇ ಹೆಚ್ಚಾದೀತು ಎಂಬ ಭಾವನೆಯಿಂದ ನಾನೀರೀತಿ ಮಾಡಬೇಕಾಯಿತು. ನನ್ನನ್ನು ಮರೆತುಬಿಡಿ. ನನ್ನನ್ನು ಹುಡುಕುವ ಗೋಜಿಗೆ ಹೋಗಬೇಡಿ. ನಿಮ್ಮ ಪ್ರೀತಿ ಕಾಮಾಕ್ಷಿಗೆ ದೊರೆಯಲಿ. ಅದರಲ್ಲಿ ನಾನು ಪಾಲುಗೊಳ್ಳುವುದು ಮಹಾಪರಾಧವೆಂದೆನಿಸಿದೆ ನನಗೆ. ನಾನದಕ್ಕೆ ಅರ್ಹಳಲ್ಲ. ನಾನು ಪುನಃ ಪಾಪಕೂಪಕ್ಕೆ ಇಳಿಯುವುದಿಲ್ಲ. ಕಷ್ಟಪಟ್ಟು ಬದುಕಿರಲು ಪ್ರಯತ್ನಿಸುತ್ತೇನೆ. ನನ್ನನ್ನು ನೀವು ಪುನಃ ನೋಡುವುದು, ನನಗೆ ಪುಣ್ಯವಿದ್ದರೆ ನನ್ನ ಕೊನೆಗಾಲದಲ್ಲಿ ಮಾತ್ರ. ಆಗ ನೀವು ಇಲ್ಲಿಯೇ ಇದ್ದರೆ ನಿಮಗೆ ಹೇಳಿ ಕಳುಹಿಸುತ್ತೇನೆ. ತಂಗಿಗೆ ನನ್ನ ಪ್ರೀತಿಪೂರ್ವಕವಾದ ಆಶೀರ್ವಾದಗಳನ್ನು ತಿಳಿಸಿ. ನಾನೇನಾದರೂ ಅವಳ ಮನಸ್ಸು ನೋಯಿಸಿದ್ದರೆ ಮರೆತು ಬಿಡು ವಂತೆ ಹೇಳಿ.

ಆಜನ್ಮವೂ ನಿಮ್ಮನ್ನೇ ನೆನೆಯುವ

ಲಲಿತ.

ರಂಗಣ್ಣ ಕಾಗದವನ್ನು ಕಣ್ಣೀರಿನಿಂದ ತೋಯಿಸಿಬಿಟ್ಟ.

* * *

ಲಲಿತೆಯನ್ನು ಎರಡುದಿನ ಹುಡುಕಿ ಸಿಗದೆ ರಂಗಣ್ಣ ಕಾರ್ಖಾನೆಯ ಕೆಲಸಕ್ಕೆ ಹಾಜರಾದ. ದಿನಗಳು ಬಹಳ ಕಷ್ಟದಿಂದ ಕಳೆಯುತ್ತಿದ್ದುವು. ಮನೆ ಯೆಲ್ಲಾ ಲಲಿತೆಯಿಲ್ಲದೆ ಅಳುತ್ತಿದ್ದಂತೆ ಅವನಿಗೆ ಭಾಸವಾಗುತ್ತಿತ್ತು. ಅವಳು

ಸಿಗುವ ಭರವಸೆ ಕಡಿಮೆಯಾಗುತ್ತ ಬಂದಿತು. ಈ ವಿಶಾಲವಾದ ನಗರದಲ್ಲಿ ಅವಳನ್ನು ಹೇಗೆತಾನೆ ಪತ್ತೆಹಚ್ಚಲಾದೀತು? ಅದೂ ಅವಳು ಮನಃಪೂರ್ವಕ ವಾಗಿ ಕಾಣಿಸಿಕೊಳ್ಳದಿರಲು ಪ್ರಯತ್ನಿಸುತ್ತಿರುವಾಗ. ಆದರೂ ರಂಗಣ್ಣ ಆ ಹಂಬಲ ಬಿಡಲಿಲ್ಲ. ಮನೆಗೆ ಬಂದೊಡನೆಯೇ ಗೊತ್ತುಗುರಿ ಇಲ್ಲದೆ ಊರೆಲ್ಲಾ ಸುತ್ತುವನು. ಯಾವ ಹೆಂಗಸರ ಛಾಯೆ ಕಂಡರೂ ಅವರನ್ನು ಹತ್ತಿರ ಹೋಗಿ ನೋಡಿ, ನಗೆಗೀಡಾಗುವನು. ಆದೇಕೊ ಲಲಿತೆಯ ಸಹವಾಸದ ಹುಚ್ಚು ಅವನ ರಕ್ತಗತವಾಗಿತ್ತು. ಆ ಹುಚ್ಚನ್ನು ಎಷ್ಟೇ ಬೆದಕಿನೋಡಿದರೂ ಅದರಲ್ಲಿ ಕಾಮದ ಅಣುವೂ ಇರಲಿಲ್ಲ. ಇದು ಮನಸ್ಸಿನಲ್ಲಿ ಸುಪ್ತವಾಗಿದ್ದ ಕಾಮದ ಫಲ ಎಂದು ಅವನೇ ಎಷ್ಟೋಸಾರೆ ಮನಸ್ಸನ್ನು ಪರೀಕ್ಷಿಸತೊಡಗುವನು. ಆದರೆ ಅದು ನಿಜ ವಾಗಿರಲಿಲ್ಲ. ಒಂದೇ ಸ್ಥಳದಲ್ಲಿ ಹುಟ್ಟಿ, ಸ್ವಲ್ಪ ದೂರ ಒಟ್ಟಿಗೇ ಹರಿದು, ಅಲ್ಲಿಂದ ಮುಂದೆ ಬೇರೆಯಾಗಿ, ಗುಡ್ಡಗಾಡುಗಳಲ್ಲಿ ಹರಿದು, ಬೆಟ್ಟದಿಂದ ಧುಮುಕಿ, ಬಯಲಿ ನಲ್ಲಿ ಹರಿದು ತುಂಗೆ-ಭದ್ರೆಯರು ಸಂಗಮವಾಗಿದ್ದರು.

ಲಲಿತೆ ಹೊರಟುಹೋದದ್ದರಿಂದ ಗಂಡ ಹೆಂಡಿರ ಮಧ್ಯದ ಒಂದು ಕೊಂಡಿ ಹರಿದಂತಾಗಿ ಇಬ್ಬರೂ ಬೇರೆಯಾಗಿಹೋಗಿದ್ದರು. ಲಲಿತೆ ಹೊರಟುಹೋದ ಕ್ಷಣದಲ್ಲಿ ಕಾಮಾಕ್ಷಿ ಸ್ವಲ್ಪ ವ್ಯಸನಪಟ್ಟಳೇನೋ ನಿಜ. ಅವಳು ಹೊರಟುಹೋಗ ಬೇಕೆಂದು ಅವಳು ಇಚ್ಛಿಸಿರಲಿಲ್ಲ. ಆದರೆ ವ್ಯಸನದ ಹಿಂದೆ 'ಪರವಾಯಿಲ್ಲ, ಇನ್ನಾದರೂ ಗಂಡ ತನ್ನನ್ನು ಪ್ರೀತಿಯಿಂದ ಕಂಡಾನು' ಎಂಬ ಸಮಾಧಾನವೂ ಇತ್ತು. ಈ ಸಮಾಧಾನಕ್ಕೆ ಬುಡವಿಲ್ಲವೆನ್ನುವುದು ಅವಳಿಗೆ ತಿಳಿಯಲು ಬಹಳ ಹೊತ್ತು ಬೇಕಾಗಲಿಲ್ಲ. ಲಲಿತೆಯ ಒತ್ತಾಯಕ್ಕಾದರೂ ಹೆಂಡತಿಯೊಡನೆ ಸ್ವಲ್ಪ ಕಾಲ ಹರಟೆ ಹೊಡೆಯುತ್ತಿದ್ದ ರಂಗಣ್ಣ. ಈಗ ಊಟಕ್ಕೆ ಕುಳಿತರೆ ಸಾಕು ಬೇಕು ಎಂದು ಸಹ ಎನ್ನುವುದಿಲ್ಲ. ಮನೆಗೆ ಬಂದವನೇ ಊಟಮಾಡಿ ಮಲಗಿಬಿಡುತ್ತಾನೆ. ಏನಾದರೂ ಕೇಳಿದರೆ 'ಹೂಂ ಅಥವಾ ಊಹುಂ' ಎರಡರ ಹೊರತು ಮೂರನೇ ಶಬ್ದವೇ ಅವನ ಬಾಯಿಂದ ಬರದು. ಏನಾದರೂ ಅಂದರೆ ಹೆಂಡತಿಯನ್ನು ದುರು ಗುಟ್ಟಿಕೊಂಡು ನೋಡುತ್ತಾನೆ. ಕಾಮಾಕ್ಷಿಗೆ ಹೆದರಿಕೆಯಾಗುತ್ತದೆ. ಮರು ಕ್ಷಣವೇ ತಲೆ ತಗ್ಗಿಸಿ ಹೊರಟುಬಿಡುತ್ತಾನೆ.

ಕಾಮಾಕ್ಷಿಗೆ ಇನ್ನೊಂದು ತೊಂದರೆ ಪ್ರಾಪ್ತವಾಯಿತು. ಲಲಿತೆ ಇರುವಾಗ ಮನೆಗೆಲಸದಲ್ಲಿ ಮುಕ್ಕಾಲುಪಾಲು ನೋಡಿಕೊಂಡು ಹೋಗುತ್ತಿದ್ದಳು. ಅದು ಹೇಗೆ ಅಷ್ಟು ಕೆಲಸ ಮುಗಿಸುತ್ತಿದ್ದಳೋ ದೇವರೇಬಲ್ಲ? ಈಗ ಬೆಳಗಿನಿಂದ ಸಂಜೆಯವರೆಗೆ ದುಡಿದರೂ ಅದರಲ್ಲಿ ಕಾಲುಪಾಲುಸಹ ಕಾಮಾಕ್ಷಿ ಮಾಡಲಾರಳು. ಮಾಡಿದ ಕೆಲಸವೂ ಅತೃಪ್ತಿಕರವಾಗಿದೆಯೆನ್ನುವುದು ಅವಳಿಗೇ ಗೊತ್ತಾಗುತ್ತದೆ.

ಮನೆಯೆಲ್ಲಾ ಗಲೀಜಿನಿಂದ ತುಂಬಿಹೋಗಿದೆ. ಮೂಲೆಮೂಲೆಯಲ್ಲಿ ಜೇಡರಪೊರೆಗಳು ನೇತಾಡುತ್ತಿವೆ. ಮನೆತುಂಬ ಸಾಮಾನುಗಳು ಅಸ್ತವ್ಯಸ್ತವಾಗಿ ಬಿದ್ದಿವೆ. ಎಷ್ಟು ಸರಿಯಾಗಿಟ್ಟರೂ ಪುನಃ ಯಾವಾಗಲೋ ತಾನೇ ಅವನ್ನೆಲ್ಲಾ ಚಲ್ಲಾಪಿಲ್ಲಿ ಮಾಡುತ್ತಾಳೆ. ಗಂಡ ಇದಾವುದನ್ನೂ ಗಮನಿಸದಿದ್ದುದರಿಂದ ಪರವಾಯಿಲ್ಲ. ಇಲ್ಲದೇಹೋದರೆ ಏನು ಗತಿ?

ರಂಗಣ್ಣ ಎಲ್ಲಿಯಾದರೂ ತನ್ನನ್ನು ಮೊದಲಿನಂತೆ ತೌರುಮನೆಗೆ ಕಳಿಸಿಬಿಟ್ಟರೆ ಏನು ಗತಿ? ಅದನ್ನು ನೆನಿಸಿಕೊಂಡರೆ ಭಯವಾಗುತ್ತದೆ. ನಿಧಾನವಾಗಿ ಯೋಚಿಸಿ ನೋಡಿದರೆ ತನಗಿಲ್ಲೇನೂ ಕಡಿಮೆಯಾಗಿರಲಿಲ್ಲ.

ಮನೆಯಲ್ಲಿ ಅವಳಿಗೆ ವಿಪರೀತ ಬೇಸರವಾಗುತ್ತದೆ. ಮಾಡುವುದಕ್ಕೆ ಬೇಕಾದಷ್ಟು ಕೆಲಸವಿದ್ದರೂ ಬೇಸರವಾಗುತ್ತದೆ. ಒಂದು ಮಾತಾಡಲು ಸಹ ಯಾರೂ ಇಲ್ಲ. ನೆರೆಹೊರೆಯವರು ಮಾತಾಡಿಸುವುದಿಲ್ಲ. ಹೊತ್ತು ಹೋಗುವುದೇಇಲ್ಲ.

'ಇದೊಂದುಸಾರೆ ಲಲಿತೆ ಬಂದುಬಿಟ್ಟರೆ ಸಾಕಪ್ಪ. ಈ ಸಂಸಾರದ ಸರ್ವಾಧಿಕಾರ ನನಗೆಂದೂ ಬೇಡ' ಎಂದವಳು ಮನಃಪೂರ್ವಕವಾಗಿ ಬಯಸುತ್ತಿದ್ದಾಳೆ.

* * * *

ಹಗಲು ಸರದಿ ಕಳೆಯಿತು. ಸಂಜೆಯ ಸರದಿಯೂ ಮುಗಿಯಿತು. ರಾತ್ರಿಯ ಗೂಬೆ ಸರದಿಯೂ ಕಳೆಯಿತು. ಪುನಃ ಹಗಲು ಸರದಿಗೆ ರಂಗಣ್ಣ ಬಂದಿದ್ದಾನೆ.

ಮನೆಯಿಂದ ರಂಗಣ್ಣ ಹೊರಡುವಾಗ ಬೆಳಕುಬಿಟ್ಟಿರಲಿಲ್ಲ. ವಿಮಾನ ಧಾಳಿಯ ಭಯದಿಂದ ದೀಪಗಳು ಮಂಕಾಗಿದ್ದುವು. ತಣ್ಣನೆ ಗಾಳಿ ಬೀಸುತ್ತಿತ್ತು. ಹತ್ತು ಗಜ ದೂರದಲ್ಲಿನ ಜನರೂ ಕಾಣಿಸುವಂತಿರಲಿಲ್ಲ. ಪಟ್ಟಣದ ಜನಸ್ತೋಮ ಇನ್ನೂ ನಿದ್ರೆಯ ಆಲಿಂಗನದಿಂದ ಹೊರಗೆ ಬಂದಿರಲಿಲ್ಲ. ರೈಲಿಗೆ ಹೋಗುವ ಒಂದೆರಡು ಜಟಕಾಗಳ ಕಟಕಟ ಶಬ್ದ ಮೌನವನ್ನು ಕಲಕುತ್ತಿತ್ತು. ಆ ಕತ್ತಲೆ ಆ ಶಬ್ದವನ್ನು ನುಂಗಿಕೊಂಡುಬಿಡುತ್ತಿತ್ತು.

ರಂಗಣ್ಣ ಅತ್ತಿತ್ತ ನೋಡದೆ, ನೇರವಾಗಿ ಹೋಗುತ್ತಿದ್ದ. ದಾರಿಯ ಬದಿಯಲ್ಲಿ ಏನೋ ಸರಸರ ಶಬ್ದವಾಯಿತು. ತಿರುಗಿ ನೋಡಿದ. ಯಾರೋ ಬೇವಿನ ಸಾಲುಮರದ ಹಿಂದೆ ಮರೆಯಾದಂತೆ ತೋರಿತು. ಮುಂದೆ ಹೋದದ್ದು ಕಾಣಿಸಲಿಲ್ಲ. ರಂಗಣ್ಣನಿಗೆ ಸ್ವಲ್ಪ ಕುತೂಹಲ ಕೆರಳಿತು. ರೈಲಿಗೇನೂ ಹೊತ್ತಾಗಿರಲಿಲ್ಲ. ಈ ದಿನ ಮುಂಚೆಯೇ ಹೊರಟಿದ್ದ. ಒಂದು ನಿಮಿಷ ಅಲ್ಲಿಯೇ ನಿಂತು ವ್ಯಕ್ತಿ ಮರೆಯಾದ ತಾವನ್ನು ನೋಡಿದ. ಆದರೆ ಆ ವ್ಯಕ್ತಿ ಮರೆಯಿಂದ ಹೊರಡಲಿಲ್ಲ.

ಅದೇಕೆ? ಅವನಿಗೆ ಭಯವೇನೂ ಇರಲಿಲ್ಲ. ಆ ವ್ಯಕ್ತಿ ಕಳ್ಳನಾದರೆ ತನ್ನನ್ನೊಂದೂ ಮಾಡಲಾರ. ತನ್ನಂತಹ ಕಾರ್ಖಾನೆ ಕೂಲಿಯನ್ನು ಹಿಡಿಯುವವ ಕಳ್ಳನಲ್ಲ –ಹುಚ್ಚ. ಅವನಿಗೇನು ಸಿಕ್ಕೀತು! ಕಾರ್ಖಾನೆಯಲ್ಲಿ ರಸಾಯನಿಕ ದ್ರವ್ಯಗಳ ಹತ್ತಿರ ಕೆಲಸ ಮಾಡುವಾಗ ತೂತಾಗುವುದೆಂದು ಹಾಕಿಕೊಳ್ಳಲು ಬಗಲಲ್ಲಿ ಅವುಚಿ ಕೊಂಡಿದ್ದ ಒಂದು ಹರಕಲು ಷರಾಯಿ, ಕೈಯಲ್ಲೊಂದು ಊಟದ ಕ್ಯಾರಿಯರ್. ನೋಡಿಯೇಬಿಡೋಣವೆಂದು ಮತ್ತೂ ಸ್ವಲ್ಪ ಹೊತ್ತು ಅಲ್ಲಿಯೇ ನಿಂತ. ಅಷ್ಟ ರಲ್ಲಿ ಬಲಭಾಗದ ರಸ್ತೆಯೊಂದರಿಂದ ಕಾರು ಬಂದಿತು. ಅದರ ಪ್ರಕಾಶ ಮರದ ಮೇಲೆ ಬಿದ್ದಿತು. ಆದರೆ ಕಾರಿನ ದೀಪವೂ ವಿಮಾನಧಾಳಿಯ ಹೆದರಿಕೆಯ ದೆಸೆಯಿಂದ ಮಂಕಾಗಿದ್ದದ್ದರಿಂದ ವ್ಯಕ್ತಿ ಸರಿಯಾಗಿ ಕಾಣಲಿಲ್ಲ. ಆದರೂ ಆ ಸ್ವಲ್ಪದರಲ್ಲಿಯೇ ವ್ಯಕ್ತಿಯ ಗುರುತು ಸಿಕ್ಕಿದಂತೆ ತೋರಿತು. ಅವನು ಮರದ ಹತ್ತಿರ ಹೋದ. ಆದರೆ ವ್ಯಕ್ತಿ ತಪ್ಪಿಸಿಕೊಂಡು ಹೋಗಲು ಬೇಗಬೇಗ ಹೆಜ್ಜೆ ಹಾಕಿತು. ರಂಗಣ್ಣ ಮುಂದೆ ಹೋಗಿ ವ್ಯಕ್ತಿಯ ಕೈಹಿಡಿದುಕೊಂಡ. ವ್ಯಕ್ತಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿತು. ರಂಗಣ್ಣ ಕೈಹಿಡಿತವನ್ನು ಇನ್ನೂ ಭದ್ರವಾಗಿ ಮಾಡಿ ' ಲಲಿತಾ ' ಎಂದ.

ನಿತ್ಯವೂ ಸದ್ದಿಲ್ಲದೆ ಬಂದು ರಂಗಣ್ಣನನ್ನು ದೂರದಿಂದ ನೋಡಿ ಹಿಂತಿರುಗುತ್ತಿದ್ದ ಕಳ್ಳಿ ಇಂದು ಸಿಕ್ಕಿಬಿದ್ದಿದ್ದಳು.

* * * *

ಕಾಮಾಕ್ಷಿ ಮನೆಯಲ್ಲಿ ಹೇಳಿದಳು

' ಅಕ್ಕಾ, ನೀನಿಲ್ಲದಷ್ಟು ದಿನ ಹುಚ್ಚರಂತಿದ್ದರು. ನೀನು ಹೊರಡಬೇಕೆಂದು ನಾನನ್ನಲಿಲ್ಲ. ನಾನೇ ಏನೋ ಅಂದೆನೆಂದು ಅಂದಿನಿಂದ ಇಂದಿನವರೆಗೂ ನನ್ನೊಡನೆ ಮಾತೇ ಆಡಿಲ್ಲ. ನಾನು ಏನು ಹೇಳಿದ್ದರೂ ಮರೆತು ಕ್ಷಮಿಸು. '

' ಛೀ ಹುಚ್ಚಿ, ನೀನು ಏನೂ ಅನ್ನಲಿಲ್ಲ. ನಾನೇ ನಿನ್ನ ದಾರಿಯ ಮುಳ್ಳಾಗ ಬಾರದೆಂದು ಹೊರಟುಹೋದೆ. '

' ಇನ್ನು ಹೊರಟುಹೋಗಬೇಡ ಅಕ್ಕಾ. ನನಗಿಷ್ಟೇ ಸುಖ ಸಾಕು. ಮಿಗಿಲಾದ್ದಕ್ಕೆ ನನ್ನಲ್ಲಿ ಯೋಗ್ಯತೆಯಿಲ್ಲ ಎಂದು ಕಂಡುಕೊಂಡಿದ್ದೇನೆ. '

' ತಂಗಿ ನಿನ್ನ ಸುಖವೇ ನನ್ನ ಸುಖ. ಅದಕ್ಕೆ ಮನಸ್ಸಾಕ್ಷಿಯಾಗಿಯೂ ಪ್ರಯತ್ನಿಸುತ್ತೇನೆ. ಇನ್ನು ಜೀವವಿರುವತನಕ ಎಲ್ಲಿಯೂ ಹೋಗುವುದಿಲ್ಲ.'

ಕೆಲವು ದಿನಗಳು ರಂಗಣ್ಣನ ಸಂಸಾರ ಸುಖಮಯವಾಯಿತು. ಸಂಸಾರದಲ್ಲಿ ವಿರಸವಿರಲಿಲ್ಲ. ಎಲ್ಲರಿಗೂ ತೃಪ್ತಿ ಸಮಾಧಾನಗಳಿದ್ದುವು. ಯುದ್ಧ ಬಿರುಸಿನಿಂದಾಗುತ್ತಿತ್ತು. ಯುದ್ಧದ ನೆಪದಲ್ಲಿ ಕಾಳಸಂತೆಯುವರು ಜನರ ರಕ್ತ ಹೀರತೊಡಗಿದ್ದರು. ಗಂಟೆಗಟ್ಟಲೆ ಅಂಗಡಿಯ ಬಾಗಿಲು ಕಾದರೂ ಸಾಮಾನು ಸಿಗುವಂತಿರಲಿಲ್ಲ. ಬೆಲೆ ಒಂದಕ್ಕೆ ಹತ್ತರಷ್ಟಾಗಿತ್ತು. ಬರುವ ಸಂಬಳ ಏತಕ್ಕೂ ಸಾಲುತ್ತಿರಲಿಲ್ಲ. ಬೆಲೆ ಒಂದಕ್ಕೆ ಹತ್ತರಷ್ಟು ಏರುವಾಗ ಸರ್ಕಾರದ ಒತ್ತಾಯದ ಮೇಲೆ ಕಾರ್ಖಾನೆಯವರು ನಾಲ್ಕಾರು ರೂಪಾಯಿ ತುಟ್ಟಿಭತ್ಯ ಕೊಡುತ್ತಿದ್ದರು. ಅದು ಏತಕ್ಕೆ ಸಾಕಾದೀತು? ಪ್ರಪಂಚದಲ್ಲಿ ಈ ಜೀತಗಾರರೊಬ್ಬರ ಹೊರತಾಗಿ ಮಿಕ್ಕವರೆಲ್ಲಾ ಶ್ರೀಮಂತರಾಗಿರುತ್ತಿದ್ದರು. ಇಂತಹ ಕಠಿಣ ಸ್ಥಿತಿಯಲ್ಲಿಯೂ ಲಲಿತೆ ಅದು ಹೇಗೋ, ಅದು ಯಾವ ಚಾತುರ್ಯದಿಂದಲೋ ಸಂಸಾರವನ್ನು ನಿಭಾಯಿಸುತ್ತಿದ್ದಳು.

* § § *

೨೬

ಸಾವಿರದ ಒಂಭೈನೂರ ನಲ್ವತ್ತೆರಡನೆಯ ಇಸವಿ ಆಗಸ್ಟು ತಿಂಗಳನ್ನು ಹಿಂದೂದೇಶದ ಜನತೆ ರಕ್ತದಕ್ಷರದಲ್ಲಿ ಬರೆದಿಟ್ಟಿತು. ದೇಶದಲ್ಲಿ ಪ್ರಚಂಡ ಬಿರುಗಾಳಿಯೆದ್ದಿತು. ಶತಮಾನಗಳಿಂದ ದಾಸ್ಯದಲ್ಲಿ ತೊಳಲಿದ್ದ ಜನ ಕುದಿದೆದ್ದಿತು. ಸುಪ್ತವಾಗಿದ್ದ ಚೈತನ್ಯ ಜನತೆಯ ನರನಾಡಿಗಳಲ್ಲಿ ಚಲಿಸತೊಡಗಿತು. ಯುವಕ ಯುವತಿಯರು ಗುಂಡಿಗೆದೆಗೊಟ್ಟರು. ನಾಯಕರಿಲ್ಲದ ಅನಾಯಕರಾದ ಜನ ತಮಗೆತಾವೇ ನಾಯಕರಾಗಿ ತಮತಮಗೆ ತೋಚಿದ ರೀತಿಯಲ್ಲಿ ದಬ್ಬಾಳಿಕೆಯನ್ನೆದುರಿಸಿ ನಿಂತರು. ಕ್ರಾಂತಿ ಕಾಳ್ಗಿಚ್ಚಿನಂತೆ ಮೂಲೆಮೂಲೆಗೂ ಪಸರಿಸಿತು. ಈ ಸ್ವಾತಂತ್ರ್ಯ ಯಜ್ಞದಗ್ನಿಕುಂಡದಲ್ಲಿ ಯುವಕರು, ಮುದುಕರು ದೇಹವನ್ನು ಆಹುತಿಗೊಳಿಸಿದರು. ಒಂದು ಕ್ಷಣ ಹಿಂದು ಮುಂದೆ ನೋಡಲಿಲ್ಲ. ಒಂದು ಹನಿ ನೀರು ಕಣ್ಣಿಂದ ಹನಿಯಲಿಲ್ಲ. ಒಂದು ಹೆಜ್ಜೆ ಹಿಂದೆ ಇಡಲಿಲ್ಲ.

ರಂಗಣ್ಣ ನಿಮಿಷ ನಿಮಿಷವೂ ಹೆಚ್ಚುತ್ತಿದ್ದ ಉರಿಯನ್ನು ಕಳವಳದಿಂದ ನೋಡುತ್ತಿದ್ದ. ಅವನ ರಕ್ತ ಕುದಿಯುತ್ತಿದ್ದಿತು. ಈ ಸಮರದಲ್ಲಿ ತನ್ನ ಕರ್ತವ್ಯವೇನು ಎನ್ನುವುದು ತಿಳಿಯದು. ದೂರವಿರಲು ಮನಸ್ಸು ಬರದು. ಅದರಲ್ಲಿ ಮುಂದೆ ಹೋಗಿ ಧುಮುಕಲು ಮಾರ್ಗ ಗೊತ್ತಿಲ್ಲ. ಕಾಲದ ಹಕ್ಕಿ ಹಾರಿ ಹಾರಿ ಹೋಗುತ್ತಿದೆ.

ಗುಂಡುಗಳು ಬಿಸಿರಕ್ತದಿಂದ ನೆನೆದುವು. ಬೀದಿ ಬೀದಿಯ ಧೂಳು ರಕ್ತ

ದಿಂದ ಕೆಸರಾಯಿತು. ಹೂಗಳ ಮೊಗ್ಗೆಗಳು ರಾಶಿರಾಶಿಯಾಗಿ ಬಾಡಿ ಬಿದ್ದುವು. ದೇಶದ ಮೂಲೆಮೂಲೆಯಲ್ಲಿ 'ಭಾರತದಿಂದ ತೊಲಗಿ' 'ವಂದೇಮಾತರಂ' ದಿವ್ಯ ಬೀಜಾಕ್ಷರಗಳು. ಷಂಡೆಯನ್ನು ಕಡುಗಲಿಯನ್ನಾಗಿ ಮಾಡಿವವು.

ಏನುಮಾಡಲಿ? ಏನುಮಾಡಲಿ? ಪ್ರಶ್ನೆ ಗಭೀರವಾಗಿ ಅವನ ಮುಂದೆ ನಿಂತಿತು. ಅವನ ಕಾರ್ಖಾನೆ ಯುದ್ಧೋದ್ಯಮಕ್ಕೆ ನೆರವುಕೊಟ್ಟಿತು. ಅಲ್ಲಿ ತಯಾರಾಗುವ ವಸ್ತುಗಳು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ದೇಶದಲ್ಲಿ ಗುಡುಗುಟ್ಟುತ್ತಿದ್ದ ಗುಂಡುಗಳಲ್ಲಿ ಸೇರಿತ್ತು. ಈಗ ಸುಮ್ಮನಿದ್ದು ದೇಶದ್ರೋಹಿ ಯಾಗಲೆ? ನಾಳೆ ತನ್ನ ಮಕ್ಕಳು ಮೊಮ್ಮಕ್ಕಳು 'ಇವನು ಸ್ವಾತಂತ್ರ್ಯ ಸಮರ ದಲ್ಲಿ ದೇಶದ್ರೋಹಿಯಾದವನ ಪೀಳಿಗೆ' ಎಂದು ಹೇಳಿಸಿಕೊಂಡು ಅವಮಾನದಿಂದ ತಲೆತಗ್ಗಿಸುವಂತೆ ಕುಲಕ್ಕೆ ಕಳಂಕವನ್ನು ಹಚ್ಚಿಬಿಡಲೆ? ಪ್ರಾಯಶಃ ಭಾರತದಲ್ಲಿ ಇದೇ ಕೊನೆಯ ಸ್ವಾತಂತ್ರ್ಯ ಸಮರವಾಗಬಹುದು. ಅದರಲ್ಲಿ ಭಾಗವಹಿಸುವ ಭಾಗ್ಯವನ್ನು ಈಗ ಕಳೆದುಕೊಂಡರೆ ಪುನಃ ಬಂದೀತೋ ಇಲ್ಲವೋ?

ರಂಗಣ್ಣ ಕಾರ್ಖಾನೆಯ ನೌಕರರೊಡನೆ ಈ ವಿಷಯವಾಗಿ ಸಮಾಲೋಚನೆ ನಡೆಸಿದ. ಯಾವುದರಲ್ಲಿ ಹೇಗೆ ಬೇಕಾದರೂ ಇರಲಿ ಈ ವಿಷಯದಲ್ಲಿ ಮಾತ್ರ ಎಲ್ಲರಲ್ಲಿಯೂ ಒಮ್ಮತವಿರಬಹುದೆಂದು ಅವನು ಭಾವಿಸಿದ್ದ. ಆದರೆ ಅದು ತಪ್ಪೆಂದು ತೋರಿತು.

ಅಧಿಕಾರವರ್ಗದವರೊಬ್ಬರೂ ಈ ಚಳುವಳಿಯ ವಿಷಯದಲ್ಲಿ ಸಹಾನುಭೂತಿ ತೋರಿಸಲಿಲ್ಲ. ಅಷ್ಟೇ ಅಲ್ಲ, ಅವರು ಆಂಗ್ಲೇಯರಿಗಿಂತ ಹೆಚ್ಚಾಗಿ ಆಂಗ್ಲೇಯ ರಾಗಿದ್ದರು.

'ಪುಂಡರು ಗಲಭೆ ಪ್ರಾರಂಭಿಸಿದ್ದಾರೆ. ಸಾರ್ವಭೌಮ ಸರ್ಕಾರದವರು ಅದನ್ನು ಹುಟ್ಟಡಗಿಸುತ್ತಿದ್ದಾರೆ. ಅದಕ್ಕೂ ನಮಗೂ ಏನು ಸಂಬಂಧ?'

'ನಮ್ಮ ನಾಯಕರೆಲ್ಲಾ ಸೆರೆಯಲ್ಲಿದ್ದಾರೆ.'

'ಅವರೆಲ್ಲಾ ಹುಚ್ಚರು. ಅಂತಹ ಸುಸಜ್ಜಿತವಾದ ಸರ್ಕಾರಕ್ಕೆ ವಿರುದ್ಧ ವಾಗಿ ಹೋರಾಡಲು ನಮಗೆ ಶಕ್ತಿಯಿದೆಯೆ?'

'ಹೋರಾಟ ನಮ್ಮ ಕರ್ತವ್ಯ. ಫಲಿತಾಂಶ ಏನಾದರೂ ಆಗಲಿ. ಆ ಹೋರಾಟದಿಂದ ನಮ್ಮ ತೃಪ್ತಿಯಾದರೂ ಆದೀತು.'

'ಒಂದುವೇಳೆ ನಮಗೆ ಸ್ವಾತಂತ್ರ್ಯ ಬಂದಿತು ಅನ್ನೋಣ. ಅದಕ್ಕೆ ನಮ್ಮಲ್ಲಿ ಅರ್ಹತೆ ಬೇಕಲ್ಲ. ಈ ಮೂಢಾಚಾರ, ಜಾತಿ ಮತ-ಒಂದು ದಿವಸ ಸಹ ಸಾಧ್ಯ

ವಿಲ್ಲ ನಮ್ಮ ಕೈಲಿ ಆಡಳಿತ ನಡೆಸಲು. ಈ ನಮ್ಮ ಜನ ಗುಲಾಮರಾಗಿರಲು ಯೋಗ್ಯರು.'

'ಹಾಗಿದ್ದರೆ ನಾವು ಎಂದೆಂದಿಗೂ ಗುಲಾಮರಾಗಿರಲು ಪಡೆದವರೇನು?' ಕ್ರಮವಾಗಿ ಇಂಗ್ಲೀಷರು ಶಿಕ್ಷಣ ಕೊಟ್ಟು ನಮಗೆ ತರಪೇತು ಕೊಡುತ್ತಿದ್ದಾರೆ. ನಾವು ಶುದ್ಧಾಂಗವಾಗಿ ಪಾಶ್ಚಿಮಾತ್ಯರನ್ನು ಅನುಕರಿಸಿದಹೊರತು ನಾವು ಯಾವುದಕ್ಕೂ ಅರ್ಹರಾಗೆವು. ಈಗ ಅವರನ್ನು ಹೊರಡಿ ಎನ್ನುವುದು ಎಂತಹ ಮೂರ್ಖತನ? ಪಾಪ, ಅವರು ಯುದ್ಧಮಾಡುತ್ತಿದ್ದಾರೆ. ನಮ್ಮಿಂದಾದಷ್ಟು ಸಹಾಯ ಮಾಡಬೇಕು. ಅವರಾದ್ದರಿಂದ ಇವರನ್ನೆಲ್ಲಾ ಸೆರೆಯಲ್ಲಿಟ್ಟು ಅನ್ನ ಹಾಕುತ್ತಿದ್ದಾರೆ. ಜರ್ಮನಿಯವರಾಗಿದ್ದರೆ ಇವರನ್ನೆಲ್ಲಾ ಗುಂಡಿಟ್ಟು ಸಾಯಿಸಿಬಿಡುತ್ತಿದ್ದರು.

'ಮಹಾತ್ಮ ಗಾಂಧಿಯವರಂತಹವರೇ............'

'ಅವನೊಬ್ಬ ಮಹಾತ್ಮ! ಶುದ್ಧ ಹಲಾಲುಕೋರ. ನೋಡಿದರೆ ಬ್ರಹ್ಮಚಾರಿ. ಒಳಗೊಂದು ಹೊರಗೊಂದು. ಅವನ ಸುತ್ತಲೂ ಯಾವಾಗಲೂ ಹೆಂಗಸರೇ ಇರಬೇಕಂತೆ.'

'ಹೋಗಲಿ ಬಿಡಿ. ಅವರ ವೈರಿಗಳೂ ಅವರ ಸತ್ಯಸಂಧತೆಯನ್ನು ಅಲ್ಲಗಳೆದಿಲ್ಲ.'

ಕನ್ನಡದಲ್ಲಿ ಮಾತಾಡುವುದು ಸಹ ಅವಮಾನವೆಂದು ಅವರು ಇಂಗ್ಲೀಷಿನಲ್ಲಿಯೇ ಮಾತಾಡುತ್ತಿದ್ದರು. ಅವರೊಡನೆ ವಾದಿಸಿ ಫಲವಿರಲಿಲ್ಲ. ಅವರ ರಕ್ತದಲ್ಲಿಯೇ ಗುಲಾಮ ಮನೋಭಾವ ಬೆರಕೆಯಾಗಿತ್ತು.

ಮಧ್ಯಮ ತರಗತಿಯವರೊಡನೆ ಅವನು ಆಲೋಚನೆ ನಡೆಸಿದ. ಅವರಿಗೆ ಚಳುವಳಿಯಲ್ಲೇನೋ ಅಭಿಮಾನವಿತ್ತು. ಆದರೆ ಅವರಿಗೆ ಧೈರ್ಯವಿಲ್ಲ. ಮುಂದೇನಾಗುವುದೋ? ತಮ್ಮ ಸಂಸಾರಕ್ಕೆ ಸೇರಿದವರ ಗತಿಯೇನು? ಅವರಿವರು ಏನು ಹೇಳುತ್ತಾರೊ? ಮಾತಿನಲ್ಲಿ ಅವರು ಒಪ್ಪುವರು. ಕಾರ್ಯರೂಪದಲ್ಲಿ ಮಾತ್ರ ಏನುಮಾಡಲೂ ಅವರು ಹಿಂದೇಟು ಹಾಕುವರು.

ಕೆಳಗಿನ ತರಗತಿಯವರಿಗೆ ಏನೂ ತಿಳಿಯದು. ಯಾರು ಹೇಗೆ ಅಂದರೆ ಆ ಮುಹೂರ್ತದಲ್ಲಿ ಹಾಗೆ ಮಾಡಲುಳ್ಳವರು.

ಇದರಿಂದ ಸಾಮೂಹಿಕವಾಗಿ ಏನುಮಾಡುವುದೂ ಅಲ್ಲಿ ಸಾಧ್ಯವಿಲ್ಲವೆಂದು ಅವನಿಗೆ ತೋರಿತು. ಮೊದಲು ತನ್ನ ವಿಷಯ ನೋಡಿಕೊಳ್ಳೋಣ. ಆಮೇಲೆ ಇತರರೂ ತನ್ನ ಕೆಲಸಕ್ಕೆ ಬೆಂಬಲ ಕೊಟ್ಟರೆ ಒಳ್ಳೆಯದಾಯಿತು.

ಈ ನಿರ್ಧಾರದಂತೆ ಮೊದಲನೆಯ ಹಂತವಾಗಿ ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟ. ರಾಜೀನಾಮೆಯಲ್ಲಿ ಆ ಕಾರ್ಖಾನೆಯಲ್ಲಿ ಆ ಹೊತ್ತಿನಲ್ಲಿ ಕೆಲಸ ಮಾಡುವುದು ದೇಶದ್ರೋಹವೆಂದು ತಾನು ಭಾವಿಸರುವುದಾಗಿ ಹೇಳಿದ್ದ. ಅವನ ರಾಜಿನಾಮೆಯ ವಿಷಯವನ್ನು ಅಫೀಸರ ವರ್ಗದವರು ತುಚ್ಛವಾಗಿ ಕಂಡರು. ಅವನೊಡನೆ ಮಾತಾಡುವುದೂ ಹೀನಾಯವೆಂದು ತಿಳಿದರು. ಉಳಿದವರಲ್ಲಿ ಮಾತ್ರ ಅದು ದೇಶಾಭಿಮಾನವನ್ನು ಕೆರಳಿಸಿತು.

ಮನೆಗೆ ಬಂದು ತಾನು ಕೆಲಸ ಬಿಟ್ಟ ಸಮಾಚಾರವನ್ನು ತಿಳಿಸಿದ. ಲಲಿತೆ ಸಮಾಧಾನದಿಂದ 'ನೀವು ಮಾಡಿದ್ದು ಒಳ್ಳೆಯದ್ದಾಯಿತು' ಎಂದಳು. ಎಂದಾದ ರೊಂದುದಿನ ರೆಂಗಣ್ಣ ಆ ಕೆಲಸ ಬಿಡಲೇಬೇಕಾಗುವುದೆಂದು ಅವಳು ತಿಳಿದಿದ್ದಳು. ಪ್ರತಿದಿನವೂ ದೇಶದಲ್ಲಿ ಹರಡಿದ್ದ ಕಾಳ್ಗಿಚ್ಚಿನ ವಿಷಯ ಅವನು ಮನೆಯಲ್ಲಿ ವಿವರಿಸಿ ಹೇಳುತ್ತಿದ್ದ. ಕೇಳುತ್ತ ಕೇಳುತ್ತ ಇಬ್ಬರೂ ಕಣ್ಣೀರು ಸುರಿಸುತ್ತಿದ್ದರು. ಅವನಂತಹ ಸ್ವಾಭಿಮಾನಿ ಕಾರ್ಖಾನೆಯ ಉದ್ಯೋಗದಲ್ಲಿ ಬಹಳ ದಿನ ಇರುವುದು ಸಾಧ್ಯವಿಲ್ಲವೆಂಬುದು ಖಚಿತವಾಗಿತ್ತು. ಆ ಬಿಸಿಯಲ್ಲಿ ಮುಂದಿನ ವಿಷಯ ಯಾರೂ ಯೋಚಿಸಲಿಲ್ಲ.

ರಂಗಣ್ಣನ ರಾಜೀನಾಮೆ ಕಾರ್ಖಾನೆಯಲ್ಲಿ ಸಂಶಯಾತ್ಮರನ್ನೆಲ್ಲಾ ಸ್ಥಿಮಿತಕ್ಕೆ ತಂದಿತು. ಅಧಿಕಾರಿಗಳ ಮತ್ತು ಆಫೀಸರರ ಮೇಲೆ ಕುದಿಯುತ್ತಿದ್ದ ದ್ವೇಷ ಈ ಸಂದರ್ಭದಲ್ಲಿ ಉರಿದೆದ್ದಿತು. ಮಧ್ಯಮ ಮತ್ತು ಕೆಳತರಗತಿಯ ಕೆಲಸಗಾರರೆಲ್ಲಾ ಮುಷ್ಕರ ಹೂಡಿದರು. ಅವರೆಲ್ಲಾ ಇದ್ದಕ್ಕಿದಂತೆ ತಮ್ಮ ಕೆಲಸಗಳನ್ನು ಬಿಟ್ಟು ಹೊರಗೆ ಬಂದರು. ಗಗನವೆಲ್ಲಾ 'ರಂಗಣ್ಣಾ ಕಿ ಜೈ' 'ಮಹಾತ್ಮ ಗಾಂಧೀಕಿ ಜೈ' ಎಂಬ ಜಯಘೋಷಗಳಿಂದ ತುಂಬಿಹೋಯಿತು. ಕಾರ್ಖಾನೆಯ ಮುಂದಿನ ಮೈದಾನದಲ್ಲಿ ಅವರೆಲ್ಲಾ ನೆರೆದು ನಿರ್ಣಯಗಳನ್ನು 'ಪಾಸು' ಮಾಡಿದರು. ಈ ಮುಷ್ಕರಕ್ಕೆ ಒಂದು ಕಮಿಟಿಯಾಯಿತು. ಕಾಖಾನೆಯವರಿಗೆ ಅವರು 'ಕಾರ್ಖಾನೆಯ ಸಾಮಾನು ಇಂಡಿಯಾ ಸರ್ಕಾರಕ್ಕೆ ಸಕಬರಾಜು ಮಾಡುವುದಿಲ್ಲ' ವೆಂದು ಭರವಸೆ ಕೊಟ್ಟಹೊರತು ಕೆಲಸಕ್ಕೆ ಹಿಂತಿರುಗುವುದಿಲ್ಲವೆಂಬ ನಿರ್ಣಯವನ್ನು ಕಳಿಸಿಕೊಟ್ಟರು. ಎಲ್ಲರಿಗೂ ತಾವು ದೇಶಕ್ಕೆ ತಮ್ಮಿಂದ ಸಲ್ಲಬೇಕಾದ ಕಾಣಿಕೆ ಸಲ್ಲಿಸಿ ಕೃತಕೃತ್ಯರಾದೆವೆಂದು ತೃಪ್ತಿಯಾಯಿತು.

ಆ ಸಾಮೂಹಿಕ ಹುಮ್ಮಸ್ಸಿನಲ್ಲಿ ಕೆಲವರ ಹೇಡಿತನ ಕೊಚ್ಚಿಹೋಯಿತು. ಯಾರೂ ಮುಂದಿನ ವಿಷಯವನ್ನು ಹೆಚ್ಚಾಗಿ ಯೋಚಿಸಲಿಲ್ಲ. ಎಲ್ಲರಿಗಾದದ್ದು ತಮಗಾಗುತ್ತದೆ. ಪ್ರಪಂಚ ವಿಶಾಲವಾಗಿದೆ. ಉದ್ಯೋಗಗಳು ಅಪರಿಮಿತವಾಗಿವೆ. ಅದಕ್ಕೇಕೆ ಚಿಂತೆ?

ಅಂದಿನ ದಿನವೆಲ್ಲಾ ಆಫೀಸರ ವರ್ಗದವರೇ ಅವಶ್ಯಕವಾದ ಕೆಲಸಗಳನ್ನು ಮಾಡಿದರು. ಕಾರ್ಖಾನೆ ಸೇರಿದಾರಭ್ಯ ಕೈ ಉಗುರಿಗೆ ಮಣ್ಣು ಸೋಕಿಸದಿದ್ದ ಗೋವಿಂದರಾಯರು ಬಾಯಿಲರಿಗೆ ಕಲ್ಲಿದ್ದಲು ಹೊತ್ತು ತುಂಬಿದರು. ಕೂಲಿಯವರ ಕೈಲಿ ಮಾತಾಡುವುದೇ ಅವಮಾನವೆಂದು ತಿಳಿದಿದ್ದ ಐಯರು ಮೈ ಕೈ ಎಣ್ಣೆ ಮಾಡಿಕೊಂಡು ಯಂತ್ರವನ್ನೊರೆಸಿದರು. ಮೂರುಹೊತ್ತೂ ಕೈ ಕುತ್ತಿಗೆ ಮುಖಗಳಿಗೆ ಸ್ನೋ, ಪೌಡರು ಹಚ್ಚುತ್ತಿದ್ದ ಅಯ್ಯನವರು ಷವೆಲ್ ಹಿಡಿದು ಮೈ ಕೈಯೆಲ್ಲಾ ಕೊಚ್ಚೆ ಮಾಡಿಕೊಂಡರು. ಸಿಲ್ಕು ಸೂಟುಗಳೂ, ಸರ್ಜ್ ಕೋಟುಗಳೂ, ಅಂದು ಕುಲಗೆಟ್ಟುಹೋದುವು. ಯಾರಿಲ್ಲದಿದ್ದರೂ ಪರವಾಯಿಲ್ಲ. ತಾವೇ ಕಾರ್ಖಾನೆಯನ್ನು ನಡೆಸಿ 'ಮಹಾಮಹಿಮರಾದ ಬ್ರಿಟಿಷ್ ಸಾಮ್ರಾಟರ' ಕೈಂಕರ್ಯವನ್ನು ನಡೆಸುತ್ತೇವೆಂದು ಪಣತೊಟ್ಟಿದ್ದ ಈ ದೇಶಭಕ್ತರು ಸಂಜೆಯಾಗುವ ಹೊತ್ತಿಗೆ ಸುಸ್ತಾಗಿಹೋದರು. ಈ ಸುಸ್ತಿನ ಪರಿಹಾರಕ್ಕೋಸ್ಕರ ಕಾರ್ಖಾನೆಯ ಕಾರಿನಲ್ಲಿ ಬೆಂಗಳೂರಿಗೆ ಹೋಗಿ, ಎರಡೆರಡು ಬಾಟ್ಲು ಬೀರು ಹೊಡೆದು, ದನವಿನ ಮಾಂಸ ತಿಂದು, ಬಾಯಲ್ಲೊಂದು ಚುಟ್ಟಾ ಹತ್ತಿಸಿ ಕಬ್ಬನ್‌ಪಾರ್ಕ್‌ನಲ್ಲೆಲ್ಲಾ ಪುರೆದಾಡಿದರು. ಆದರೆ ಇವರೆಂತಹ ಅಪ್ರತಿಮಸೇವೆ ಮಾಡಿರುವರೆಂಬ ಮಹದ್ವಿಷಯವನ್ನು ಅಲ್ಲಿಯವರ್‍ಯಾರೂ ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಜನರ ರಕ್ತದಲ್ಲಿ ಕೃತಘ್ನತೆ ಸೇರಿಹೋಗಿದೆ.

ಕಾರ್ಖಾನೆಯ ಅಧ್ಯಕ್ಷರು ಮುಷ್ಕರದ ವರ್ತಮಾನ ತಿಳಿದ ಐದುನಿಮಿಷದಲ್ಲಿ ಬೆಂಗಳೂರಿನಿಂದ ಕಾರ್ಖಾನೆಗೆ ಓಡಿಬಂದರು. ಕಾರ್ಖಾನೆಯ ಮ್ಯಾನೇಜರರು ಅವರಿಗೆ ಬೇಗ ವರ್ತಮಾನ ತಿಳಿಸಲಿಲ್ಲ. ಅವರ ಯತ್ನವೆಲ್ಲಾ ಈ ಮುಷ್ಕರದ ಮುಖಂಡರೆಂಬುವರನ್ನು ಹಿಡಿದು ಜೈಲಿಗಟ್ಟಬೇಕೆಂದು. ಆದರೆ ಪೋಲೀಸು ಅಧಿಕಾರಿಗಳು 'ಅವರಿಗೆ ಕೆಲಸಮಾಡಲಿಷ್ಟವಿಲ್ಲ. ಕೆಲಸ ಬಿಟ್ಟಿದ್ದಾರೆ. ಅವರನ್ನು ಕೈದುಮಾಡಲು ನನಗೆ ಅಧಿಕಾರವಿಲ್ಲ. ನೀವು ಬರೆದುಕೊಟ್ಟರೆ ನ್ಯಾಯಾಂಗ ಮಂತ್ರಿಗಳ ಅನುಮತಿ ಪಡೆದು ಮುಂದುವರಿಯುತ್ತೇನೆ' ಎಂದರು. ಮ್ಯಾನೇಜರರು ಪೆಚ್ಚುಮುಖದಿಂದ ಹಿಂತಿರುಗಿ ಅಧ್ಯಕ್ಷರಿಗೆ ವಿಷಯ ವರದಿ ಮಾಡಿದರು.

ಅಧ್ಯಕ್ಷರು ಬರುವ ಹೊತ್ತಿಗೆ ಕಾರ್ಖಾನೆ ಹಾಳು ಸುರಿಯುತ್ತಿತ್ತು. ಆಫೀಸರರುಗಳ ಮುತುವರ್ಜಿಯನ್ನು ಅವರು ಮೆಚ್ಚಲಿಲ್ಲ. ಇದೆಲ್ಲಾ ರಂಗಣ್ಣನಂತಹ ಕೇಡಿಯ ಕೆಲಸವೆಂಬುದಕ್ಕೆ ಅವರು ಪುರಸ್ಕಾರ ಕೊಡಲಿಲ್ಲ.

'ಇಷ್ಟುಜನ ಅವನೊಬ್ಬನನ್ನು ಹಿಂಬಾಲಿಸಿದ್ದಾರೆ. ನಿಮಗ್ಯಾರಿಗಾದರೂ ಅಂತಹ ಶಕ್ತಿಯಿದೆಯೇ?' ಎಂದು ಆಫೀಸರುಗಳನ್ನು ಹೀಯಾಳಿಸಿದರು. ಅವರು ಮುಖ ತಗ್ಗಿಸಿದರು.

'ಇಲ್ಲಿ ಈ ದಿನ ಮುಷ್ಕರ ನಡೆದದ್ದು ಆಶ್ಚರ್ಯವಲ್ಲ. ಇದಕ್ಕೆ ಮೊದಲೇ ನಡೆಯದಿದ್ದುದೇ ಆಶ್ಚರ್ಯ. ದೇಶದಲ್ಲಿ ಇದು ಪರ್ವಕಾಲ. ಯಾವುದು ನ್ಯಾಯ ಯಾವುದು ಅನ್ಯಾಯ ಸ್ವಲ್ಪ ನಿರ್ಧರಿಸುವುದು ಕಷ್ಟ. ಆದರೆ ಬಹುಮತದವರು ಹೇಗೆ ಮಾಡುತ್ತಾರೊ ಅದರಂತೆ ಮಾಡುವುದು ಒಳಿತು. ಒಳಿತೋ ಕೆಡುಕೋ ಉಳಿದ ವರಿಗಾದದ್ದು ತನಗಾಗುತ್ತದೆ ಎಂದಿರುವುದು ಬಿಟ್ಟು ಕರಿಯ ಕುರಿಯಾಗುಳಿಯು ವುದು ನೀಚತನ. ತಾತಾಕಂಪನಿಯಂತಹವರೇ ನಿಂತು ಜನರನ್ನು ಹುರಿದುಂಬಿಸಿ ಮುಷ್ಕರ ಹೂಡಿಸಿ ದೇಶದ ಸಹಾನುಭೂತಿ ಈ ಚಳುವಳಿಯ ಕಡೆಗಿದೆ ಎಂದು ಪ್ರದರ್ಶಿಸಲು ಪ್ರಯತ್ನಿಸುವಾಗ ನಿಮ್ಮಂತಹವರು ಗುಲಾಮರಂತೆ ವರ್ತಿ ಸುವುದು ನನಗೆ ಬಹಳ ಹೇಸಿಕೆಯಾಗುತ್ತದೆ. ನಾನೂ ದೇಶದೇಶ ನೋಡಿದ್ದೇನೆ. ಈ ಅಲ್ಪತನ ಯಾರಲ್ಲಿಯೂ ಇಲ್ಲ. ಹೊಟ್ಟೆಯಪಾಡಿಗೆ ಏನೇನೋ ಮಾಡುತ್ತೇವೆ. ಆದರೆ ಏನಾದರೂ ಮಾಡುತ್ತೇವೆ ಎನ್ನುವುದು ಹೇಡಿತನ. ಈ ಸಾವಿರಜನ ಗಳಿಗಾದ ಗತಿ ನಿಮಗೂ ಆಗುತ್ತಿತ್ತು. ಅವರದ್ದು ನಿಮ್ಮಂತಹವೇ ರಕ್ತವಲ್ಲ ವೇನು? ಸಾವಿರ ಜನ ಸತ್ತು ನಾವು ಮಾತ್ರ ಬದುಕುತ್ತೇವೆಂದು ಹೇಳುವ ನಿಮ್ಮ ನೀಚತನ ನಾನು ನೋಡಲಾರೆ. ನಿಮ್ಮಂತಹ ದೇಶದ್ರೋಹಿಗಳಿನ್ನೊಬ್ಬರಿಲ್ಲ.'

ಆಫೀಸರುಗಳು ಬದುಕಿದ್ದೂ ಸತ್ತವರಾದರು. ಅವರಿಗೆ ಪುಣ್ಯವೂ ಇಲ್ಲ, ಪುರುಷಾರ್ಥವೂ ಇಲ್ಲವಾಗಿಹೋಯಿತು.

ಅಧ್ಯಕ್ಷರು ಮ್ಯಾನೇಜರನ್ನು ಕರೆದು ಕಾರ್ಖಾನೆಗೆ ಮೂರು ದಿನ ರಜಾ ಕೊಡಲು ಹೇಳಿದರು. ಆಮೇಲೆ ಮುಷ್ಕರದ ಮುಖಂಡರನ್ನು ಒಬ್ಬೊಬ್ಬರನ್ನಾಗಿ ಕರೆಸಿ ಮಾತಾಡಿದರು.

'ನಿಮ್ಮ ಮುಷ್ಕರದ ವಿಷಯದಲ್ಲಿ ನಮಗೆ ಸಹಾನುಭೂತಿಯಿದೆ. ಈಗಿನ ಆಡಳಿತಕ್ಕೆ ನೀವು ವಿರೋಧಿಗಳೆಂಬುದನ್ನು ನೀವು ತೋರಿಸಿಯಾಯಿತು. ಮುಂದೆ ಇನ್ನೇನು ಮಾಡಬೇಕೆನ್ನುತ್ತೀರಿ?'

'ಕಾರ್ಖಾನೆಯ ಒಂದು ಸಾಮಾನೂ ಯುದ್ಧೋದ್ಯಮಕ್ಕೆ ಹೋಗಕೂಡದು. ಹಾಗಾದರೆ ಪುನಃ ನಾವು ಕೆಲಸ ಮಾಡುತ್ತೇವೆ.'

'ಅದು ಸಾಧ್ಯವೆ? ಕೊಡುವುದೂ ಬಿಡುವುದೂ ನಮ್ಮ ಕೈಯಲ್ಲಿದೆಯೆ? ಕೊಡದಿದ್ದರೆ ಕಿತ್ತುಕೊಳ್ಳುತ್ತಾರೆ.'

'ಕಾರ್ಖಾನೆಯನ್ನೇ ಮುಚ್ಚಿಬಿಡಿ.'

'ಅದರಿಂದೇನಾಯಿತು. ಅವರೇ ಜನರನ್ನಿಟ್ಟು ಇದನ್ನು ನಡೆಸುತ್ತಾರೆ. ಅದರಿಂದ ಕೆಲವರ ಜೀವನಕ್ಕೆ ಕಲ್ಲು ಬಿದ್ದಂತಾಯಿತೇ ಹೊರತು ಲಾಭವೇ ನಾದರೂ ಉಂಟೇನು?'

'ಈ ಹಲವರ ರಕ್ತದಿಂದ ತೋಯ್ದ ಕೈಯಲ್ಲಿ ಮೃಷ್ಟಾನ್ನ ಉಣ್ಣುವುದಕ್ಕಿಂತ ಉಪವಾಸ ಸಾಯುವುದು ಮೇಲು.'

'ನೀವು ಹೇಳುವುದೇನೋ ಮಾತಿಗೆ ಚೆನ್ನ. ಆದರೆ ಕಾರ್ಯತಃ ಅದು ನಡೆಯುವುದೇನು?'

'ಇಲ್ಲ, ಆಗುವುದಿಲ್ಲ. ನಾವು ನಿರ್ಧಾರ ಮಾಡಿದ್ದೇವೆ.'

ಅಧ್ಯಕ್ಷರು ಬಂದಂತೆ ಬೆಂಗಳೂರಿಗೆ ಹಿಂತಿರುಗಿದರು. ಅವರ ಮನಸ್ಸೂ ಇಬ್ಬದಿಯಾಗಿತ್ತು. ಇನ್ನೂ ಎರಡು ದಿನಗಳು ಕಳೆದುವು. ಮ್ಯಾನೇಜರರು ಪೋಲೀಸು ಶಿಬ್ಬಂದಿಯನ್ನು ಕರೆಯಿಸಿದರು. ರಿಸರ್ವ್ ಪೋಲೀಸಿನವರು ಬಂದೂಕಿನೊಂದಿಗೆ ಕಾರ್ಖಾನೆಯ ಬಾಗಿಲು ಬಾಗಿಲುಗಳಲ್ಲಿ ಪಹರೆ ಕೊಡುತ್ತಿದ್ದರು. ಮ್ಯಾನೇಜರಿಗೆ ಅಧ್ಯಕ್ಷರ ಈ ಧೋರಣೆ ಸರಿಬೀಳಲಿಲ್ಲ. ಅವರೇ ಸಂಧಿವಿಗ್ರಹಗಳಲ್ಲಿ ತೊಡಗಿದರು. ಅವರ ಬಂಧುಜನ—ಅವರು ಬೇಕಾದಷ್ಟಿದ್ದರು ಕಾರ್ಖಾನೆಯಲ್ಲಿ—ಮೆಲ್ಲನೆ ಒಬ್ಬೊಬ್ಬರಾಗಿ ಹಿಂಬಾಗಿಲಿಂದ ಒಳಗೆ ಬಂದರು.

ಇನ್ನೂ ಎರಡು ದಿನ ಕಳೆಯಿತು. ಕ್ರಮಕ್ರಮವಾಗಿ ಮುಷ್ಕರದ ರಾಷ್ಟ್ರೀಯ ರೂಪ ಮಾಯವಾಗುತ್ತ ಬಂತು. ಅದು ಅಧಿಕಾರವರ್ಗದವರ ಮೇಲಿನ ದ್ವೇಷದ ರೂಪ ತಳೆಯುತ್ತಿತ್ತು. ಕೆಳಗಿನ ಕೆಲಸಗಾರರ ಕುಂದುಕೊರತೆಗಳನ್ನು ಪರಿಶೀಲಿಸುವುದಾಗಿ ಅಧ್ಯಕ್ಷರು ಭರವಸೆಯಿತ್ತರು. ಅವರೆದುರಿಗೆ ಅಧಿಕಾರವರ್ಗದವರನ್ನು ನಿರ್ಭೀತಿಯಿಂದ ಬಯಲಿಗೆಳೆದರು. ಇದುವರೆಗೆ ಅವರು ಕೊಟ್ಟಿದ್ದ ಕಿರುಕುಳವನ್ನು, ಮಾಡಿದ್ದ ಕೇಡನ್ನು ಒಂದೂ ಬಿಡದೆ ದೂರು ಕೊಟ್ಟರು. ಅಧ್ಯಕ್ಷರಿಗೆ ಜನರಲ್ಲಾದ ಈ ಪರಿವರ್ತನೆಗೆ ಬಹಳ ಖೇದವನ್ನುಂಟುಮಾಡಿತು. ಒಳ್ಳೆಯ ಉದ್ದೇಶದಿಂದ ಪ್ರಾರಂಭವಾದ ಈ ಮುಷ್ಕರ ಈ ರೀತಿ ಕೊನೆಗೊಳ್ಳುವುದರಲ್ಲಿ ಅವರಿಗೆ ಸಂತೋಷವಿರಲಿಲ್ಲ. ಆದರೆ ತಮ್ಮ ಕರ್ತವ್ಯವನ್ನವರು ಮಾಡಲೇಬೇಕಾಯಿತು.

* * * *

ಈಗ ರಂಗಣ್ಣ ಪೂರ್ಣ ಸುಖಿಯಾದ. ಅವನಿಗೀಗ ಚಳುವಳಿಯ ಹಲವಾರು ಜನಗಳನ್ನು ಸಂಧಿಸಿ ಚರ್ಚಿಸುವುದೇ ಕೆಲಸ. ಸುದ್ದಿಗಳು ಸರಿಯಾಗಿ ಬರುತ್ತಿರಲಿಲ್ಲ. ಸುಳ್ಳು ಸುದ್ದಿಗಳು ಹೇರಳವಾಗಿದ್ದುವು. ಗಾಂಧೀಜಿ ಜೈಲಿಗೆ ಹೋಗುವ ಮುನ್ನ ಹಲವಾರು ಕಾರ್ಯಕ್ರಮಗಳು ರೂಪುತಾಳಿದ್ದುವು. ಅವೆಲ್ಲಾ ಅಹಿಂಸಾಯುತವಾಗಿರಲಿಲ್ಲ. ಅದಕ್ಕೆಲ್ಲಾ ಗಾಂಧೀಜಿ ಒಪ್ಪಿಗೆ ಕೊಟ್ಟಿದ್ದರೆಂದು ಹೇಳುವುದು ಕಷ್ಟವಾಗಿತ್ತು. ವಿಷಯಗಳು ಇಷ್ಟು ಅವ್ಯವಸ್ಥೆ ಹೊಂದಿರುವಾಗ

ಮೊದಲು ಜನರಲ್ಲಿ ಶಿಸ್ತು ಮತ್ತು ಅಹಿಂಸೆಯನ್ನು ಕಾಪಾಡುವುದು ಅವಶ್ಯಕವಾಗಿತ್ತು. ಅನಾವಶ್ಯಕವಾಗಿ ಜನರು ಪ್ರಾಣತ್ಯಾಗ ಮಾಡುವುದರಿಂದ ಯಾವ ಪುರುಷಾರ್ಥವೂ ಇರಲಿಲ್ಲ. ಈ ವ್ಯವಸ್ಥೆಯಲ್ಲಿ ರಂಗಣ್ಣ ತೊಡಗಿದ.

ಅವನಿಗೆ ಕಾರ್ಖಾನೆಯಲ್ಲಿನ ಮುಷ್ಕರದ ಬೆಳವಣಿಗೆ ವರದಿಯಾಗುತ್ತಿತ್ತು. ಅಲ್ಲಿಯ ಮುಷ್ಕರ ಬಹಳದಿನ ಬಿಗಿಯಾಗಿರಲಾರದೆಂದು ಅವನಿಗೆ ಗೊತ್ತಿತ್ತು. ಅದು ಸಾಧ್ಯವೂ ಇರಲಿಲ್ಲ.

ರಾಮಯ್ಯ ಒಬ್ಬ ಕೂಲಿ. ಕೂಲಿಯಾದರೂ ತಕ್ಕಮಟ್ಟಿಗೆ ವಿದ್ಯಾವಂತ. ಪ್ರಗತಿಶೀಲ. ಆದರವನಿಗೆ ಮೂರು ಮಕ್ಕಳು. ಮೊದಲಲ್ಲಿ ಅವನೂ ಹುಮ್ಮಸ್ಸಿನಿಂದ ಚಳುವಳಿಯ ಮುಂಚೂಣಿಯಲ್ಲೇ ನಡೆದ. ಆದರೆ ಎಷ್ಟು ದಿವಸ? ಮನೆಯಲ್ಲಿ ಉಪವಾಸ ಪ್ರಾರಂಭವಾಯಿತು. ಮನಸ್ಸು ಹಟವಾದಿಯಾಗಿತ್ತು. ದೇಹ ದ್ರೋಹಿಯಾಯಿತು. ಅವನು ರಂಗಣ್ಣನನ್ನು ಕಂಡು ತನ್ನ ಈ ದುಃಸ್ಥಿತಿ ವಿವರಿಸಿದ. ಈಗ ತಾನು ಮಾಡುವುದೇನು? ಉಪವಾಸ ಸಾಯುವುದೇ? ತನ್ನ ಹೆಂಡತಿ ಮಕ್ಕಳನ್ನು ಉಪವಾಸ ಸಾಯಿಸುವುದೇ? ಸತ್ತುದರಿಂದೇನಾದೀತು? ರಂಗಣ್ಣ ಅವನಿಗೆ ಧೈರ್ಯ ಹೇಳಿ ಕಳಿಸಿದ.

ಎರಡು ದಿನಗಳಲ್ಲಿ ಕ್ರಾಂತಿಕಾರ, ಸ್ವಾಮಿಭಕ್ತನಾದ. ಮನುಷ್ಯನನ್ನು ಹೊಟ್ಟೆ ಯಾವ ಸ್ಥಿತಿಗೆ ಬೇಕಾದರೂ ತಂದೀತು. ರಾಮಯ್ಯ ಮೂರನೆಯ ದಿವಸ ಕೆಲಸಕ್ಕೆ ಹೋದ. ಜೊತೆಯವರು ಹೀಯಾಳಿಸಿದರು. ಆದರೆ ರಾಮಯ್ಯ ಅವರಿಗೆ ಹೇಳಿದ;

'ಬಡವನಿಗೆ ಹೊಟ್ಟೆಯೊಂದೇ ದೇವರು. ಅದೊಂದೇ ಧ್ಯೇಯ.' ಅವನದನ್ನು ಬಹಳ ನಿರಾಶೆಯಿಂದ ಹೇಳಿರಬೇಕು.

ರಾಮಯ್ಯನಿಗಾದ ಪರಿಸ್ಥಿತಿ ರಂಗಣ್ಣನನ್ನು ಯೋಚನೆಗೀಡುಮಾಡಿತು. ಲಲಿತೆ ಅವನಿಗೆ ಧೈರ್ಯ ಹೇಳಿದಳು.

'ಹುಟ್ಟಿಸಿದ ದೇವರು ಹುಲ್ಲು ಮೇಯಿಸಲಾರ. ಒಂದುವೇಳೆ ಮೇಯಿಸಿದರೂ ಮೇಯಿಸಲಿ. ಪ್ರಪಂಚದಲ್ಲಿ ಅಸಂಖ್ಯಾತ ಜನ ಹುಟ್ಟಿ ಸತ್ತಿದ್ದಾರೆ. ಆದುದರಿಂದ ಒಬ್ಬ ಮಾನವನ ಅಸ್ತಿತ್ವ ಅಂತಹ ಮಹತ್ವದ್ದೇನೂ ಅಲ್ಲ.'

ಕಾರ್ಖಾನೆಯ ಮುಷ್ಕರ ಕೊನೆಗಂಡುದರ ಸುದ್ದಿ ಬಂದಿತು. ಆಮೇಲೆ ಯಾರೂ ರಂಗಣ್ಣನನ್ನು ನೋಡಲು ಬರಲಿಲ್ಲ. ಇನ್ನು ಕಾರ್ಖಾನೆಯ ಜೀತಗಾರರಾದ ಅವರಿಗೂ ಅದನ್ನು ಬಿಟ್ಟ ರಂಗಣ್ಣನಿಗೂ ಏನು ಸಂಬಂಧ? ಎಷ್ಟು ಬೇಗ ಜನರು ಒಬ್ಬರನ್ನೊಬ್ಬರು ಮರೆತುಬಿಡುತ್ತಾರೆ?

ಅವನಿಗೆ ಈ ವಿಷಯ ಹೆಚ್ಚು ಯೋಚಿಸಲು ಅವಕಾಶ ಸಿಗಲಿಲ್ಲ. ಒಂದು ದಿವಸ ಬೆಳಕು ಬಿಡುವ ಮೊದಲೇ ಅವನಿಗೆ ಜೈಲಿನ ಕರೆ ಸಿದ್ಧವಾಗಿತ್ತು. ಕಾಮಾಕ್ಷಿ ಮನೆಯ ಮುಂದೆ ಪೋಲೀಸಿನವನನ್ನು ಕಂಡು ಗೋಳೋ ಎಂದು ಅಳುತ್ತ ಕುಳಿತಳು. ಅವಳಿಗೆ ರಂಗಣ್ಣನ ಈ ನಡವಳಿಕೆ ಅರ್ಥವೂ ಆಗಿರಲಿಲ್ಲ. ಒಪ್ಪಿಗೆಯೂ ಆಗಿರಲಿಲ್ಲ. ಅಂತಹದೆಲ್ಲ ನಮಗೆಲ್ಲಿ ಎಂದವಳು ತಿಳಿದಿದ್ದಳು. ಲಲಿತೆಗೆ ಬಹಳ ದುಃಖವಾಯಿತು. ಜೈಲಿನಲ್ಲಿ ಅವನೆಷ್ಟು ಕಷ್ಟಪಡಬೇಕಾಗುವುದೋ? ಕೊನೆಯಲ್ಲಿ ತನ್ನ ಕಷ್ಟದ ಫಲ ಏನೂ ಇಲ್ಲವೆಂಬ ಕಟುತರ ನಿರಾಶೆಗೂ ಗುರಿಯಾಗಬೇಕಾಗಬಹುದು. ಗಟ್ಟಿಮನಸ್ಸು ಮಾಡಿಕೊಂಡು ಅವಳು ರಂಗಣ್ಣನಿಗೆ ಹೇಳಿದಳು :

'ಹೋಗಿಬನ್ನಿ ಭಾವ. ದೊಡ್ಡ ಧ್ಯೇಯಕ್ಕೋಸ್ಕರ ಹೋಗುತ್ತಿದ್ದೀರಿ. ನಮ್ಮ ಯೋಚನೆ ಸ್ವಲ್ಪವೂ ಇಟ್ಟುಕೊಳ್ಳಬೇಡಿ. ಎಲ್ಲವನ್ನೂ ನಾನು ನೋಡಿಕೊಳ್ಳುತ್ತೇನೆ.'

ಲಲಿತೆ ಕಾಮಾಕ್ಷಿಯನ್ನು 'ತೌರುಮನೆಗೆ ಹೋಗುತ್ತೀಯಾ? ಬಂದು ಕರೆದುಕೊಂಡು ಹೋಗುವಂತೆ ಕಾಗದವನ್ನಾದರೂ ಬರೆ' ಎಂದಳು.

ಕಾಮಾಕ್ಷಿ: 'ನಾನು ಹೋಗುವುದಿಲ್ಲ. ಇಲ್ಲೇ ಇರುತ್ತೇನೆ' ಎಂದಳು.

ಲಲಿತೆಗೆ ಸಂತೋಷವೇ ಆಯಿತು. ಕಾಮಾಕ್ಷಿ ರಂಗಣ್ಣನಿಗೆ ತಕ್ಕ ಹೆಂಡತಿಯಾದಾಳು ಎಂಬ ಆಸೆ ಕೊನರಿತು. ಕಾಮಾಕ್ಷಿ ತೌರಿಗೆ ಹೋಗುವುದಿಲ್ಲವೆಂಬುದಕ್ಕೆ ಗಂಡನಮೇಲಿನ ಪ್ರೀತಿಯೊಂದೇ ಕಾರಣವಾಗಿರಲಿಲ್ಲ. ಅಲ್ಲಿಗೆ ಹೋಗಿ 'ಇವಳ ಗಂಡ ಜೈಲಿಗೆ ಹೋಗಿದ್ದಾನೆ' ಎಂದು ಹಂಗಿಸಿಕೊಳ್ಳಬೇಕಾದೀತು ಎಂಬ ಹೆದರಿಕೆ. ಅಲ್ಲಿ ಜೈಲು ಎಂದರೆ ಕಳ್ಳಕಾಕರ ಮನೆ ಎಂಬ ಭಾವನೆ ಪ್ರಚುರವಾಗಿತ್ತು.

* * * *

ಮನೆಯಲ್ಲಿ ಲಲಿತಾ-ಕಾಮಾಕ್ಷಿ ಇವರಿಬ್ಬರೆ. ಸಂಸಾರದ ಭಾರವನ್ನೆಲ್ಲ ಲಲಿತೆ ಹೊತ್ತಳು. ಯುದ್ಧದ ಕಾಲದಲ್ಲಿ ಪಟ್ಟಣದಲ್ಲಿ ಇಬ್ಬರು ಹೆಂಗಸರು ಜೀವಿಸುವುದು ಅಂತಹ ಸುಲಭವಾಗಿರಲಿಲ್ಲ. ಗೌರವಸ್ಥರಾದ ಹೆಂಗಸರು ಮಾಡಬಹುದಾದ ಉದ್ಯೋಗಗಳು ಬಹಳವಿಲ್ಲ. ಹಿಂದೆ ಇಂತಹದೇ ಸಂದರ್ಭದಲ್ಲಿ ಇಬ್ಬರ ಜೀವನಕ್ಕಾಗಿ ಅವಳು ಬೇರೆ ದಾರಿ ಕಾಣದೇ ದೇಹವಿಕ್ರಯಕ್ಕೆ ತೊಡಗಿದ್ದಳು. ಈಗ ಅವಳಿಗೆ ಆ ದಾರಿ ಕಟ್ಟಿಹೋಗಿದೆ. ಈಗ ಅವಳು ದೇಹಶ್ರಮವನ್ನು ಲೆಕ್ಕಿಸದೆ ದುಡಿಯತೊಡಗಿದಳು.

ಕಾಮಾಕ್ಷಿಗೆ ಯಾವ ಕೆಲಸವೂ ಬರದು. ಬಂದರೂ ಇನ್ನೊಬ್ಬರ ಮನೆಯಲ್ಲಿ ಹೋಗಿ ಮಾಡಲು ಅವಮಾನ; ಅಭ್ಯಾಸವಿಲ್ಲ. ಲಲಿತೆ ಯಾವುದಕ್ಕೂ ಹಿಂಜರಿಯುವವಳಲ್ಲ. ಬೆಳಗಿನಿಂದ ಸಂಜೆಯವರೆಗೆ ಒಂದೇ ಸಮನೆ ದುಡಿಯುವಳು.

ಒಂದು ಹೋಟೆಲಿನಲ್ಲಿ ದೋಸೆ ಹಿಟ್ಟು ತಿರುವುವುದು, ಎರಡು ಮನೆಗಳಲ್ಲಿ ನೀರು ತುಂಬುವುದು, ಮಕ್ಕಳಿಗೆ ಎರೆಯುವುದು, ಕಸ ಮುಸುರೆಗಳು, ಇನ್ನೆಂಟು ಮನೆಗಳಿಗೆ ಮೆಣಸಿನಪುಡಿ, ಹಪ್ಪಳ ಸಂಡಿಗೆಗಳು—ಈ ನಡುವೆ ಬಿಡುವು ಸಿಕ್ಕಾಗ ಕಸೂತಿ ಕೆಲಸಗಳನ್ನು ಮಾಡಿ ಮಾರುವಳು. ಈ ಮಧ್ಯೆ ರೇಷನ್ ಡಿಪೋಗಳಿಗೆ ಹೋಗಿ, ಅಲ್ಲಿ ಒದ್ದಾಡಿ ಸಾಮಾನುಗಳನ್ನು ತರಬೇಕು. ಎಲ್ಲಾ ಸಂಕಟಗಳನ್ನೂ ಧೈರ್ಯದಿಂದ ಎದುರಿಸಿ ದಿವಸಗಳನ್ನು ಎಣಿಸುತ್ತಾ ಕಾಲತಳ್ಳಿದಳು.

* § § *

## ೨೭

ಆರು ತಿಂಗಳ ನಂತರ ಜೈಲಿನ ಬಾಗಿಲು ರಂಗಣ್ಣನನ್ನು ಹೊರಗೆ ಬಿಡಲು ತೆರೆಯಿತು. ಈ ಆರು ತಿಂಗಳಲ್ಲಿ ಅವನಿಗೆ ಹೊರಗಿನ ಪ್ರಪಂಚದ ಪರಿಚಯವೇ ತಪ್ಪಿಹೋಗಿತ್ತು. ಒಂದುಸಾರೆ ಮಾತ್ರ ಕಾಮಾಕ್ಷಿ, ಲಲಿತೆ ಅವನನ್ನು ನೋಡಲು ಬಂದಿದ್ದರು. ಮತ್ತೆ ಅವರಿಗೆ ಹೋಗುವುದಕ್ಕೆ ಅನುಮತಿಯೇ ಸಿಗಲಿಲ್ಲ. ಉಳಿದವರ್‍ಯಾರೂ ಅವನನ್ನು ನೋಡುವ ಮನಸ್ಸು ಮಾಡಿರಲಿಲ್ಲ. ಎಷ್ಟೋ ಜನರ ಹಿತಕ್ಕಾಗಿ ತಾನು ಕಷ್ಟಪಟ್ಟಿದ್ದ. ಈಗ ಸತ್ತಿದ್ದಾನೆಯೇ ಇಲ್ಲ ಬದುಕಿದ್ದಾನೆಯೇ ನೋಡಲಾದರೂ ಬರಬೇಡವೆ? ಹೋಗಲಿ, ಯಾಕೆ ಬರಬೇಕು? ಬಂದರೇನು ಲಾಭ? ಅವನ ಮನಸ್ಸು ಸಂಗವನ್ನಪೇಕ್ಷಿಸುತ್ತಿತ್ತು. ಹೊರಗೇನು ನಡೆಯುತ್ತಿದೆ ಎಂದು ತಿಳಿಯಲು ತವಕಗೊಂಡಿತ್ತು. ಯಾವ ಚಳುವಳಿಗೋಸ್ಕರ ತಾನಿಲ್ಲಿ ಬಂದು ಕೊಳೆಯುತ್ತಿದ್ದೇನೆಯೋ ಅದು ಎಲ್ಲಿಯವರೆಗೆ ಮುಂದುವರೆಯಿತು ಎಂದು ತಿಳಿಯಲು ಆಸೆಯಾಗಿತ್ತು. ಅವನಿಗೆ ಜೈಲಿನಲ್ಲಿ ವರ್ತಮಾನವೆಲ್ಲಿಂದ ಬರಬೇಕು. ಅವನೆಷ್ಟು ಬೇಡಿದರೂ ಒಂದು ವರ್ತಮಾನಪತ್ರವನ್ನಾಗಲೀ ಒಂದು ಪುಸ್ತಕವನ್ನಾಗಲೀ ಅವನಿಗೆ ಕೊಡಲಿಲ್ಲ.

ಗಾಳಿ ಬೆಳಕುಗಳಿಲ್ಲದ ಆ ಗುಹೆಯಲ್ಲಿ ಅವನಿಗೆ ನಿದ್ದೆ ಬರುತ್ತಿರಲಿಲ್ಲ. ತಿಗಣೆ, ಸೊಳ್ಳೆಗಳ ಕಡಿತದ ಸುಖವೊಂದು ಬೇರೆ ಸಾಲದ್ದಕ್ಕೆ. ಮನುಷ್ಯಮಾತ್ರದವರು ತಿನ್ನಲಾಗದ ಕದನ್ನ. ದಿನೇದಿನೇ ಅವನ ಆರೋಗ್ಯ ಕೆಡುತ್ತಿತ್ತು.

ಕಾಯಕವಾದ ಕೆಲಸ ದಿನಕ್ಕೆ ಸ್ವಲ್ಪಹೊತ್ತು ಇರುತ್ತಿತ್ತು. ಉಳಿದ ಹೊತ್ತಿನಲ್ಲಿ ಕೆಲಸವೇನೂ ಇಲ್ಲ. ಸಂಗಡಿಗರೂ ಇಲ್ಲ. ಕೆಲಸದ ಹೊತ್ತಿನಲ್ಲಿ ಹೊರತು ಉಳಿದ ಹೊತ್ತಿನಲ್ಲಿ ಯಾರ ಜೊತೆಗೂ ಸೇರುವಂತಿಲ್ಲ. ಮನಸ್ಸಿಗೇನೂ ಕೆಲಸವಿಲ್ಲದೆ ಸ್ವಲ್ಪ ದಿವಸ ಹುಚ್ಚು ಹಿಡಿದಂತಿದ್ದಿತು. ಆಮೇಲಾಮೇಲೆ ಹಗಲುಗನಸುಗಳನ್ನು ಕಾಣುವ ಅಭ್ಯಾಸ ಮಾಡಿದ. ಅವನ ಮನಸ್ಸು ಜೈಲಿನ ಮೇರೆಯನ್ನು ದಾಟಿ ಕಲ್ಪನಾರಾಜ್ಯದಲ್ಲಿ ಸುಳಿದಾಡುತ್ತಿದ್ದಿತು.

ಕಲ್ಪನಾರಾಜ್ಯದಲ್ಲಿ ಕನಸಿನ ಹಳ್ಳಿ ಸುಂದರವಾಗಿ ಸ್ಫುಟವಾಗಿ ಚಿತ್ರಿತವಾಗಿತ್ತು. ಪ್ರತಿಯೊಂದು ಮರ, ಗಿಡ, ಕಣ್ಣೆದುರಿಗೇ ಇರುವಂತೆ ಕಾಣುತ್ತಿದ್ದುವು. ಅಲ್ಲಿಯ ಜೀವನದ ಪ್ರತಿಯೊಂದು ಘಟನೆಗಳೂ ಕಣ್ಣಮುಂದೆ ನಡೆಯುತ್ತಿರುವಂತೆಯೂ ಅವುಗಳಲ್ಲಿ ತಾನೂ ಭಾಗವಹಿಸುತ್ತಿರುವಂತೆಯೂ ಕಲ್ಪಿಸಿಕೊಳ್ಳುತ್ತಿದ್ದ. ಈಗ ಇದನ್ನು ಮಾಡುತ್ತಿದ್ದೇನೆ, ಈಗ ಇದನ್ನು ಮಾಡುವ ಹೊತ್ತಾಯಿತು ಎಂದು ಭಾವಿಸುತ್ತಿದ್ದ. ಈ ಹುಚ್ಚಿನಿಂದ ಅವನು ಜೀವಸಹಿತ ಆ ನರಕದಿಂದ ಪಾರಾಗುವಂತಾಯಿತು.

ಸೆರೆಮನೆಯಲ್ಲಿ ಅವನು ಇನ್ನೊಂದು ಒಳ್ಳೆಯ ಅಭ್ಯಾಸ ಮಾಡಿದ. ಅವನ ನಿತ್ಯಜೀವನದಲ್ಲಿ ದೇವರನ್ನು ಅವನು ಧ್ಯಾನಿಸುತ್ತಿರಲಿಲ್ಲ. ಸಂಧ್ಯಾವಂದನೆ, ದೇವರಪೂಜೆಗಳಲ್ಲಿ ನಂಬಿಕೆಯೂ ಹೋಗಿತ್ತು. ಅವಕಾಶವೂ ಇರಲಿಲ್ಲ. ದೇವರಲ್ಲಿ ನಂಬಿಕೆ ಇದೆಯೆಂದು ಹೇಳುವಂತಿರಲಿಲ್ಲ. ಇಲ್ಲವೆಂದೂ ಹೇಳುವುದಕ್ಕೆ ಬರದು. ಈಗ ದೇವರ ಧ್ಯಾನ ಪ್ರಾರಂಭಿಸಿದ. ಅದರಿಂದ ಚಿತ್ತಶಾಂತಿ ದೊರೆಯುತ್ತಿತ್ತು.

ಸೆರೆಮನೆಯಿಂದ ಹೊರಗೆ ಬರುವಾಗ ಅವನ ಮೈಯಲ್ಲಿ ಎಲುಬು ಚರ್ಮಗಳು ಮಾತ್ರ ಉಳಿದಿದ್ದುವು. ರಕ್ತದ ಛಾಯೆಯೇ ಇರಲಿಲ್ಲ. ನಿತ್ಯವೂ ಜ್ವರ ಬರುತ್ತಿದ್ದಿತು. ಮನೆಗೆ ಬಂದಮೇಲೆ ಜ್ವರ ಜೋರಾಗಿ ಬರಲು ಆರಂಭವಾಯಿತು. ಎಷ್ಟು ಉಪಚರಿಸಿದರೂ ಜ್ವರ ಹಿಮ್ಮೆಟ್ಟಲಿಲ್ಲ.

ರಂಗಣ್ಣನಿಗೆ ಲಲಿತೆ ಸೇವೆ ಮಾಡಿದರೆ ಹಿತವಾದಷ್ಟು ಕಾಮಾಕ್ಷಿ ಮಾಡಿದರೆ ಆಗುತ್ತಿರಲಿಲ್ಲ. ಲಲಿತೆ ಮಾಡುವ ಕೆಲಸದಲ್ಲಿ ಒಂದುತರದ ಮೃದುತ್ವವಿದ್ದಿತು. ಅವನ ಮನಸ್ಸನ್ನು ತಿಳಿದು ಮಾಡುವ ಶಕ್ತಿಯಿದ್ದಿತು. ಕಾಮಾಕ್ಷಿಗೆ ಕರೆದು ಕೆಲಸ ಹೇಳಬೇಕು. ಮಾಡಿದ ಕೆಲಸವನ್ನೂ ಒರಟಾಗಿ ಮಾಡುತ್ತಾಳೆ.

ಈಗ ಲಲಿತೆಗೆ ಕೆಲಸ ವಿಪರೀತ ಹೆಚ್ಚಿತು. ಮನೆಯಲ್ಲಿ ರಂಗಣ್ಣನ ಶುಶ್ರೂಷೆ ಮಾಡಬೇಕು. ಜೀವನಕ್ಕೆ ದುಡಿಯಬೇಕು. ತಮ್ಮ ಮನೆಯಿಂದ, ಇಲ್ಲ ಮಾವನ ಮನೆಯಿಂದ ಸಹಾಯ ಅಪೇಕ್ಷಿಸುವುದರಿಂದ ಅವನಿಗೆ ವ್ಯಥೆಯಾಗು

ವುದೆಂದು ಅವಳಿಗೆ ತಿಳಿದಿದ್ದುದರಿಂದ ಅವಳು ಆ ಪ್ರಸ್ತಾಪ ಎತ್ತಲಿಲ್ಲ. ಮಾವನ ಮನೆಯವರಂತೆ ಅವನ ಮನೆಯವರೂ ದೂರಾಗಿದ್ದರು. ಹೊಸಹಳ್ಳಿಯ ಜೀವನ ಕಷ್ಟವಾಗುತ್ತ ನಡೆದಿತ್ತು. ರಂಗಣ್ಣನ ತಮ್ಮಂದಿರು ಅಣ್ಣನಮೇಲೆ ಅಸೂಯೆ ಯಿಂದಿದ್ದರು. ತಮ್ಮ ತಂದೆ ಅಣ್ಣನಿಗೆ ಓದಿಸಲು ವಿಪರೀತ ದುಡ್ಡು ಪೋಲು ಮಾಡಿದರೆನ್ನುವುದು ತಂದೆಯಮೇಲಿನ ' ಚಾರ್ಜ್‌ಷೀಟಿ 'ನಲ್ಲಿ ಒಂದು ' ಐಟಂ ' ಆಗಿತ್ತು. ಬೆಂಗಳೂರು ಜೀವನ ಕಷ್ಟವಾದಮೇಲೆ ರಂಗಣ್ಣ ಮನೆಗೆ ಏನೂ ಕಳುಹಿ ಸುವುದಕ್ಕಾಗುತ್ತಿರಲಿಲ್ಲ. ಇವನಿಂದ ಯಾವ ಸಹಾಯವೂ ಇಲ್ಲದಮೇಲೆ ಅವನಾ ದರೂ ಇವನ ಯೋಗಕ್ಷೇಮ ತಿಳಿದುಕೊಳ್ಳಬೇಕೆಂಬ ಪ್ರಯತ್ನಕ್ಕೆ ಹೋಗಲಿಲ್ಲ. ಇದರಿಂದಲೇ ರಂಗಣ್ಣ ಜೈಲಿಗೆ ಹೋಗುವಾಗ ಕಾಮಾಕ್ಷಿಯನ್ನು ಲಲಿತೆಯ ವಶ ಒಪ್ಪಿಸಿ ಹೋದ. ಈಗಲೂ ಆ ಎರಡುಕಡೆಯಿಂದ ಸಹಾಯ ಅಪೇಕ್ಷಿಸುವಹಾಗಿರ ಲಿಲ್ಲ. ಆದರೆ ಲಲಿತೆಯ ಕಷ್ಟವನ್ನು ನೋಡಿ ಸಹಿಸಲೂ ಆಗದು. ಇದೇತರ ಪಾಡು? ಲಲಿತೆಗೂ ತನಗೂ ಏನು ಸಂಬಂಧ? ಅವಳ ದುಃಖದಲ್ಲಿ ತಾನು ಒಳ್ಳೆಯ ಮಾ ತೊಂದೂ ಆಡಲಿಲ್ಲ, ಈಗ ಅವಳು ತನಗಾಗಿ ಜೀವ ತೇಯುವುದು ಯಾವ ದೇವರಿಗೆ ಪ್ರೀತಿ ? ಇವನ ಯಾವ ಮಾತುಗಳನ್ನೂ ಲಲಿತೆ ಪೂರೈಸುವುದಕ್ಕೆ ಬಿಡ ಲೊಲ್ಲಳು.

' ನನಗೆ ಶ್ರಮವೆಂದು ತಿಳಿದಿರಾ ಭಾವ! ನನ್ನ ಜನ್ಮದಲ್ಲಿ ಈಗ ಇರು ವುದಕ್ಕಿಂತ ಹೆಚ್ಚು ಸುಖ ಯಾವಾಗಲೂ ಆಗಿರಲಿಲ್ಲ '

' ನಿಜವಾಗಿಯೂ ಯೋಚಿಸಿದರೆ ನನಗೂ ನಿನಗೂ ಏನು ಸಂಬಂಧ ಲಲಿತ? ನೀನೀರೀತಿ ನನಗಾಗಿ ಕಷ್ಟಪಡುವುದು ಯಾವ ದೈವಮಾಯೆಯೋ ? '

' ನಿಜವಾಗಿಯೂ ಹಾಗೆಯೇ ಭಾವಿಸಿದ್ದೀರ ಭಾವ? ನನಗೂ ನಿಮಗೂ ಯಾವ ಸಂಬಂಧವೂ ಇಲ್ಲವೆ ? '

' ಇಲ್ಲ ಹಾಗಂತಲ್ಲ ಲಲಿತ............'

' ಮತ್ತೆ ಬಿಡಿ. ಸಂಬಂಧವುಂಟು ಅಂದರೆ ಉಂಟು. ಅದನ್ನು ಯಾರೊಪ್ಪ ಬೇಕು? ಈ ತರಹೆ ಆದರದ ಮಾತು ನನಗೆ ನೋವುಂಟುಮಾಡುತ್ತಿದೆ. ಅದನ್ನು ಆಡಬೇಡಿ. ನೀವು ಕಾಮಾಕ್ಷಿ ಇವರನ್ನು ಬಿಟ್ಟು ನನಗೆ ಇನ್ಯಾರಿದ್ದಾರೆ? '

* * * *

ರಂಗಣ್ಣನ ಅಸ್ವಸ್ಥತೆ ಹೆಚ್ಚುತ್ತಾ ಹೋಯಿತೇ ವಿನಹ ಗುಣ ತೋರಲಿಲ್ಲ. ಎದ್ದು ಕುಳಿತುಕೊಳ್ಳಲೂ ಸಹ ಅವನಿಗೆ ಸಹಾಯ ಬೇಕು. ಔಷಧಿಗೆ ದುಡ್ಡು ಒದಗಿಸುವುದು ಬಹಳ ಪ್ರಯಾಸವಾಗಿತ್ತು. ಸಾರ್ವಜನಿಕ ಆಸ್ಪತ್ರೆಗೆ ಸೇರಿಸಲು

ಸಮ್ಮತಿಯಿಲ್ಲ. ಅಲ್ಲಿ ಜೀವದಾಶೆಯುಳ್ಳ ರೋಗಿಗಳು ಹೋಗಲು ಹಿಂಜರಿಯುತ್ತಿದ್ದರು. ದೊಡ್ಡವನಾದ ಹೊರತು ಅಲ್ಲಿ ಶುಶ್ರೂಷೆ ದೊರೆಯುವುದು ಕಠಿಣವಾಗಿತ್ತು. ಅವನಿಗೆ ಔಷಧಿ ಕೊಡುತ್ತಿದ್ದ ಡಾಕ್ಟರು ಇದ್ದಷ್ಟು ದುಡ್ಡನ್ನು ಹೀರಿ ಇನ್ನು ಸಿಗುವುದು ಸ್ವಲ್ಪ ಕಷ್ಟವೆಂದು ತೋರಿದಕೂಡಲೇ ಅವನನ್ನು ದೊಡ್ಡಾಸ್ಪತ್ರೆಗೆ ಸೇರಿಸುವುದೊಳಿತೆಂದು ಸಲಹೆ ಕೊಟ್ಟು ಕೈಕೊಡವಿಬಿಟ್ಟ.

ಹೆಂಗಸರಿಬ್ಬರು ಅಶಕ್ತನಾದ ರಂಗಣ್ಣನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿ ಅವರಿವರನ್ನು ಆಶ್ರಯಿಸಿ ಪರೀಕ್ಷೆ ಮಾಡಿಸಿದರು. ಪರೀಕ್ಷೆ ಮಾಡಿದ ಡಾಕ್ಟರು ಇದು ಅನೀಮಿಯಾಕ್ಕೆ ತಿರುಗಿದೆ. ಆಸ್ಪತ್ರೆಗೆ ಸೇರಿಸಿಕೊಳ್ಳಬೇಕು ಎಂದು ಶಿಫಾರಸು ಮಾಡಿದರು. ಆದರೆ ರೆಸಿಡೆಂಟ್ ಮೆಡಿಕಲ್ ಆಫೀಸರು ಆಸ್ಪತ್ರೆಯಲ್ಲಿ ಯಾವ ಹಾಸಿಗೆಯೂ ಖಾಲಿ ಇಲ್ಲವೆಂದುಬಿಟ್ಟರು. ಹೊರಹೋಗುವವರು ಹೋಗುತ್ತಿದ್ದರು. ಹೊಸದಾಗಿ ದಾಖಲಾಗುವವರು ದಾಖಲಾಗುತ್ತಿದ್ದರು. ಆದರೆ ದುರವಸ್ಥೆಯಲ್ಲಿದ್ದ ರಂಗಣ್ಣನಿಗೆ ಅಲ್ಲಿ ಜಾಗವಿರಲಿಲ್ಲ. ಏಕೆಂದರೆ ಲಲಿತೆ ಯಾರೂ ಇಲ್ಲದ ಸಮಯ ನೋಡಿ ಆಫೀಸರಿಗೆ ನೋಟು ಇದ್ದ ಕವರನ್ನು ಅರ್ಪಿಸಿರಲಿಲ್ಲ.

ಎರಡುದಿವಸ ಆಸ್ಪತ್ರೆಗೆ ಹೋಗಿ ಮನೆಗೆ ಬಂದಿದ್ದಾಯಿತು. ಚಿಕಿತ್ಸೆಗೆ ಸ್ವಲ್ಪ ದಯಾಳುವೆಂದು ಪ್ರಸಿದ್ಧಿಪಡೆದಿದ್ದ ಡಾಕ್ಟರನ್ನು ಈಸಾರೆ ಆಶ್ರಯಿಸಿದ್ದಾಯಿತು. ಅವರು ' ಇದು ತೀರಾ ವಿಷಮಾವಸ್ಥೆಯಲ್ಲಿರುವ ಅನೀಮಿಯಾ. ಇದಕ್ಕೆ ' ಕ್ಯಾಂಪುಲಾನ್ ' ಇಂಜಕ್ಷನ್ ಹತ್ತಾದರೂ ಕೊಡಬೇಕಾದೀತು. ಇಂಜಕ್ಷನ್ ಟ್ಯೂಬ್ ತಂದುಕೊಟ್ಟರೆ ನನ್ನ ಶಕ್ತಿಮೀರಿ ಪ್ರಯತ್ನಮಾಡಿಯೇನು ಎಂದರು. ' ಕ್ಯಾಂಪುಲಾನ್ ' ಪೇಟೆಯಲ್ಲಿ ಮಾರಾಟಕ್ಕಿಲ್ಲ. ಅದು ಜರ್ಮನ್ ತಯಾರಿ. ಯುದ್ಧ ಷುರುವಾಯಿತು. ಜರ್ಮನ್ ಸಾಮಾನುಗಳು ಬರುವುದು ನಿಲ್ಲಿಸಲ್ಪಟ್ಟಿತು. ಆ ಸಾಮಾನುಗಳ ಯೋಗ್ಯತೆಯುಳ್ಳ ಬೇರೆ ಸಾಮಾನುಗಳನ್ನು ಒದಗಿಸುವುದು ಮಾತ್ರ ' ಮಿತ್ರ ' ರಿಂದಾಗಲಿಲ್ಲ. ' ಕ್ಯಾಂಪುಲಾನ್ ' ಕಳ್ಳಸಂತೆಗೆ ಇಳಿಯಿತು. ಈ ವಿಷಯ ಲಲಿತೆ ಡಾಕ್ಟರಿಗೆ ಹೇಳಿದಳು. ಅವರೆಂದರು :

' ಅದು ಕಾಳಸಂತೆಯಲ್ಲಿ ಸಿಗುತ್ತದೆ. ಮೊದಲು ಸ್ಟಾಕಿಟ್ಟ ಡಾಕ್ಟರೆಲಾ ಅದನ್ನು ಬಚ್ಚಿಟ್ಟಿದ್ದಾರೆ. ಅಂತಹವರು ನನಗೆ ಗೊತ್ತಿದ್ದಾರೆ. ಆದರೆ ಪ್ರತಿ ಟ್ಯೂಬಿನ ಬೆಲೆ ಮೂವತ್ತು ರೂಪಾಯಿ ಆಗುತ್ತದೆ. ಅಷ್ಟಾದರೂ ಅವರು ಕೊಡುವುದು ಕಷ್ಟ. ನಿಮಗಾಗಿ ನನ್ನದಾಕ್ಷಿಣ್ಯ ಖರ್ಚುಮಾಡುತ್ತೇನೆ ಬೇಕಾದರೆ' ಮೂವತ್ತು ರೂಪಾಯಿ! ಹತ್ತು ಟ್ಯೂಬುಗಳಿಗೆ ಮುನ್ನೂರು ರೂಪಾಯಿ ! ಇನ್ನುಳಿದ ಔಷಧಿಗಳು ಸೇರಿ ಐನೂರು ರೂಪಾಯಿ! ಎಲ್ಲಿಂದ ತರುವುದು ? ಅದೂ

ಈ ತಕ್ಷಣವೇ! ಆ ಹೆಣ್ಣುಮಕ್ಕಳು ನಿರಾಶೆಯಿಂದ ಕುಸಿದುಬಿದ್ದರು. ಈಗ ಅತ್ತು ಫಲವಿಲ್ಲ. ಏನಾದರೂ ಮಾಡಲೇಬೇಕು.

ಲಲಿತೆ ಬಳೇಪೇಟೆಯಲ್ಲಿದ್ದ ಕಾಲದಲ್ಲಿ ಆಗಾಗ ಕೈಯಲ್ಲಿ ಉಳಿಯುತ್ತಿದ್ದ ನಾಲ್ಕು ಕುರುಡುಕಾಸುಗಳನ್ನು ಅಲ್ಲಿ ಒಂದು ಅಂಗಡಿಯಿಟ್ಟಿದ್ದ ವೆಂಕಟರಮಣ ಶೆಟ್ಟಿಯ ಹತ್ತಿರ ಶೇಖರಿಸಲು ಕೊಡುತ್ತಿದ್ದಳು. ಶೆಟ್ಟಿ ಧರ್ಮಭೀರು. ಆದರೆ ಧರ್ಮಭೀರುವಾದ್ದರಿಂದಲೋ ಏನೋ ಲಕ್ಷ್ಮೀಕಟಾಕ್ಷಕ್ಕೆ ಪಾತ್ರನಾಗಲಿಲ್ಲ. ವ್ಯಾಪಾರದಲ್ಲಿ ನಷ್ಟಹೊಂದುತ್ತಲೇ ಬಂದ. ಅವನು ಕಷ್ಟದಲ್ಲಿದ್ದಾನೆಂದು ಲಲಿತೆ ತನ್ನ ದುಡ್ಡು ಕೇಳಲೂಇಲ್ಲ. ರಂಗಣ್ಣ ಜೈಲಿಗೆ ಹೋದಾಗ ಅವನನ್ನು ನೋಡಿ ಕೇಳಿದಳು. ಸೆಟ್ಟಿ ತನ್ನ ದುಃಸ್ಥಿತಿಯನ್ನೆಲ್ಲಾ ವಿವರಿಸಿದ. ಅವನಿಂದ ಏನೂ ಬರುವಂತಿರಲಿಲ್ಲ. ಎಂತೆಂತಹ ದಡ್ಡರೋ ದುಡ್ಡುಮಾಡುತ್ತಿದ್ದ ಆ ಕಾಲದಲ್ಲಿ ಸೆಟ್ಟಿ ನಷ್ಟಹೊಂದುತ್ತಲೇ ಇದ್ದ. ಆಗ ಏನೇನೋ ಮಾಡಿ ಕಾಲ ತಳ್ಳಿದುದಾಯಿತು. ಈಗ ಲಲಿತೆ ಪುನಃ ಅವನನ್ನು ಹುಡುಕಿಕೊಂಡು ಹೋದಳು.

ಸೆಟ್ಟಿಯ ಹೆಂಡತಿ ಲಲಿತೆಯನ್ನು ಕಂಡು ಮಾತಾಡಿದಳು :

'ಅವರು ಊರುಬಿಟ್ಟು ನಾಲ್ಕು ತಿಂಗಳಾಯಿತು. ಅದೆಲ್ಲೋ ತಿರುವಾಂಕೂರಿನ ಹತ್ತಿರ ಮಿಲಿಟರಿಗೆ ಸಾಮಾನು ಸಪ್ಲೈ ಮಾಡುತ್ತಿದ್ದಾರಂತೆ. ತಿಂಗಳು ತಿಂಗಳೂ ಸ್ವಲ್ಪ ದುಡ್ಡು ಕಳಿಸುತ್ತಾರೆ. ಮಿಲಿಟರಿಗೆ ಸಪ್ಲೈ ಮಾಡಿದರೆ ದುಡ್ಡು ಧಾರಾಳವಾಗಿ ಸಿಕ್ಕುವುದಂತೆ. ಆದ್ದರಿಂದ ನೀವು ಕೇಳಿದಿರಿ ಎಂದು ಬರೆಯುತ್ತೇನೆ. ನಿಮ್ಮ ದುಡ್ಡು ಖಂಡಿತ ಕೊಟ್ಟುಬಿಡುತ್ತಾರೆ. ಆದರೆ ಅವರಿಗೆ ಕಾಗದ ತಲುಪುವುದೇ ಕಷ್ಟ. ಪ್ರತಿಯೊಂದು ಕಾಗದಾನೂ ಅದ್ಯಾರೋ ನೋಡಿ ಆಮೇಲೆ ಕೊಡುತ್ತಾರಂತೆ. ಒಂದು ಕಾಗದಕ್ಕೆ ಉತ್ತರ ಬರಬೇಕಾದರೆ ಹದಿನೈದು ದಿನವಾದರೂ ಆಗುತ್ತದೆ.'

ರಂಗಣ್ಣ ಹದಿನೈದು ದಿನ ಕಾಯುವಂತಿಲ್ಲ. ಕಳೆದ ಒಂದೊಂದು ನಿಮಿಷವೂ ಅವನನ್ನು ಸಾವಿನ ಹತ್ತಿರಹತ್ತಿರ ಕೊಂಡೊಯ್ಯುತ್ತದೆ.

ಲಲಿತೆ ಅವರಿವರನ್ನು ಬೇಡಿದಳು. ಯಾರೂ ಅವಳಿಗೆ ಸಾಲ ಕೊಡುವವರಿಲ್ಲ. ಏನು ನಂಬಿ ಅವಳಿಗೆ ಸಾಲ ಕೊಡಬೇಕು? ಅವಳು ಅದನ್ನು ಹೇಗೆ ತೀರಿಸಿಯಾಳು? ಶೆಟ್ಟಿ ಅವಳ ಹಣ ಹಿಂತಿರುಗಿಸುತ್ತಾನೆಂದು ಅವರ್ಯಾರೂ ನಂಬರು. ಅವಳ ಜೀವನದಲ್ಲಿ ಬದಲಾವಣೆಯಾದ ವಿಷಯ ಸ್ನೇಹಿತರೆಲ್ಲರಿಗೂ ತಿಳಿದಿತ್ತು. ಆದ್ದರಿಂದ ಅವಳನ್ನೊಬ್ಬರೂ ನಂಬದಾದರು.

ಈಗ ಅವರಿಗೆ ರಂಗಣ್ಣ ನರಳಿ ಸಾಯುವುದನ್ನು ನೋಡುವುದರ ಹೊರತು ಬೇರೆ ದಾರಿಯಿರಲಿಲ್ಲ. ಮನೆಯಲ್ಲಿ ಮಾರಲು ಯಾವ ಒಡವೆಗಳೂ ಇದ್ದಿಲ್ಲ.

ಕಾಮಾಕ್ಷಿ ಬರುವಾಗ ಅವಳ ತೌರುಮನೆಯವರು ತಾವಿಟ್ಟಿದ್ದ ಒಡವೆಗಳೊಂದನ್ನೂ ಕೊಡಲಿಲ್ಲ. ಅದನ್ನೆಲ್ಲಾ ರಂಗಣ್ಣ ಮಾರಿ ತಿಂದುಹಾಕಿಬಿಡುವನು ಎಂದವರ ಸಂದೇಹ. ಇನ್ನು ರಂಗಣ್ಣನಿಗೆ ತಿಳಿಯದಂತೆ ಅವನ ಮನೆಯವರಿಗೆ ಮತ್ತು ಮಾವನ ಮನೆಯವರಿಗೆ ಟೆಲಿಗ್ರಾಂ ಕೊಡಬೇಕೆಂದು ತೀರ್ಮಾನಿಸಿದರು. ಆದರೆ ಸಮಸ್ಯೆ ಅಷ್ಟಕ್ಕೇ ತೀರ್ಮಾನವಾದಹಾಗಾಗಲಿಲ್ಲ. ಹೊಸಹಳ್ಳಿಗಾಗಲೀ, ಹೊನ್ನ ಹಳ್ಳಿಗಾಗಲೀ ಟೆಲಿಗ್ರಾಂ ಮಾಡಿದರೂ ಒಂದೇ, ಕಾಗದ ಬರೆದರೂ ಒಂದೇ. ತಲುಪುವುದು ಒಂದು ತಿಂಗಳೋ, ಎರಡು ತಿಂಗಳೋ. ಅಥವಾ ಅಂಚೆ ಜವಾನ ನಿಗೆ ಸೋಮಾರಿತನ ಬಂದುಬಿಟ್ಟರೆ ತಲುಪದೆಯೂ ಇರಬಹುದು. ಅಲ್ಲಿಂದ ಸಹಾಯವಾದರೂ ಬರುವ ಬಗೆ ಹೇಗೆ?

ಇನ್ನು ಯಾವ ಆಸೆಯೂ ಇಲ್ಲವೆನ್ನುವ ಹೊತ್ತಿಗೆ ಬೀದಿಯಲ್ಲಿ ಸುಬ್ಬಾ ಶಾಸ್ತ್ರಿಗಳು ಸಿಕ್ಕರು. ಅವರು ಈಗ ಬೆಂಗಳೂರಿನಲ್ಲಿಯೇ ಒಂದು ಮನೆ ಕೊಂಡು ಕೊಂಡು ವರ್ಷದಲ್ಲಿ ಹೆಚ್ಚುಭಾಗ ಅಲ್ಲಿಯೇ ಇರುತ್ತಿದ್ದರು. ಮುಳುಗುವವನಿಗೆ ಹುಲ್ಲುಕಡ್ಡಿ ಸಿಕ್ಕಿದಂತಾಗಿ ಲಲಿತೆಯ ಆಸೆಗೆ ಸ್ವಲ್ಪ ಜೀವ ಬಂದಿತು. ಆದರೆ ಸುಬ್ಬಾಶಾಸ್ತ್ರಿಗಳನ್ನು ಕೇಳುವುದೇ? ಅವರು ಹಿಂದಾದ ಅವಮಾನದ ನೆನಪಿನಿಂದ ಸಹಾಯ ಮಾಡಿಯಾರೆ? ಅಥವಾ ಮಾಡಿದರೂ ರಂಗಣ್ಣನಿಗೆ ತಿಳಿದರೆ ಹೇಗೆ? ಕೇಳುವುದೋ ಬೇಡವೋ, ಹೇಗೆ ಕೇಳುವುದು ಎಂದು ಯೋಚಿಸುತ್ತಿರುವಾಗ ಶಾಸ್ತ್ರೀಗಳೇ ಮಾತಾಡಿದರು.

'ಏನು ಲಲಿತ, ಅಪರೂಪ. ಚನ್ನಾಗಿದ್ದೀಯಾ?'

ಅವರು ಯಾವುದನ್ನೂ ತೋರಿಸಿಕೊಳ್ಳದೆ ಸ್ವಾಭಾವಿಕವಾಗಿಯೇ ಮಾತಾಡಿ ದರು. ಸಿಟ್ಟು ನೆತ್ತಿಗೇರಿರುವಾಗಲೂ ಅವರ ತುಟಿಯಮೇಲೆ ನಗೆಯಿರುತ್ತಿತ್ತು. ಆ ನಗೆಯ ವಿಷವನ್ನು ಉಂಡವರಿಗೆ ಮಾತ್ರ ಗೊತ್ತು ಅವರ ವಿಷಯ.

ಲಲಿತೆ 'ಚನ್ನಾಗಿದ್ದೇನೆ' ಎಂದಳು. ಅವಳು ಇಷ್ಟುಮಟ್ಟಿಗೆ ಉತ್ತರ ಕೊಟ್ಟಿದ್ದರಿಂದ ಉತ್ತೇಜಿತರಾಗಿ ಶಾಸ್ತ್ರಿಗಳು ಮಾತು ಮುಂದುವರಿಸಿದರು. ಇಷ್ಟ ರಲ್ಲಿ ಅವರ ಮನೆ ಸಿಕ್ಕಿತು.

'ಒಳಗೆ ಬರುತ್ತೀಯೇನು?' ಎಂದು ಕೇಳಿದರು. ಲಲಿತೆ ಒಳಗೆ ಬಂದಳು. ಶಾಸ್ತ್ರಿಗಳ ಮನಸ್ಸಿನ ಆಸೆ ಪ್ರಕೋಪನವಾಯಿತು.

ನಿಂತೇಇದ್ದ ಲಲಿತೆಯನ್ನು ಕೂರಹೇಳಿ ತಾವು ಹತ್ತಿರ ಬಂದು ಕುಳಿತರು. ಆಗ ಲಲಿತೆ ದುಡ್ಡಿನ ಪ್ರಸ್ತಾಪವೆತ್ತಿದಳು. 'ಎಷ್ಟು ಬೇಕು? ಏತಕ್ಕೆ ಬೇಕು? ಎಂದು ಕೇಳಿ ತಿಳಿದುಕೊಂಡು, ಶಾಸ್ತ್ರಿಗಳು ರೂಪಾಯಿ ಕೊಡಲೊಪ್ಪಿದರು. ಅವರು ಹಿಂದಿನದೆಲ್ಲವನ್ನೂ ಮರೆತು, ಇಷ್ಟುಬೇಗನೆ ಒಪ್ಪಿದ್ದು ಲಲಿತೆಗೆ ಸ್ವಲ್ಪ ಆಶ್ಚರ್ಯ ವನ್ನೂ, ಯೋಚನೆಯನ್ನೂ ಉಂಟುಮಾಡಿತು.

ಶಾಸ್ತ್ರಿಗಳು ‘ ಆದರೆ ಒಂದು ನಿಯಮದಮೇಲೆ ಮಾತ್ರ ’ ಎಂದರು.

‘ ಏನು ? ’

ಶಾಸ್ತ್ರಿಗಳು ಅದಕ್ಕೆ ನೇರವಾಗಿ ಉತ್ತರ ಕೊಡುವ ಬದಲು, ಅಂಗವಿಕಾರ ಮಾಡುತ್ತಾ ಆ ನಗೆಯನ್ನು ತುಟಿಗಳಮೇಲೆ ಆಡಿಸುತ್ತಾ, ಸ್ವಲ್ಪಸ್ವಲ್ಪವಾಗಿ ತಮ್ಮ ನಿಯಮವನ್ನು ತಿಳಿಸಿದರು. ಕೇಳಿ ಒಂದುಕ್ಷಣ ಲಲಿತೆಗೆ ಮೈ ನಡುಗಿತು.

ಆಪತ್ಕಾಲದಲ್ಲಿ ಇವನ ಮನೆಗೆ ಬಂದರೆ ಹೊಲಸು ಮಾತುಗಳನ್ನಾಡುತ್ತಾನೆ. ಅಲ್ಲಿಯೇ ಕಪಾಲಕ್ಕೆರಡು ಬಿಟ್ಟು ಹೊರಹೊರಡಲೇ ಎನ್ನಿಸಿತು. ಪುನಃ ಪಾಪ ಕೂಪದಲ್ಲಿ ಮುಳುಗಲು ವಚನವೀಯಬೇಕೆ? ಆದರೆ ಅದೊಂದೇ ಮಾರ್ಗವುಳಿದಿತ್ತು. ತಾನು ಆ ದಾರಿಯಲ್ಲಿ ಹೋಗಲು ಹಿಂಜರಿದರೆ ರಂಗಣ್ಣನ ಸಾವು ಸಿದ್ಧ. ಆಮೇಲೇನಿದೆ? ರಂಗಣ್ಣನ ಮರಣೋನ್ಮುಖ ಚಿತ್ರ ಅವಳ ಮನಸ್ಸಿನ ಮುಂದೆ ಸುಳಿಯಿತು. ಕಾಮಾಕ್ಷಿಯ ಚಿತ್ರವೂ ಸುಳಿಯಿತು. ಆ ಒಂದೇಕ್ಷಣದಲ್ಲಿ ಮನಸ್ಸು ಕಲ್ಲುಮಾಡಿ ‘ ಹೂಂ ’ ಎಂದಳು. ತಾನು ನಿಯಮ ಪಾಲಿಸಬೇಕಾದ ಅಗತ್ಯ ಬರಲಾರದು. ಶೆಟ್ಟಿಗೆ ಕಾಗದ ಬರೆದಾಗಿತ್ತು. ಆ ದುಡ್ಡು ಬಂದಕೂಡಲೇ ಈ ಸಾಲ ತೀರಿಸಿಬಿಟ್ಟರಾಯಿತು.

ಸುಬ್ಬಾಶಾಸ್ತ್ರಿಗಳು ರೂಪಾಯಿ ಕೊಟ್ಟರು.

‘ ಇರಲಿ, ಈ ಕಾಗದಕ್ಕೊಂದು ರುಜು ಹಾಕಿಬಿಟ್ಟೆರು ಏತಕ್ಕಾದರೂ ಬೇಕಾದೀತು. ಉಪ್ಪು ಹೊತ್ತು ಹೊಳೆಗೆ ಹೊಯ್ದರೂ ಅಳೆದು ಹೊಯ್ಯಿ ಎಂದು ಹಿಂದಿನವರು ಹೇಳಿದ್ದಾರೆ. ನಾಳೆ ನೀನು ಒಂದುವೇಳೆ ತಕರಾರು ಮಾಡಿದರೆ ನಿನಗೊಂದು ಮೂಗುನೇಣಿರಲಿ ‘ ಅಹ್ಹಾಹ್ಹಾ ! ’

ಲಲಿತೆ ಹಿಂದೆ ಮುಂದೆ ನೋಡದೆ ರುಜು ಹಾಕಿಕೊಟ್ಟಳು. ಶಾಸ್ತ್ರಿಗಳು ‘ ಎಷ್ಟು ದಿವಸದಲ್ಲಿ ಬರುತ್ತೀಯೆ? ’ ಎಂದು ಕೇಳಿದರು. ಅವಳು ಮಾತಾಡದೆ ಹೊರಟುಬಿಟ್ಟಳು.

‘ ಎಲ್ಲಿ ಹೋಗುತ್ತೀಯೆ ? ಆ ಭಿಕಾರೀನ ಕಟ್ಟಿಕೊಂಡು? ’ ಎಂದುಕೊಂಡರು ಶಾಸ್ತ್ರಿಗಳು—ಅವಳ ಬೆನ್ನನ್ನೇ ನೋಡುತ್ತಾ.

* * * *

ರಂಗಣ್ಣನ ದೇಹಸ್ಥಿತಿ ಸುಧಾರಿಸಿತು. ಸರಿಯಾದ ಚಿಕಿತ್ಸೆ ದೊರೆತು ಅವನು ದಿನೇದಿನೇ ಗುಣಮುಖನಾದ. ‘ಈ ಎಲ್ಲಾ ಔಷಧಿ ಪಥ್ಯಗಳಿಗೆ ದುಡ್ಡೆಲ್ಲಿಯದು?’ ಎಂದು ಕೇಳಿದ.

‘ ಹೆಚ್ಚೇನೂ ಖರ್ಚಾಗಿಲ್ಲ. ಏನೋ ಇದ್ದಿದ್ದು ಒಂದೆರಡು ಕೆಲಸಕ್ಕೆಬಾರದ ಒಡವೆ ಮಾರಿದ್ದಾಯಿತು ’ ಎಂದು ಮಾತು ಜಾರಿಸಿಬಿಟ್ಟಳು ಲಲಿತೆ. ರಂಗಣ್ಣನಿಗೆ

ನಂಬಿಕೆಯಾಗಲಿಲ್ಲ. ಅವನದನ್ನು ಹೆಚ್ಚು ವಿಮರ್ಶಿಸಲು ಹೋಗಲೂಇಲ್ಲ. ಲಲಿತೆಯ ಹತ್ತಿರವಿದ್ದ ಒಂದೆರಡು ಒಡವೆ ಗಿಲೀಟಿನದು ಎಂದು ಅವನಿಗೂ ತಿಳಿಯದು.

'ಎಷ್ಟು ಜನರ ಋಣದಿಂದ ಈ ದೇಹ ಉಳಿಯಬೇಕಾಗಿದೆಯೋ? ಎಂದುಕೊಂಡ.

೨೮

ರಂಗಣ್ಣನ ಕಾಹಿಲೆ ವಾಸಿಯಾಗುತ್ತಾ ಬಂದಿತು. ಲಲಿತೆಯ ಚಿಂತೆಯೂ ಹೆಚ್ಚುತ್ತ ಬಂದಿತು. ಸೆಟ್ಟಿಯಿಂದ ಜವಾಬೇ ಬರಲಿಲ್ಲ. ಸುಬ್ಬಾಶಾಸ್ತ್ರಿಗಳೋ ನಿತ್ಯವೂ ಭೇಟಿಯಾಗುತ್ತಾರೆ. ಡಾಕ್ಟರರ ಷಾಪಿಗೆ ಹೋಗುವ ದಾರಿಯಲ್ಲಿ ಕಾದಿರುತ್ತಾರೆ. ಏನಾದರೂ ತಪ್ಪಿಸಿಕೊಳ್ಳಲೆತ್ನಿಸಿದರೆ 'ಮನೆಯ ಹತ್ತಿರವೇ ಬರುತ್ತೇನೆ' ಎಂದು ಹೆದರಿಸುತ್ತಾರೆ. ಅವರಿಗೆ ಆಡಲು ಬೇರಾವ ಮಾತೂ ಇಲ್ಲ.

'ನಿನ್ನ ಭಾವನಿಗೆ ಗುಣವಾಯಿತಲ್ಲ. ಇನ್ನು ಅವನ ಪಾಡಿಗೆ ಅವನನ್ನು ಬಿಟ್ಟುಬಿಡು. ಮಾತಿನಂತೆ ನನ್ನ ಜೊತೆಗೆ ಬಂದಿರು' ಎನ್ನುತ್ತಾರೆ.

ಲಲಿತೆ ಆ ಮಾತನ್ನು ಹಾರಿಸಲು ಯತ್ನಿಸುತ್ತಾಳೆ. ಆದರೆ ಶಾಸ್ತ್ರಿಗಳಿಗೆ ಒಂದೇಮಾತು ಬರುವುದು.

'ಹೇಳು ಬರುವುದೆಂದು? ರಾಮುವಿಗೆ ಕಾಲೇಜು ದೂರವಾಗುವುದೆಂದು ಹೇಳಿ ಕಾಲೇಜು ಹಾಸ್ಟಲಿನಲ್ಲಿ ಬಿಟ್ಟಿದ್ದೇನೆ. ಮನೆ ನಿರಾತಂಕವಾಗಿದೆ.' ಶಾಸ್ತ್ರಿಗಳಿಗೆ ರಾಯನಕೋಣೆಯ ಸೌಖ್ಯ ಬೆಂಗಳೂರಿನಲ್ಲಿ ಸಿಕ್ಕಿಲ್ಲ. ಇಲ್ಲಿಯ ಶುದ್ಧ ವ್ಯವಹಾರಿಕ ಸಂಬಂಧದಲ್ಲಿ ಅವರಿಗೆ ಸುಖ ಸಿಕ್ಕಿಲ್ಲ. ಅದಕ್ಕೆ ಲಲಿತೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ಅವರು ಹಂಬಲಿಸುತ್ತಿದ್ದಾರೆ. ಅವಳು ಜೊತೆಗಿದ್ದರೆ ತನ್ನನ್ನು ಚನ್ನಾಗಿ ವಿಚಾರಿಸಿಕೊಂಡಾಳು ಎಂಬ ನಂಬಿಕೆಯೂ ಇದೆ. ಏನಾದರೂ ಆಗಲಿ, ಅವಳನ್ನು ತನ್ನ ಮನೆಗೆ ಬಂದಿರುವಂತೆ ಮಾಡುತ್ತೇನೆ ಎಂದು ಪಣ ತೊಟ್ಟಿದ್ದಾರೆ.

ಒಂದು ದಿನ, ಎರಡು ದಿನ. ಎಷ್ಟು ದಿನ ಶಾಸ್ತ್ರಿಗಳನ್ನು ಸುಳ್ಳು ಹೇಳಿ ದೂರವಿಡಲಾದೀತು? ಷೈಲಾಕ್ ತನ್ನ ಪಾಲಿನ ರಾತ್ಲು ಮಾಂಸವನ್ನು ಕೇಳುತ್ತಿದ್ದಾನೆ. ಈಗಲೂ ಅವನಿಗೆ ಸಲ್ಲಬೇಕಾದ ಹಣ ಸಿಕ್ಕಿದರೆ ಅದನ್ನು ಕೊಟ್ಟುಬಿಟ್ಟು ತಪ್ಪಿಸಿಕೊಳ್ಳಬಹುದು. ಆದರೆ ಹಣವನ್ನೆಲ್ಲಿಂದ ತರುವುದು?

ರಂಗಣ್ಣನಿಗೆ ಎಲ್ಲಾ ವಿಷಯಗಳನ್ನೂ ತಿಳಿಸಿಬಿಡಲೆ? ಅವನೀಗೆಲ್ಲಿಂದ ಐನೂರು ರೂಪಾಯಿ ತಂದಾನು? ಈಗತಾನೇ ಕಾಹಿಲೆಯಿಂದ ಸುಧಾರಿಸಿಕೊಳ್ಳುತ್ತಿರುವ ಅವನ ಮನಶ್ಶಾಂತಿಯನ್ನು ಪುನಃ ಕಲಕಲೇ? ಸ್ವಲ್ಪವನ್ನು ಮಹತ್ತರವಾಗಿ

ಯೋಚಿಸುವ ಅವನಿಗೆ ಈ ವಿಷಯ ತಿಳಿಸುವುದಾದರೂ ಹೇಗೆ? ರಂಗಣ್ಣನಿಗೆ ಸ್ವಲ್ಪವೂ ಕರುಣೆ ತೋರಿಸುವಂತಹನಲ್ಲ ಸುಬ್ಬಾಶಾಸ್ತ್ರಿ! ರಂಗಣ್ಣನೊಡನೆ ಸುಬ್ಬಾಶಾಸ್ತ್ರಿಗಳು,

'ರಂಗಣ್ಣ, ನಿನ್ನ ಜೀವ ಉಳಿದದ್ದು ನನ್ನಿಂದ' ಎಂದು ಅಟ್ಟಹಾಸ ಮಾಡಿದರೆ ಅದನ್ನು ಸಹಿಸಿ ಅವನು ಜೀವದಿಂದಿರಲು ಬಯಸಿಯಾನೇ? ಎಂತಹ ವಿಪತ್ಕಾಲದಲ್ಲಿಯೂ ತನ್ನವರ ಸಹಾಯ ಬೇಡಲು ನಿರಾಕರಿಸಿದ ಅಭಿಮಾನಿ ಅವನು! ಅವನನ್ನು ಈಗ ಇಕ್ಕಟ್ಟಿನಲ್ಲಿ ಸಿಕ್ಕಿಸುವುದು ಆಗದ ಮಾತು.

ಇನ್ನುಳಿದಿರುವ ಆಸೆಯ ಎಳೆಯೆಂದರೆ ಸೆಟ್ಟಿಯ ಬಾಕಿ ವಸೂಲಿ. ಆದರೆ ಅವನ ಪತ್ತೆಯೇ ಇಲ್ಲ. ಅವನ ಹೆಂಡತಿ ತನಗೆ ಒಂದು ತಿಂಗಳಿಂದ ಅವರ ಸಮಾಚಾರವೇ ತಿಳಿದಿಲ್ಲವೆಂದು ಹೇಳುತ್ತಾಳೆ. ಎಂದಿಗೆ ಬರುತ್ತಾನೋ ಆ ಮಹರಾಯ!

ಶಾಸ್ತ್ರಿಗಳು ಇನ್ನೊಮ್ಮೆ ಸಿಕ್ಕಾಗ ಬಹಳ ನಯದಿಂದ ಅವರನ್ನು ಕೇಳಿಕೊಂಡಳು: 'ದಯೆಯಿಟ್ಟು ಸ್ವಲ್ಪ ಅವಕಾಶ ಕೊಡಿ. ನಿಮ್ಮ ಹಣವನ್ನು ಖಂಡಿತವಾಗಿ ತೀರಿಸುತ್ತೇನೆ.'

'ಈಗ ನನಗೆ ದುಡ್ಡು ಬೇಕು, ಅದಿಲ್ಲದೆ ನನ್ನ ಪಥ ನಡೆಯುವಂತಿಲ್ಲ ಎಂದು ಯಾರು ಹೇಳಿದರು. ಇಂತಹ ಐನೂರು ರೂಪಾಯಿಗಳು ಎಷ್ಟುಸಾರೆ ನನ್ನ ಕೈಯಿಂದ ಜಾರಿಹೋಗಿವೆಯೋ ಈ ಜೀವಮಾನದಲ್ಲಿ!'

'ಹಾಗಾದರೆ ನನ್ನನ್ನೇಕೆ ಇಷ್ಟು ಹಿಂಸೆ ಮಾಡುತ್ತಿರುವಿರಿ? ನಾಲ್ಕು ದಿನ ತಾಳಿ. ನಿಮ್ಮ ದುಡ್ಡು ಕೊಟ್ಟುಬಿಡುತ್ತೇನೆ. ಬೇಕಾದರೆ ಬಡ್ಡಿ ಸಹಿತ'

'ಇದೊಳ್ಳೇ ಚನ್ನಾಗಿದೆ ಲಲಿತ! ತೆಗೆದೆಯಲ್ಲಾ ನಿನ್ನ ವಿದ್ಯೇನ? ನಾನೇನು ಲೇವಾದೇವಿಗೆ ನಿನಗೆ ಸಾಲ ಕೊಟ್ಟೆನೆಂದು ತಿಳಿದೆಯೇನು? ಈ ರೀತಿ ವೇಷ ಕಟ್ಟಿದರೆ ನಾನು ಮೋಸಹೋಗುವವನಲ್ಲ. ಅಂದು ನನ್ನ ನಿಯಮಕ್ಕೆ 'ಹೂಂ' ಎಂದವಳು ಈಗ ತಪ್ಪಿಸಿಕೊಳ್ಳಲೆತ್ನಿಸುತ್ತಾಳೆ. ಬೇಕಾದರೆ ಇನ್ನೂ ಸಾವಿರ ರೂಪಾಯಿ ತೆಗೆದುಕೋ, ನಿನ್ನ ಮಾತನ್ನು ಮಾತ್ರ ಉಳಿಸಿಕೋ.'

'ಆಗ ವಿಪತ್ತಿನಲ್ಲಿ ಹಿಂದೆ ಮುಂದೆ ಯೋಚಿಸದೆ ನೀವು ಹೇಳಿದ್ದಕ್ಕೆ ಸಮ್ಮತಿಯಿತ್ತೆ. ಅದನ್ನೇ ನೀವು ಗಟ್ಟಿಮಾಡುವುದೇ?'

'ನನಗದೆಲ್ಲಾ ಗೊತ್ತಿಲ್ಲ. ಮಾತು ಎಂದರೆ ಮಾತು. ಮಿಸುಕಾಡುವಂತಿಲ್ಲ. ಇನ್ನು ಮೂರು ದಿನಗಳೊಳಗೆ ಬಂದುಬಿಡಬೇಕು. ಇಲ್ಲದಿದ್ದರೆ ನೋಡು ಒಳ್ಳೆಯದಾಗುವುದಿಲ್ಲ.'

'ನೀವು ಮಾಡಿದ್ದು ಮಾಡಿಕೊಳ್ಳಿ. ಏನಾಗುತ್ತದೆಯೋ ದೇವರಿದ್ದಾನೆ.'

'ನಿಜವಾಗಿಯೂ ಇದು ನಿನ್ನ ಮನಸ್ಸಿನಿಂದ ಬಂದ ಮಾತೇನು? ನನಗೆ ಸುಮ್ಮನೇ ಕಣ್ಣಿಗೆ ಮಣ್ಣೆರಚಬೇಡ. ಹಾಗೆ ಸುಮ್ಮನೇ ಬಿಡುವಂತಹವನು ನಾನಲ್ಲ ವೆಂದು ನಿನಗೆ ಗೊತ್ತು. ಗೊತ್ತಿಲ್ಲದಿದ್ದರೆ ಹೇಳುತ್ತೇನೆ ಕೇಳು. ನಿನ್ನ ಭಾವ ರಂಗಣ್ಣ ಇದಾನಲ್ಲ ಆ ಮಹಾಪುರುಷನ್ನ ಕಂಡು, ' ನಿನ್ನ ಲಲಿತೆ ನಿನ್ನ ಕಾಹಿಲೆ ಗೋಸ್ಕರ ನನ್ನಹತ್ತಿರ ಇಷ್ಟು ದುಡ್ಡು—ಐನೂರೋ, ಸಾವಿರಾನೋ—ಎಷ್ಟೋ ಒಂದು ನೀನು ರುಜು ಹಾಕಿದ ಪತ್ರದಲ್ಲಿ ಬರೆದರಾಯಿತು. ಸಾಲ ಮಾಡಿದಾಳೆ ತೆತ್ತುಬಿಡು ' ಎಂದು ಕೇಳುತ್ತೇನೆ. ಆಗ ಆ ಕಾಸಿಲ್ಲದೆ ಲಾಟರಿ ಹೊಡೆಯುವವ ಅದ್ಹೇಗೆ ಅದನ್ನು ಹೊಂದಿಸುತ್ತಾನೋ ತಮಾಷೆ ನೋಡಿದರಾಯಿತು. '

' ನಾನು ಮಾಡಿದ ಸಾಲಕ್ಕೆ ಅವರು ಹೊಣೆ ಎಂದು ಎಲ್ಲಿಯೂ ಹೇಳಿಲ್ಲ. '

' ಅದು ನನಗೆ ಗೊತ್ತು. ನಾನೂ ಕೋರ್ಟು ಕಛೇರಿ ತಿರುಗಿದವನು. ಅದನ್ನು ನಿನ್ನಿಂದ ಕಲಿಯಬೇಕಾಗಿಲ್ಲ. ಮುಂದೇನು ಮಾಡುತ್ತೇನೆ ಗೊತ್ತೇನು ? ನಿನ್ನಮೇಲೆ ಕೋರ್ಟಿನಲ್ಲಿ ದಾವಾ ಹಾಕಿ, ನಿನ್ನ ಆ ರಂಗಣ್ಣನ್ನ ಕೋರ್ಟಿನ ಸಾಕ್ಷ್ಯಕ್ಕೆ ಕರೆದು, ನಿನ್ನ ಮತ್ತು ಅವನ ಚರಿತ್ರೆಯನ್ನೆಲ್ಲಾ ಅಲ್ಲಿ ಕೆದಕಿ, ಡಿಕ್ರಿ ಮಾಡಿ, ನಿನ್ನದು ಅಂತ ಅವನ ಮನೇನೆಲ್ಲಾ ಜಫ್ತಿ ಮಾಡಿ—ಆಮೇಲೆ ಬೇಕಾದರೆ ಅವನು ಬಿಡಿಸಿಕೊಳ್ಳಲಿ—ಆಮೇಲೆ ನಿನಗೆ ಸಾಲಕ್ಕೆಜೈಲು ವಾರಂಟು ತೆಗೆದು ನಿನ್ನನ್ನು ಉತ್ಸವ ಕರೆದುಕೊಂಡು ಹೋಗುವಾಗ, ಆ ನಾಮರ್ದ ನಿನ್ನ ಭಾವ ಯಾವ ಮುಖ ತೆಗೆದುಕೊಂಡು ಇರುತ್ತಾನೆ ಅನ್ನೋದನ್ನಾದರೂ ನೋಡಿ ತೃಪ್ತಿ ಪಡುತ್ತೇನೆ. ಆ ದಿವಸ ಮನೆಗೆ ಬಂದರೆ ನೀನೊಬ್ಬ ಪತಿವ್ರತೆ, ಅವನೊಬ್ಬ ನಿನ್ನ ರಕ್ಷಕ; ನನ್ನ ಕತ್ತು ಹಿಡಿದು ತಳ್ಳುತ್ತೇನೆ ಅಂತ ಬಗುಳಿದ್ದನ್ನ ಮರೆತುಬಿಟ್ಟೆ ಅಂತ ತಿಳಿದೆಯೇನು? ಲಲಿತ, ಇಷ್ಟು ದಿವಸವಾದರೂ ಸುಬ್ಬಾಶಾಸ್ತ್ರಿ ಎಂತಹವನು ಎಂದು ತಿಳಿಯದ ನಿನ್ನನ್ನು ಕಂಡರೆ ನಗು ಬರುತ್ತದೆ. '

' ನಿಮಗೆ ನರಕ ಪ್ರತ್ಯೇಕವಾಗಿ ಸೃಜಿಸಬೇಕಾಗುತ್ತೆ. '

' ಅದು ಹೇಗಾದರೂ ಇರಲಿ. ಅದು ನನ್ನ ಜವಾಬ್ದಾರಿಯೂ ಅಲ್ಲ, ನಿನ್ನದೂ ಅಲ್ಲ. ನಿನಗೆ ಪ್ರತ್ಯೇಕ ಸ್ವರ್ಗವೇ ರಿಸರ್ವ್ ಆಗಿದೆ. ಅದಲ್ಲ ಈಗಿನ ಮಾತು. ನಿನ್ನ ದುಡ್ಡು ಯಾರಿಗೆ ಬೇಕಾಗಿದೆ? ಈ ಕ್ಷಣ ನಿಂತಮೆಟ್ಟಿನಲ್ಲಿ ದುಡ್ಡು ಕೊಟ್ಟರೂ ಯಾರಿಗೆ ಬೇಕು ? ಕೊಡುವುದಾದರೂ ಎಲ್ಲಿಂದ? ರಂಗಣ್ಣನಿಗೆ ಹೊಸ ಹಳ್ಳಿಯಲ್ಲಿ ' ಧಕಲ್ಪಟ್ಟಿ ' ಹೊನ್ನಹಳ್ಳಿಯಲ್ಲಿ ಅರ್ಧಚಂದ್ರಪ್ರಯೋಗ. ಬೆಂಗ ಳೂರಲ್ಲಿ ಭಿಕ್ಷಾಪಾತ್ರೆ. ದುಡ್ಡು ಆಕಾಶದಿಂದ ಉದುರುತ್ತೇನು? ನಿನಗೆ ಇನ್ನೊಂದು ಯೋಚನೆಯಿರಬಹುದು. ಮೆಲ್ಲಗೆ ಇಲ್ಲಿಂದ ಊರಿಗೆ ಜಾರಿಬಿಡೋಣ ಎಂದು. ಅದನ್ನೂ ಹೇಳಿಬಿಡುತ್ತೇನೆ. ನಮ್ಮ ಊರಿನಲ್ಲಿ ನನ್ನ ಅಧಿಕಾರ ಎಷ್ಟರಮಟ್ಟಿಗೆ

ಚಲಾಯಿಸೇನೆಂಬುದು ರಾಯನಕೋಣೆಯಲ್ಲಿದ್ದ ಕೆಲವು ತಿಂಗಳುಗಳಲ್ಲಾದರೂ ನಿನಗೆ ಅರ್ಥವಾಗಿರಬೇಕು. ನಾನು ಏನು ಮಾಡಿಯೇನು, ಏನು ಬಿಟ್ಟೇನು ಎಂದು ಹೇಳುವುದು ಅವಶ್ಯಕವಿಲ್ಲ. ಒಟ್ಟಿನಲ್ಲಿ ನನ್ನ ಇಷ್ಟ ಪೂರೈಸಿಕೊಳ್ಳಲು ಆಕಾಶ-ಪಾತಾಳ ಒಂದುಮಾಡಿಯೇಮಾಡುತ್ತೇನೆ.'

ಇವರ ಹತ್ತಿರ ಹೆಚ್ಚುಮಾತಾಡಿ ಪ್ರಯೋಜನವಿಲ್ಲವೆಂದು ಲಲಿತೆ ಹೊರಟು ಬಿಟ್ಟಳು. ಶಾಸ್ತ್ರಿಗಳು ಅವಳನ್ನು ಕರೆದು ಹೇಳಿದರು:—

'ಲಲಿತಾ ಸಾಧ್ಯವಾದರೆ ಯಾವ ಗಲಾಟೆಯೂ ಆಗದಿರಲೆಂದು ನಾನು ಈ ರೀತಿ ನಿನಗೆ ಅವಕಾಶ ಕೊಡುತ್ತಿದ್ದೇನೆಯೇ ಹೊರತು ಯಾವ ಹೆದರಿಕೆಯಿಂದಲೂ ಅಲ್ಲ. ನಿನಗೆ ರಂಗಣ್ಣ ಬೇಕಾದವನಾಗಿದ್ದ ಪಕ್ಷದಲ್ಲಿ ಅವನಿಗೆ ತೊಂದರೆ ಕೊಡುವುದು ನನಗಿಷ್ಟವಿಲ್ಲ. ಆದರೆ ವರ್ಷಗಟ್ಟಲೆ ಕಾಯಲಾರೆ ಎನ್ನುವುದು ಮಾತ್ರ ನಿನಗೆ ತಿಳಿದಿರಲಿ.'

* * * *

ಲಲಿತೆ ತನ್ನ ಜೀವನವನ್ನು ಒಂದುಸಾರೆ ನೆನಪಿಗೆ ತಂದುಕೊಂಡಳು. ಶಾಸ್ತ್ರಿಯ ಕೈಯಿಂದ ಪಾರಾಗುವ ಬಗೆಯಂತೂ ಇಲ್ಲವೇ ಇಲ್ಲ. ರಂಗಣ್ಣ-ಕಾಮಾಕ್ಷಿಯರ ನಡುವೆ ತಾನೊಂದು ಗೋಡೆಯಾಗಿ ನಿಂತಿದ್ದೇನೆಂಬ ಅರಿವು ಅವಳಿಗೆ ವ್ಯಸನವುಂಟುಮಾಡುತ್ತಿತ್ತು. ರಂಗಣ್ಣ ಲಲಿತೆ ತನ್ನ ಜೀವವಾಗಿದ್ದಾಳೆಂಬ ವಿಷಯವನ್ನು ಬಚ್ಚಿಡಲು ಸ್ವಲ್ಪವೂ ಪ್ರಯತ್ನಿಸುತ್ತಿರಲಿಲ್ಲ. ಕಾಮಾಕ್ಷಿ ಇದನ್ನು ಕಂಡೂ ಕಾಣದಿರುತ್ತಿದ್ದಳು. ಲಲಿತೆಯ ಗುಣಗಳಿಗೆ ಮಾರುಹೋದ ಆಕೆ ಆ ವಿಷಯದಲ್ಲಿ ಉಸಿರೆತ್ತುವುದನ್ನು ಬಿಟ್ಟುಬಿಟ್ಟಳು. ಆ ಅಪೂರ್ವವಾದ ಪದವಿಗೆ ಲಲಿತೆ ತಕ್ಕ ಅರ್ಹತೆ ಪಡೆದಿದ್ದಾಳೆಂದು ಅವಳಲ್ಲಿಯ ನ್ಯಾಯ ಪಕ್ಷಪಾತ ಬುದ್ಧಿ ಹೇಳುತ್ತಿತ್ತು. ಅವಳಿಲ್ಲದಿದ್ದರೆ ತಾವೇನಾಗಬೇಕಾಗಿತ್ತು? ಈ ಯೋಚನೆ ಬಂದು ಕೃತಜ್ಞತೆಯಿಂದ ಎದೆ ತುಂಬಿತುಳುಕುತ್ತಿತ್ತು. ಆದರೆ ಆವಳಲ್ಲಿಯ ಹೆಣ್ಣಿನ ಜೀವ ಗಂಡ ಪೂರ್ತಿ ತನ್ನವನಾಗಬೇಕೆಂದು ಬಯಸುತ್ತಿತ್ತು. ಅರ್ಹತೆಯ ಮಾತು ಬೇರೆ; ಬಯಕೆಯ ಮಾತು ಬೇರೆ. ಎಲ್ಲ ಬಯಕೆಗಳಿಗೂ ಅರ್ಹತೆಯಿರುವುದಿಲ್ಲ. ಎಲ್ಲಾ ಬಯಕೆಗಳ ಹಿಂದೂ ನ್ಯಾಯಾನ್ಯಾಯ ವಿವೇಚನೆ ಒತ್ತಾಸೆಯಾಗಿರುವುದಿಲ್ಲ. ಬಯಕೆ ಮಾನವನ ಸ್ವಭಾವಜನ್ಯವಾದುದು. ನ್ಯಾಯಾನ್ಯಾಯ ವಿವೇಚನೆ ಸಂಸ್ಕೃತಿಯಿಂದ ಬಂದದ್ದು. ಈ ಎರಡರ ಮಧ್ಯೆ ಕಾಮಾಕ್ಷಿ ನಲುಗಿಹೋಗುತ್ತಿದ್ದಳು. ಪ್ರಪಂಚದಲ್ಲಿ ಎಷ್ಟೋ ಸಂಸಾರದಲ್ಲಿ ಏರುಪೇರುಗಳಿದ್ದೇ ಇರುತ್ತವೆ. ಆದರೆ ಅದರಲ್ಲಿನವರು 'ಪಾಲಿಗೆ ಬಂದದ್ದು ಪಂಚಾಮೃತ' ವೆಂದು ಕಸದಲ್ಲಿ ರಸ ಕಾಣುತ್ತಾರೆ. ಲಲಿತೆ ಇರುವತನಕ ರಂಗಣ್ಣ ಈ ರೀತಿ ತೃಪ್ತಿ ಹೊಂದಲಾರ.

ಈ ಸಮಸ್ಯೆಗೆ ಪರಿಹಾರವೆಂತು ?

ಲಲಿತೆಗೆ ತನ್ನ ವಿಷಯದಲ್ಲಿಯೇ ಸದಭಿಪ್ರಾಯವಿರಲಿಲ್ಲ. ತಾನು ಪತಿತೆ. ತನಗೆ ಮೋಕ್ಷವಿಲ್ಲ. ತಾನು ರಂಗಣ್ಣನ ಪ್ರೀತಿಯನ್ನು ಬಯಸಲಿಲ್ಲ. ಆ ಪ್ರೀತಿಗೆ ತಾನು ಪಾತ್ರಳಲ್ಲ. ರಂಗಣ್ಣನಂತಹ ಮಹತ್ವಾಕಾಂಕ್ಷೆಯುಳ್ಳ ಜೀವಿ ಈ ದೌರ್ಬಲ್ಯದಿಂದ ಬಂಧಿತನಾಗುವುದು ಯುಕ್ತವಲ್ಲ. ಹಾಗಾದರೆ ಕಾಮಾಕ್ಷಿಗೆ ಆ ಯೋಗ್ಯತೆ ಯಿದೆಯೇನು? ಇಲ್ಲದಿರಬಹುದು. ಆದರೆ ರಂಗಣ್ಣನಿಂದ ಸ್ವಲ್ಪ ಆದರ ದೊರೆತರೆ ಅವಳು ಉತ್ತಮಳಾದ ಗೃಹಿಣಿಯಾದಾಳು. ಅವನ ಜೀವನದಲ್ಲಿ ಅಂತಹ ಪ್ರಭಾವ ಬೀರದಿದ್ದರೂ ಅವನ ಸೌಖ್ಯವನ್ನು ನೋಡಿಕೊಂಡಾಳು. ಅಷ್ಟು ಸಾಕು. ಹಾಗಾದರೆ ತಾನು ? ಹಿಂದೊಮ್ಮೆ ಸದವಕಾಶವಿತ್ತು. ತನ್ನ ಜೀವ ರಂಗಣ್ಣನ ಜೀವಕ್ಕೆ ಹೊಂದಿಕೊಂಡಿದ್ದರೆ ಏನೇನು ಸಾಧಿಸಬಹುದಾಗಿತ್ತೋ! ಈಗದನ್ನು ಯೋಚಿಸಿ ಫಲವಿಲ್ಲ. ಹುಚ್ಚು ಹಿಡಿಸುವ ' ರೆ ' ಅದು.

ರಂಗಣ್ಣನ ಮುಂದಿನ ಜೀವನ ಹಳ್ಳಿಯಲ್ಲೇ ಸಾಗಬೇಕು. ತಾನೂ ಹಳ್ಳಿಗೆ ಹೋಗಬೇಕು ? ಹಳ್ಳಿಯ ಸಮಾಜ ತನಗೆ ಆಶ್ರಯವಿತ್ತ ರಂಗಣ್ಣನನ್ನು ಸಹಾನು ಭೂತಿಯಿಂದ ಎಂದೂ ನೋಡುವುದಿಲ್ಲ. ಆದರಿಂದ ಇನ್ನೂ ಏನೇನು ದುರಂತ ಗಳು ಕಾದಿವೆಯೋ ? ರಂಗಣ್ಣ ಏನೇನು ತೊಂದರೆಗಳನ್ನು ಅನುಭವಿಸ ಬೇಕಾಗುವುದೋ ?

ಯೋಚಿಸಹೋದಂತೆ ಒಂದೇ ಪರಿಹಾರ ಕಾಣುತ್ತಿತ್ತು. ಒಂದೇ ದಾರಿ ಯಲ್ಲಿ ಬೆಳಕು ಕಾಣುತ್ತಿತ್ತು. ಅವಳು ಯತ್ನವಿಲ್ಲದೆ ರಂಗಣ್ಣನ ಜೀವನದಲ್ಲಿ ಪ್ರವೇಶಿಸಿದ್ದಳು. ಈಗ ಹೊರಗಾಗುವುದಕ್ಕೆ ಒಂದೇ ಒಂದು ದಾರಿ. ಈ ಎಲ್ಲಾ ಸಮಸ್ಯೆಗಳಿಗೂ ಒಂದೇ ಒಂದು ಪರಿಹಾರ. ಅದು–ಯೋಚಿಸಲು ಭಯಂಕರ ವಾಗಿದ್ದರೂ–ತರ್ಕಬದ್ಧವಾದ ಉತ್ತರ. ಮರಣ.

ಹೌದು, ಸಾವು ! ಹೆದರಿಕೆಯೆ ? ಇಲ್ಲ. ಬರಬರುತ್ತಾ, ಅದನ್ನೇ ಕುರಿತು ಯೋಚಿಸುತ್ತಾ ಅದು ಬಹಳ ಸೌಮ್ಯವಾಗಿ ಕಾಣಿಸುತ್ತಿದೆ. ಬದುಕಿನಂತೆಯೇ ಸಾವು. ಅದರಲ್ಲೇನು ವಿಶೇಷ ? ಇನ್ನು ತಾನೇನು ಸಾಧಿಸಬೇಕು ? ಬದುಕಿನಲ್ಲಿ ಹೊಲಸನ್ನು ಕಂಡಿದ್ದಾಯಿತು. ಕೊನೆಯಲ್ಲಿ ಸೊಗಸನ್ನು ಕಂಡಿದ್ದಾಯಿತು. ಈ ಸೊಗಸು ಕೊನೆಯವರೆಗೂ ನಿಲ್ಲುವುದು ಅನುಮಾನ. ಪುನಃ ಹೊಲಸನ್ನು ಕಾಣುವ ಮುನ್ನ ಮರ್ಯಾದೆಯಿಂದ ಕಾಲ್ತೆಗೆಯುವುದು ಒಳಿತು.

ಲಲಿತೆ ಜೀವನದಲ್ಲಿ ಹೋರಾಡಿ ಸೋತುಹೋಗಿದ್ದಳು. ಕಷ್ಟದಲ್ಲಿ ತೊಳಲಿ ಬಳಲಿದ್ದ ಆ ಜೀವ ಈಗ ಸುಖ ಸಿಕ್ಕಾಗ ವಿಶ್ರಾಂತಿ ಬಯಸುತ್ತಿತ್ತು.

ಹೆಚ್ಚುಕಡಿಮೆ ಅವಳು ಒಂದು ನಿರ್ಧಾರಕ್ಕೆ ಬಂದಿದ್ದರೂ, ಅದು ಜೀವ-ಸಾವುಗಳ ಮಾತಾಗಿದ್ದರಿಂದ ಯಾವುದನ್ನೂ ಕೂಡಲೇ ಮಾಡದೇಹೋದಳು.

ವೆಂಕಟರಮಣಸೆಟ್ಟಿ ಬೆಂಗಳೂರಿಗೆ ಬಂದ. ಲಲಿತೆ ಅವನನ್ನು ನೋಡಿದಳು. ಸೆಟ್ಟಿ ಕಣ್ಣಿನಲ್ಲಿ ನೀರು ತಂದುಕೊಂಡು ಹೇಳಿದ:

'ಲಲಿತಮ್ಮ, ನಾನು ಬಹಳ ಪಾಪಿ. ಹೊನ್ನು ಮುಟ್ಟಿದರೆ ಅದು ಮಣ್ಣಾಗುತ್ತದೆ. ಹಿಡಿದದ್ದು ಹಾವಾಗಿ ಕೈಕಚ್ಚುತ್ತದೆ. ಇಲ್ಲಿಂದ ಹೊರಟವನು ಮಿಲಿಟರಿ ಕಂಟ್ರಾಕ್ಟು ಮಾಡಿದೆ. ಅದರಿಂದ ತಕ್ಕಮಟ್ಟಿಗೆ ಹಣವೇನೋ ಸಂಪಾದನೆಯಾಯಿತು. ನಾನಿದ್ದದ್ದು ದೂರದೇಶ. ದೂರದೇಶದವನು ಬಂದು ಹಣ ಸಂಪಾದನೆ ಮಾಡುತ್ತಿದ್ದದ್ದು ಅಲ್ಲಿನವರಿಗೆ ಹಿಡಿಸಿರಲಿಲ್ಲ. ಅಲ್ಲಿ ಪುಂಡು ಪೋಕರಿಗಳೇ ಜಾಸ್ತಿ. ನನ್ನ ಹಣವನ್ನೆಲ್ಲಾ ಸಾಮಾನಿನಮೇಲೆ ಹಾಕಿದ್ದೆ. ಅದೇ ದೊಡ್ಡ ಮೂರ್ಖತನವಾಯಿತು. ಒಂದು ದಿನ ಪೋಲಿಗಳು ನಾನು ಸಾಮಾನು ಕೂಡಿಟ್ಟ ಮನೆಗೆ ನುಗ್ಗಿ ಎಲ್ಲವನ್ನೂ ದೋಚಿಕೊಂಡು ಹೋದರು. ನನ್ನ ಜೀವ ಉಳಿಯುವುದೇ ಕಷ್ಟವಾಯಿತು. ಹೊಸಬನಾಗಿದ್ದ ನನಗೆ ಅಲ್ಲಿ ಯಾವ ನ್ಯಾಯವೂ ದೊರೆಯಲಿಲ್ಲ. ಇಲ್ಲಿಂದ ತೆಗೆದುಕೊಂಡು ಹೋದುದನ್ನೂ ಕಳೆದುಕೊಂಡು ಬರಿಗೈಯಿಂದ ಹಿಂತಿರುಗಿದೆ.

ಲಲಿತೆಗೆ ಆಡಲು ಮಾತೇ ಬರಲಿಲ್ಲ. ತನ್ನ ದುಃಖಕ್ಕಿಂತ ಅವನ ದುಃಖ ಇನ್ನೂ ಹೆಚ್ಚಾಗಿತ್ತು. ಮನೆತುಂಬ ಮಕ್ಕಳು, ಹೆಂಡತಿ; ತುಂಬಿದ ಸಂಸಾರ. ಅದನ್ನು ಸೆಟ್ಟಿ ಹೇಗೆ ನಿರ್ವಹಿಸುತ್ತಾನೋ?

'ಲಲಿತಮ್ಮ, ನನ್ನ ಜೀವ ಮಾತ್ರ ಬದುಕಿದ್ದರೆ ನಿಮ್ಮ ಹಣ ತೀರಿಸದೇ ಹೋಗುವುದಿಲ್ಲ. ಆ ದಿನ ದೇವರು ಎಂದು ಕೊಡುತ್ತಾನೋ? ನಿಮಗೆ ಈ ರೀತಿ ಮೋಸಮಾಡಿದ್ದಕ್ಕೆ ಕ್ಷಮಿಸಿ ಎಂದು ಕೇಳಲೂ ನನಗೆ ಬಾಯಿಲ್ಲ.'

ಲಲಿತೆ ಹೇಳಿದಳು:

'ಹೋಗಲಿ ಬಿಡಿ. ನಿಮಗೆ ಅನುಕೂಲವಾದಾಗ ಆ ಹಣ ನಮ್ಮ ಭಾವ ರಂಗಣ್ಣ ಎಂಬುವರಿಗೆ ಕೊಟ್ಟುಬಿಡಿ. ನಾನು ಮಾಡಿದ ಸಾಲ ಅವರು ಈ ಹಣದಿಂದ ತೀರಿಸುತ್ತಾರೆ. ಅವರ ಅಡ್ರೆಸ್ ತೆಗೆದುಕೊಳ್ಳಿ.'

ಸೆಟ್ಟಿ ಕಣ್ಣೀರು ಸುರಿಸುತ್ತ ಅವಳ ಕ್ಷಮಾಯಾಚನೆ ಪದೇಪದೇ ಮಾಡಿದ. ಲಲಿತೆ ಅವನನ್ನು ಸಮಾಧಾನ ಮಾಡುತ್ತಾ 'ಇದಕ್ಕೋಸ್ಕರ ಯೋಚಿಸಬೇಡಿ. ಮೊದಲು ನಿಮ್ಮ ಸಂಸಾರದ ಯೋಚನೆ ನೋಡಿ. ನನ್ನ ಪಾಡು ಹೇಗಾದರೂ ಆಗುತ್ತದೆ. ನಾನು ಇದ್ದರೂ ಆಯಿತು, ಸತ್ತರೂ ಆಯಿತು.'

ಅಲ್ಲಿಂದ ಪೇಟೆಗೆ ಹೋಗಿ ಮನೆಗೆ ಬಂದಳು. ಮನೆಯ ಬಾಗಿಲ ಹತ್ತಿರ ಸುಬ್ಬಾಶಾಸ್ತ್ರಿಗಳು ಸಿಕ್ಕರು.

' ರಂಗಣ್ಣನನ್ನು ನೋಡಿ ಎಲ್ಲ ತಿಳಿಸೋಣ ಎಂದು ಬಂದೆ ' ಎಂದರು.

' ಇನ್ನೊಂದೇದಿನ ಶಾಸ್ತ್ರಿಗಳೇ. ಇಷ್ಟು ದಿನ ತಡೆದವರು ಇನ್ನು ಒಂದು ದಿನ ತಡೆಯಲಾರಿರಾ ? '

' ಇಲ್ಲ, ಒಂದು ದಿನ ಒಂದು ದಿನ ಎಂದು ತಿಂಗಳಾಯಿತು. '

' ಶಾಸ್ತ್ರಿಗಳೇ, ನನ್ನ ಪಾಡಿಗೆ ನಾನಿದ್ದವಳನ್ನು ನೀವು ಹಾಳುಮಾಡಿದಿರಿ. ಏನೂ ತಿಳಿಯದ ಹುಡುಗಿಯನ್ನು ನಿಮ್ಮಂತಹ ಹಿರಿಯರು, ತಿಳಿದವರು, ಧರ್ಮ ಕರ್ಮ ನಿಷ್ಠರು ಇಲ್ಲಿಗೆ ತಂದು ಪಾಪಕೂಪಕ್ಕೆ ತಳ್ಳಿಹೋದಿರಿ. ನಿಮ್ಮನ್ನು ನಾನು ಎಂದೂ ಏನೂ ನನಗೋಸ್ಕರ ಯಾಚಿಸಲಿಲ್ಲ. ನಿಮ್ಮನ್ನು ಯಾಚಿಸುವುದು ಎಲ್ಲ ಪಾಪಗಳಿಗಿಂತ ದೊಡ್ಡದು ಎಂದು ತಿಳಿದಿದ್ದೆ. ಈಗಲೂ ಅದೇ ರೀತಿ ತಿಳಿದಿದ್ದೇನೆ. ಆದರೆ ಈಗ ನಾನು ಮಾಡುತ್ತಿರುವುದು ಯಾಚನೆಯೆಂದಾದರೂ ತಿಳಿಯಿರಿ. ಏನಾದರೂ ಹೆಸರಿಡಿ. ಈ ದಿನ ಮಾತ್ರ ತಡೆಯಿರಿ. ನಾಳೆ ಜೀವವಿಲ್ಲದ ಈ ಕಳೇಬರ ನಿಮ್ಮದೇ. '

ಶಾಸ್ತ್ರಿಗಳು ' ಒಂದೇದಿನ ' ಎಂದು ಹೊರಟುಹೋದರು.

* * * *

' ತಂಗೀ ! '

' ಬಂದೆ. '

' ಬಾ, ಕುಳಿತುಕೋ. ನಿನ್ನೊಡನೆ ಮಾತಾಡುವುದು ಬಹಳ ಇದೆ. :

' ಏನು ? '

' ತಂಗೀ, ಇದುವರೆಗೆ ನನ್ನ ವಿಷಯ ನಿನಗೇನೂ ತಿಳಿಸಲಿಲ್ಲ. ನಾನು ಭಾವನಿಗೆ ಸಂಬಂಧ ಆಗಬೇಕೆನ್ನುವುದರ ಹೊರತು ನಿನಗೆ ಬೇರೆ ಯಾವ ವಿಷಯವೂ ತಿಳಿಯದು. ಅದನ್ನೆಲ್ಲಾ ನಿನಗೆ ಹೇಳಿದರೆ ನೀನು ನನ್ನ ವಿಷಯವಾಗಿ ಜಿಗುಪ್ಸೆ ಪಟ್ಟುಕೊಳ್ಳುವಿ ಎಂದೇನೂ ಹೇಳಲಿಲ್ಲ. ಭಾವನೂ ಏನೂ ಹೇಳಲಿಲ್ಲವೆಂದು ತೋರುತ್ತದೆ. ಆದರೆ ಈಗ ಎಲ್ಲಾ ವಿಷಯ ನಿನಗೆ ತಿಳಿಸಬೇಕೆಂದು ಮನಸ್ಸಾಗಿದೆ. ನಾನೆಲ್ಲೆಲ್ಲಿ ಎಡವಿದೆ, ಏನೇನು ಪಾಪ ಮಾಡಿದೆ ಎಲ್ಲಾ ಹೇಳಬೇಕು ಎಂದೆನಿಸಿದೆ. ನಿನ್ನ ಆಕ್ಷೇಪವೇನೂ ಇಲ್ಲದಿದ್ದರೆ ಹೇಳುತ್ತೇನೆ. '

' ಏನೂ ಬೇಡ. ಅದ್ಯಾಕೆ ಈಗ ? '

' ಹಾಗಲ್ಲ ತಂಗಿ. ನಿನಗೆ ಎಂದಾದರೂ ನನ್ನ ವಿಷಯ ತಿಳಿಯದೇ ಹೋಗದು. ಆಗ ನೀನು ಇವಳು ಮೋಸಮಾಡಿದಳು, ನನಗೆ ಒಂದೂ ತಿಳಿಸಲಿಲ್ಲ

ಎಂದು ನನ್ನ ವಿಷಯವಾಗಿ ಅಸಹ್ಯಪಡಬಾರದು. ನಿನ್ನ ಸಹಾನುಭೂತಿ ಕಳೆದು ಕೊಳ್ಳುವುದು ನನಗೆ ಬಹಳ ವ್ಯಸನವನ್ನುಂಟುಮಾಡುತ್ತೆ. '

' ಏನೂ ತಿಳಿದುಕೊಳ್ಳಬೇಡಿ. ನಿಮ್ಮ ವಿಷಯವಾಗಿ ನನಗೆ ಏನೂ ಕೆಟ್ಟ ಭಾವನೆಯಿಲ್ಲ. '

' ಹಾಗೆ ನಾನು ಹೇಳಲಿಲ್ಲ ತಂಗಿ. ಮುಂದೆ ಏನಾದೀತು ಎಂದು ಯೋಚಿಸುತ್ತಿದ್ದೇನೆ. ನಾನು ಇಲ್ಲವಾದಬಳಿಕ ನನ್ನ ವಿಷಯವಾಗಿ ನಿನಗೆ ತಿಳಿಯದುದು ಏನೂ ಇರಕೂಡದು. ಎಲ್ಲವನ್ನೂ ತಿಳಿದಮೇಲೆ ನೀನು ಬೇಕಾದರೆ ಮರುಕ ಪಡು. ಎರಡಕ್ಕೂ ನಾನು ಅರ್ಹಳು. '

' ಇದ್ಯಾಕೆ ಹೀಗೆ ಮಾತಾಡುತ್ತೀರಿ ಇಂದು? ನಾನೇನಾದರೂ ನಿಮಗೆ ಬೇಸರವಾಗುವಂತೆ ಮಾಡಿದೆನೆ? '

' ಹುಚ್ಚಿ, ಅದಲ್ಲ. ನನ್ನ ಸರಿಯಾಗಿ ತಿಳಿದುಕೋ ಅಷ್ಟೆ. ಭಾವ, ನಾನು ಇಬ್ಬರೂ ಬಹಳ ಮುಖ್ಯವಾದ ವಿಚಾರ ನಿನ್ನಿಂದ ಮರೆಮಾಚಿದ್ದೇವೆ. ಇಲ್ಲಿಗೆ ಬರುವ ಮುಂಚೆ ನಾನು ಸೂಳೆಗೇರಿಯಲ್ಲಿ ಮಾನ ಮಾರಿಕೊಂಡು ಜೀವಿಸುತ್ತಿದ್ದೆ ಎಂದು ನಿನಗೆ ನಾವ್ಯಾರೂ ಹೇಳಲಿಲ್ಲ. '

' ................................ '

' ಈಗ ಹೇಳಿಯಾಯಿತು. ನನ್ನ ಮನಸ್ಸಿನ ಹೊರೆ ಹಗುರಾಯಿತು. ನಾನು ಮಾಡಿದ್ದನ್ನ ಸರಿಯೆಂದು ಒಪ್ಪಿಸಲು ಪ್ರಯತ್ನಿಸುವುದಿಲ್ಲ. ಆದರೆ ಒಂದು ವಿಷಯ ಮಾತ್ರ ಹೇಳುತ್ತೇನೆ. ಆ ಜೀವನ ನಾನು ಸ್ವಸಂತೋಷದಿಂದ ನಡೆಸಲಿಲ್ಲ. ಒಂದಾದಮೇಲೊಂದು ಏಟು ಬಿದ್ದು ಕೊನೆಗೆ ದಾರಿ ಕಾಣದೆ ಆ ದಾರಿ ಅವಲಂಬಿಸಬೇಕಾಯಿತು. ಇನ್ನುಳಿದ ವಿಷಯ ಭಾವನನ್ನು ಕೇಳು ಹೇಳುತ್ತಾರೆ.

' ನಿಮಗೇನೋ ಆಗಿದೆ. ಈಗ ಆ ವಿಷಯ ಮಾತಾಡಬೇಡಿ. '

' ನನಗೇನೂ ಆಗಿಲ್ಲ ತಂಗಿ. ನನ್ನ ಬದುಕಿನ ದಿನಗಳು ಬಹಳ ಸ್ವಲ್ಪ ಉಳಿದಿವೆ. ಅದಕ್ಕೆ ಸಿದ್ಧಮಾಡಿಕೊಳ್ಳುತ್ತಿದ್ದೇನೆ ಅಷ್ಟೆ. ನಾಳಿನಿಂದ ನನ್ನ ವೀಣೆ ನಿನ್ನದು. ಇದೊಂದು ದಿನ ಮಾತ್ರ ನನಗಿರಲಿ. ತಂಗಿ, ನನಗೆ ಬುದ್ಧಿ ತಿಳಿದಾರಭ್ಯ ನನ್ನ ಸುಖದಲ್ಲಿಯೂ ದುಃಖದಲ್ಲಿಯೂ ಒಡನಾಡಿ ಆಗಿದ್ದುದು ಅದೊಂದೇ. ಅದು ನನಗೆ ನನ್ನ ಮಗುವಿಗಿಂತ–ಅದು ಬದುಕಲಿಲ್ಲ–ಹೆಚ್ಚು ಪ್ರಿಯವಾದುದು. ಬಹಳ ಸೊಗಸಾದ ವೀಣೆಯದು. ಹಿಂದೆ ಪ್ರಸಿದ್ಧರಾದ ವಿದ್ವಾಂಸರು ಶಾರದಾ ದೇವಿಯ ಮುಂದೆ ಅದರಮೇಲೆ ಸಂಗೀತ ನುಡಿಸಿದ್ದರಂತೆ. ಆದರೆ ಅದು ನನ್ನ ಕೈಗೆ ಸಿಕ್ಕಿ ಕುಲಗೆಟ್ಟುಹೋಯಿತು. ಆ ನಿರ್ಜೀವ ವಸ್ತುವಿನಲ್ಲಿ–ನನಗೇನೋ ಸಜೀವವಾಗಿದ್ದಿತು–ಏನೂ ದೋಷವಿಲ್ಲ. ಅದನ್ನು ನಿನಗೆ ಕೊಟ್ಟಿದ್ದೇನೆ. ಚನ್ನಾಗಿ

ಕಾಪಾಡಿಕೋ. ಭಾವನ ಮನಸ್ಸು ಒಲಿಸಬೇಕಾದರೆ ಅದೊಂದೇ ಸಾಧನ. ಶ್ರಮವಹಿಸಿ ಸಂಗೀತ ಅಭ್ಯಾಸ ಮಾಡು. ಅದರಿಂದ ನಿನಗೆ ಶ್ರೇಯಸ್ಸುಂಟು.

'ನೀವು ಹೀಗೆ ಮಾತಾಡಿದರೆ ನಾನು ಎದ್ದುಹೋಗಿ ಅವರನ್ನು ಕರೆಯುತ್ತೇನೆ. ನನಗೇಕೋ ಭಯವಾಗುತ್ತದೆ.'

'ಕುಳಿತುಕೋ ತಂಗಿ. ಭಾವನನ್ನು ಕರಯಬೇಡ. ಇನ್ನೊಂದು ಮುಖ್ಯ ವಿಷಯ. ಭಾವನನ್ನು ನಿನಗೆ ಒಪ್ಪಿಸುತ್ತೇನೆ. ನಾನ್ಯಾರು ಅದಕ್ಕೆ ಎಂದು ಕೇಳಬಹುದು. ನಾನ್ಯಾರೂ ಅಲ್ಲ. ಹಿಂದೆ ಇರಲಿಲ್ಲ, ಮುಂದೆ ಇರುವುದಿಲ್ಲ. ಆದರೆ ಮನಸ್ಸಿನ ಕಳಕಳಿಯಿಂದ ಇದನ್ನು ಹೇಳುತ್ತಿದ್ದೇನೆ. ತಪ್ಪಿದ್ದರೆ ಲಕ್ಷ್ಯ ಮಾಡಬೇಡ. ಭಾವನ ಗುಣ ಚಿನ್ನದಂಥಾದ್ದು. ಇನ್ನುಮುಂದೆ ನೀವು ಹಳ್ಳಿಯಲ್ಲಿ ಜೀವನ ಮಾಡಬೇಕಾದೀತು. ಕಷ್ಟವೋ ಸುಖವೋ ಭಾವನನ್ನು ನೆರಳಿನಂತೆ ಅನುಸರಿಸು. ಅವರನ್ನು ಚನ್ನಾಗಿ ನೋಡಿಕೋ. ಅವರೇ ನಿನ್ನ ಸರ್ವಸ್ವ, ದೇವರು, ಎಲ್ಲಾ. ಇದನ್ನು ಮರೆಯಬೇಡ. ನಿನ್ನ ಜೀವನ ಖಂಡಿತ ಸ್ವರ್ಗವಾಗುವುದು.'

'ನಾನಿನ್ನು ಕೇಳಲಾರೆ. ಇದೇನು ನಮ್ಮನ್ನು ಬಿಟ್ಟು ಹೋಗುತ್ತಿರುವಂತೆ ಮಾತಾಡುತ್ತೀರಿ?'

'ನಾನು ಹೊರಟುಹೋದರೆ ನಿನಗೆ ದುಃಖವಾಗುತ್ತದೆಯೇ ತಂಗಿ?'

'ಅಂದಿನದನ್ನು ನೀವಿನ್ನೂ ಮರೆತಿಲ್ಲ. ನೀವಿಲ್ಲದಿದ್ದರೆ ನಾವು ಹೇಗೆ ಬದುಕುತ್ತೇವೆಯೋ ಅದೇ ಸಂಶಯ. ನಮ್ಮನ್ನು ಬಿಟ್ಟು ಎಲ್ಲಿಯೂ ಹೋಗಬೇಡಿ.'

'ನನ್ನ ಜೀವನ ಸಾರ್ಥಕವಾಯಿತು ತಂಗಿ! ನನಗೆ ಈ ಕ್ಷಣವೇ ಸಾವು ಬಂದರೂ ನನಗೆ ದುಃಖವಿಲ್ಲ.'

'ಮತ್ತೆ ಸಾವಿನ ಮಾತಾಡುತ್ತೀರಲ್ಲಾ. ಒಳಿತು ಎನ್ನಿ.'

'ಇನ್ನು ಹೋಗು ತಂಗಿ; ಭಾವನನ್ನು ಕಳಿಸು. ನೀನೂ ಕೆಲಸ ಮುಗಿಸಿಕೊಂಡು ಬಾ. ಈ ದಿನವೇನೋ ಹಾಡುವ ಮನಸ್ಸಾಗಿದೆ.

* * * *

ಲಲಿತೆ ರಾಗದಮೇಲೆ ರಾಗ ಎತ್ತಿ ಹಾಡುತ್ತಿದ್ದಳು. ಕಾಮಾಕ್ಷಿ, ರಂಗಣ್ಣ ಸುಮ್ಮನೇ ಬೊಂಬೆಗಳಂತೆ ಕೇಳುತ್ತ ಕುಳಿತಿದ್ದರು. ಎಷ್ಟುಹೊತ್ತಾದರೂ ಅವಳು ನಿಲ್ಲಿಸಲೊಲ್ಲಳು. ರಂಗಣ್ಣನೆಂದ: 'ಈ ದಿನಕ್ಕೆ ಸಾಕು ಲಲಿತ. ಬಹಳ ಶ್ರಮವಾಗಿದೆ ನಿನಗೆ. ಮೊದಲೇ ಬಹಳ ಬಡವಾಗಿಹೋಗಿರುವಿ.'

'ಇಲ್ಲ ಭಾವ, ನನಗೆ ಬಹಳ ಸುಖವಾಗುತ್ತಿದೆ. ಏನೋ ಹಾಡೋಣ ಎಂದು ಉತ್ಸಾಹ ಉಕ್ಕಿಬರುತ್ತಿದೆ. ನಾಳೆನಿಂದ ನಿಮಗೆ ಕಾಮಾಕ್ಷಿಯೇ ಸಂಗೀತದ ಉಣಿಸು ಉಣಿಸುತ್ತಾಳೆ.'

'ಇದೆಂತಹ ಮಾತು ಲಲಿತ? ನಾಳೆ ನೀನು ಎಲ್ಲಿ ಹೋಗುವಿ. ಪುನಃ ಏನಾದರೂ ಬಿಟ್ಟುಹೋಗುವ ಸೂಚನೆಯೇನು ಇದು?'

'ಏನೂ ಗಾಬರಿಬೀಳಬೇಡಿ ಭಾವ. ನನ್ನ ವೀಣೆಯನ್ನು ನಾಳಿನಿಂದ ತಂಗಿಗೆ ಕೊಡುತ್ತೇನೆಂದು ಹೇಳಿದ್ದೇನೆ ಅಷ್ಟೆ.'

'ಅಷ್ಟೆತಾನೆ! ಸುಮ್ಮನೇ ಹೆದರಿಸಿದೆ. ಅವಳಿಗೆ ಕೊಟ್ಟರೇನಂತೆ, ಅದು ನಿನ್ನದೇ ಅಲ್ಲವೇನು? ನೀನು ಬಿಟ್ಟರೂ ಅದು ನಿನ್ನ ಬಿಡಬೇಕಲ್ಲ. ಸಾಕು ಬಿಡು, ಸ್ವಲ್ಪ ಸುಧಾರಿಸಿಕೋ.'

'ಇದೇ ಕೊನೆಯ ಹಾಡು, ಮುಗಿಸಿಬಿಡುತ್ತೇನೆ.'

'ನೀವೇ ಪಾಲಿಂಚುರಾ, ನಿನ್ನು ನಮ್ಮಿನಾನುರಾ'

ಲಲಿತೆಯ ಶಾರೀರದಲ್ಲಿ ಹೇಳಲಾಗದ ಮಧುರತೆಯಿದ್ದಿತು. ಈ ಆನಂದದ ಭರದಲ್ಲಿ ಹಿಂದೊಮ್ಮೆ ಆದಂತೆ ರಂಗಣ್ಣನಿಗೆ ಕಹಿಯ ಅನುಭವವಾಯಿತು. ಹಿಂದಿನ ಘಟನೆಗಳ ನೆನಪಾಗಿ ಮನಸ್ಸು ಕಳವಳದಿಂದ ಉದ್ವೇಗಹೊಂದಿತು.

ಲಲಿತೆ ವೀಣೆ ಕೆಳಗಿಟ್ಟು ಸ್ವಲ್ಪ ಮಲಗುತ್ತೇನೆಂದು ಎದ್ದುಹೋದಳು. ರಂಗಣ್ಣ, ಕಾಮಾಕ್ಷಿ ಇಬ್ಬರೂ ಮೂಕರಾಗಿ ಕುಳಿತಿದ್ದರು. ವಿಷಾದದ ಛಾಯೆ ಇಬ್ಬರ ಮುಖದಮೇಲೂ ಬಿದ್ದಿತ್ತು. ಇಬ್ಬರೂ ಯಾವುದೋ ಅವ್ಯಕ್ತ ಯಾತನೆ ಯನ್ನನುಭವಿಸುತ್ತಿದ್ದರು. ಸ್ವಲ್ಪಹೊತ್ತಿನಲ್ಲಿಯೇ ಕೋಣೆಯಿಂದ ನರಳುವಿಕೆಯು ಕೇಳಿಬಂದಿತು. ಇಬ್ಬರೂ ಎದ್ದು ಹೊಸ್ತಿಲನ್ನು ದಾಟುವುದರೊಳಗೆ 'ಭಾವ ಸ್ವಲ್ಪ ಬನ್ನಿ, ತಂಗೀ ಸ್ವಲ್ಪ ಬಾ' ಎಂಬ ಕರೆ ಕೇಳಿಸಿತು. ಇಬ್ಬರೂ ಹೋಗಿ ಲಲಿತೆಯ ಹಾಸಿಗೆಯ ಪಕ್ಕದಲ್ಲಿ ಕುಳಿತರು.

'ಭಾವ, ಏನೋ ಆಗುತ್ತಿದೆ. ನಾನು ಇನ್ನು ಸ್ವಲ್ಪವೇಹೊತ್ತು ಬದುಕುವು ದೆಂದು ತೋರುತ್ತಿದೆ.'

'ಏನಾಗುತ್ತಿದೆ ಲಲಿತ? ಹೇಳು, ಬೇಗ ಹೇಳು. ಈ ಕ್ಷಣ ಡಾಕ್ಟರನ್ನು ಕರೆತರುತ್ತೇನೆ.'

'ಏನೋ ಹೇಳಲಾರೆ. ಏನೋ ಸಂಕಟವಾಗುತ್ತಿದೆ.'

'ಈಕ್ಷಣ ಬಂದೆ ಕಾಮಾಕ್ಷಿ, ಏನಾದರೂ ಕುಡಿಯಲು ಕೊಡು. ತಲೆಗೆ ತಣ್ಣೀರುಬಟ್ಟೆ ಇಡು. ಎರಡು ನಿಮಿಷದಲ್ಲಿ ಬಂದೆ'

'ಕೂತುಕೊಳ್ಳಿ ಭಾವ; ಏನೂ ಆಗುವುದಿಲ್ಲ ನನಗೆ'

'ಇಲ್ಲ ಲಲಿತ, ನಿನಗೇನೋ ಆಗಿದೆ. ಈಗ ಬಂದುಬಿಟ್ಟೆ'

'ಎಲ್ಲೂ ದಯವಿಟ್ಟು ಹೋಗಬೇಡಿ ಭಾವ. ನಿಮ್ಮೊಡನೆ ಮಾತಾಡುವುದಿದೆ'

'ಕಾಮಾಕ್ಷಿ, ನೀನಾದರೂ ಹೋಗಿ ಆ ಬೀದಿ ಮೂಲೇಲಿದ್ದಾರಲ್ಲ ಡಾಕ್ಟರು ಅವರಿಗೆ ಕೂಡಲೇ ಬರಬೇಕೂಂತ ಹೇಳು, ಬೇಗ ಹೋಗು.'

'ತಂಗೀನೂ ಕಳಿಸಬೇಡಿ ಭಾವ. ಅವಳೂ ಇರಲಿ. ನನ್ನ ಮಾತು ಇನ್ನು ಸ್ವಲ್ಪಹೊತ್ತು ನಡೆಸಿಕೊಡಿ. ಆಮೇಲೆ ನಿಮಗೆ ಬೇಕಾದರೆ ಡಾಕ್ಟರನ್ನಾದರೂ ಕರೆಯಿರಿ, ಯಾರನ್ನಾದರೂ ಕರೆಯಿರಿ.'

ರಂಗಣ್ಣ ಹತಾಶನಾಗಿ ಕುಳಿತುಬಿಟ್ಟ.

'ತಂಗೀ, ಸ್ವಲ್ಪ ನೀರು'

ಕಾಮಾಕ್ಷಿ ಹೋಗಿ ನೀರು ತಂದಳು.

'ಭಾವ, ತಂಗೀನ ಪ್ರೀತಿಯಿಂದ ಕಾಣಿರಿ. ಇನ್ನು ಅವಳಿಗೆ ನೀವು, ನಿಮಗೆ ಅವಳು. ಉಳಿದವರೆಲ್ಲಾ ಎಲ್ಲೋ ಸ್ವಲ್ಪಕಾಲ ಮಾತ್ರ. ಸಮುದ್ರದ ಉಬ್ಬರದಂತೆ. ಪ್ರೀತಿಯ ಬೆಸುಗೆ ಸರಿಯಾಗಿ ಹಿಡಿದಿದ್ದರೆ ಸಂಸಾರದಲ್ಲಿ ವಿರಸಕ್ಕೆ ಕಾರಣವಿರುವುದಿಲ್ಲ.'

ಇಬ್ಬರೂ ನೀರವವಾಗಿ ಕೇಳುತ್ತಿದ್ದರು. ಮನಸ್ಸಿನೊಳಗಿನ ಯಾವುದೋ ಧ್ವನಿಯು 'ಇದೇ ಕೊನೆ' ಎಂದು ಹೇಳುತ್ತಿತ್ತು.

'ಭಾವ-ತಂಗಿ, ನಾನು ಹೋದಮೇಲೆ ನನ್ನನ್ನು ಮರೆತುಬಿಡಿ. ನಿಮ್ಮ ಜೀವನದಲ್ಲಿ ಅನಪೇಕ್ಷಿತೆಯಾಗಿ ಬಂದು ಸೇರಿಕೊಂಡು ನಿಮಗೆಲ್ಲಾ ವಿಪರೀತ ತೊಂದರೆ ಕೊಟ್ಟೆ. ಈಗ ನಿಮ್ಮ ಅನುಮತಿಯಿಲ್ಲದೇ ಹೊರಟುಹೋಗುತ್ತಿದ್ದೇನೆ. ಈ ಅವಿನಯವನ್ನು ನೀವಿಬ್ಬರೂ ಕ್ಷಮಿಸಿ.'

'ತಂಗಿ, ನಾನು ನಿನಗೆ ಎಷ್ಟು ತೊಂದರೆ ಕೊಟ್ಟಿದ್ದರೂ ದಯವಿಟ್ಟು ಕ್ಷಮಿಸಿ ಬಿಡು. ಕ್ಷಮಿಸಿದೆ ಎಂದು ಹೇಳಿಬಿಡು.'

'ಇದೆಂತಹ ಮಾತು ಅಕ್ಕಾ! ನಿಮ್ಮಿಂದ ನಾನೊಬ್ಬ ಹೆಂಗುಸಾದೆ. ನಾನೇ ನಿಮಗೆ ಎಷ್ಟು ಬಿರುನುಡಿಗಳಾಡಿದ್ದೇನೋ?'

'ಈಗ ನನ್ನ ಬದುಕು ಸಾರ್ಥಕವಾಯಿತು ತಂಗಿ—ನಿನ್ನ ಬಾಯಿಂದ ಅಕ್ಕಾ ಎಂದು ಕರೆಸಿಕೊಂಡು. ಎಂತಹ ಅಕ್ಕ! ನನಗೇ ನಾಚಿಕೆಯಾಗುತ್ತದೆ.'

'ನೀವು ಅಕ್ಕನಲ್ಲ. ಅಕ್ಕನಿಗಿಂತ ಹೆಚ್ಚು.'

'ತಂಗೀ, ನಿನ್ನ ಸುಖ ಅಕ್ಷಯವಾಗಲಿ ಎಂದು ಹರಸುತ್ತೇನೆ. ಅಷ್ಟೇ ನನ್ನಿಂದಾಗುವುದು.'

'..............................'

'ಭಾವ, ನನಗೆ ಬಳೇಪೇಟೆಯ ವೆಂಕಟರಮಣಸೆಟ್ಟಿ ಸ್ವಲ್ಪ ದುಡ್ಡು ಕೊಡಬೇಕು. ಅವನು ಕೊಟ್ಟರೆ—ಕೊಟ್ಟೇಕೊಡುತ್ತಾನೆ—ಅದನ್ನು ಸುಬ್ಬಾಶಾಸ್ತ್ರಿಗಳಿಗೆ

ತಲುಪಿಸಿಬಿಡಿ. ಹಿಂದೆಂದೋ ಅವರಿಂದ ಸಾಲ ತೆಗೆದಿದ್ದೆ–ಬಹಳ ಹಿಂದೆ. ಅವರ ಋಣದಲ್ಲಿ ನಾನೇಕೆ ಬೀಳಲಿ? ಅವರು ಇನ್ನೇನು ಹೇಳಿದರೂ ನಂಬಬೇಡಿ ಭಾವ

'..................................'

'ಭಾವ, ನನ್ನ ವಿಚಾರವನ್ನು ಚಂದ್ರೂಗೆ ತಿಳಿಸಿ—ಸಾಧ್ಯವಾದರೆ'

'..................................'

'ಭಾವ, ನನ್ನ ಈ ಪಾಪಿ ಶರೀರದಲ್ಲುಳಿದುದನ್ನು ತುಂಗೆಯ ನಿರ್ಮಲ ಜಲದಲ್ಲಿ ಕದಡಿಬಿಡಿ. ತುಂಗೆ ಪವಿತ್ರಳು, ಪಾಪನಾಶಿನಿ. ಅವಳ ಪಡದಲ್ಲಿ ನಾನು ಆಡುತ್ತಿದ್ದಷ್ಟು ದಿನ ಶುದ್ಧಳಾಗಿಯೇ ಇದ್ದೆ.

'..................................'

'ತಂಗಿ–ಭಾವ, ನನ್ನ ಕೈ ಹಿಡಿದುಕೊಳ್ಳಿ ; ಹೋಗಿಬರುತ್ತೇನೆ.'

'ಅಯ್ಯೋ ಲಲಿತ, ಏನಾದರೂ ತೆಗೆದುಕೊಂಡುಬಿಟ್ಟೆಯಾ? ಅದೇಕೆ ನಮ್ಮನ್ನು ಬಿಟ್ಟು ಹೋಗುತ್ತೀ? ನಾವೇನು ಮಾಡಿದೆವು ನಿನಗೆ?'

ಯಾವುದೋ ಯಾತನೆಯನ್ನು ತಡೆದಿಡಲು ಇದುವರೆಗೆ ಮಾಡಿದ್ದ ಲಲಿತೆಯ ಸಾಹಸ ವ್ಯರ್ಥವಾಯಿತು. ಸಂಕಟದಿಂದ ವಿಪರೀತ ನರಳತೊಡಗಿದಳು. ಮಾತು ನಿಂತುಹೋಯಿತು. ರಂಗಣ್ಣ ಕಾಮಾಕ್ಷಿಯರ ಕೈಯಲ್ಲಿದ್ದ ಕೈಗಳು ತಣ್ಣಗಾದವು

'ಅಕ್ಕಾ! ಅಯ್ಯೋ ಅಕ್ಕಾ!' ಎಂದು ಕಿರುಚಿದಳು ಕಾಮಾಕ್ಷಿ.

ಅಳುವಿನ ಮಧ್ಯದಲ್ಲಿ ರಂಗಣ್ಣ ಹೇಳಿದ:

"ನೊಂದ ಜೀವ ತಣ್ಣಗಾಯ್ತು ; ದುಂಬಿಯ ಕನಸು ಮಣ್ಣುಗೂಡಿತು

---

ಶ್ರೀ ಭಾವನಾ ಪ್ರೆಸ್, ೨೮ ಗೌಡನಪೇಟೆ, ಬೆಂಗಳೂರು ನಗರ.